# ಕುವೆಂಪು ಇಂಗ್ಲಿಷ್ ಕವಿತೆಗಳ ಅಭಿವ್ಯಕ್ತಿ ಮತ್ತು ಆಶಯಗಳ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ


ಸಂಶೋಧಕರು

**ಪ್ರಿಯಾಂಕ ಎಂ.ಜಿ**

(ನೋಂದಣಿ ಸಂಖ್ಯೆ : ೧೬೦೨೦೧೦೨೦೦೩೧)

ಮಾರ್ಗದರ್ಶಕರು

**ಡಾ. ಕೆ. ಸಿ. ಶಿವಾರೆಡ್ಡಿ**

ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು

**ಜಿ. ಉಮಾಮಹೇಶ್ವರ**

ಸಹ ಪ್ರಾಧ್ಯಾಪಕರು, ಇಂಗ್ಲಿಷ್ ವಿಭಾಗ

ವಿ.ಎನ್. ಕಾಲೇಜು, ಹೊಸಪೇಟೆ, ಬಳ್ಳಾರಿ.





ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೨೦



1054

8K0.9
PRA K

# ಕುವೆಂಪು ಇಂಗ್ಲಿಷ್ ಕವಿತೆಗಳ ಅಭಿವ್ಯಕ್ತಿ ಮತ್ತು ಆಶಯಗಳ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ


ಸಂಶೋಧಕರು

**ಪ್ರಿಯಾಂಕ ಎಂ.ಜಿ**

ನೊಂದಣಿ ಸಂಖ್ಯೆ : ೧೬೦೨೦೧೦೨೦೦೩೧

ಮಾರ್ಗದರ್ಶಕರು

**ಡಾ. ಕೆ. ಸಿ. ಶಿವಾರೆಡ್ಡಿ**

ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು

**ಜಿ. ಉಮಾಮಹೇಶ್ವರ**

ಸಹ ಪ್ರಾಧ್ಯಾಪಕರು, ಇಂಗ್ಲಿಷ್ ವಿಭಾಗ

ವಿ.ಎನ್. ಕಾಲೇಜು, ಹೊಸಪೇಟೆ, ಬಳ್ಳಾರಿ.





ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

ಪ್ರಿಯಾಂಕ ಎಂ.ಜಿ ಇವರು ನಮ್ಮ ಮಾರ್ಗದರ್ಶನದಲ್ಲಿನ **"ಕುವೆಂಪು ಅವರ ಇಂಗ್ಲಿಷ್ ಕವಿತೆಗಳ ಅಭಿವ್ಯಕ್ತಿ ಮತ್ತು ಆಶಯಗಳ ಅಧ್ಯಯನ"** ಎಂಬ ವಿಷಯವನ್ನು ಕುರಿತ ಪಿ.ಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ :** 07.02.2020

**ಸ್ಥಳ :** ಬೆಂಗಳೂರು

**ಸಹ ಮಾರ್ಗದರ್ಶಕರು**

**ಜಿ. ಉಮಾಮಹೇಶ್ವರ**

ಸಹ ಪ್ರಾಧ್ಯಾಪಕರು, ಇಂಗ್ಲಿಷ್ ವಿಭಾಗ
ವಿ.ಎನ್. ಕಾಲೇಜು, ಹೊಸಪೇಟೆ, ಬಳ್ಳಾರಿ.

**ಮಾರ್ಗದರ್ಶಕರು**

**ಡಾ. ಕೆ.ಸಿ. ಶಿವಾರೆಡ್ಡಿ**

ಮುಖ್ಯಸ್ಥ / ಪ್ರಾಧ್ಯಾಪಕ
ಡಾ. ರಾಜಕುಮಾರ್
ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು
ವಿಸ್ತರಣಾ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಸಂಶೋಧಕರ ಪ್ರಮಾಣ ಪತ್ರ

**"ಕುವೆಂಪು ಇಂಗ್ಲಿಷ್ ಕವಿತೆಗಳ ಅಭಿವ್ಯಕ್ತಿ ಮತ್ತು ಆಶಯಗಳ ಅಧ್ಯಯನ"** ವಿಷಯವನ್ನು ಕುರಿತ ಪಿಎಚ್.ಡಿ ಸಂಶೋಧನಾ ಮಹಾಪ್ರಬಂಧವನ್ನು ಮಾರ್ಗದರ್ಶಕರಾಗಿ **ಡಾ.ಕೆ.ಸಿ.ಶಿವಾರೆಡ್ಡಿ** ಮತ್ತು ಸಹ ಮಾರ್ಗದರ್ಶಕರಾಗಿ **ಜಿ.ಉಮಾಮಹೇಶ್ವರ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿಯ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಪ್ರಿಯಾಂಕ ಎಂ.ಜಿ**
ಸಂಶೋಧನಾ ಅಭ್ಯರ್ಥಿ
ಗೋಕುಲ, ಮತ್ತಿಕೆರೆ,
ಬೆಂಗಳೂರು – 560054
ಕರ್ನಾಟಕ ರಾಜ್ಯ

# ಪರಿವಿಡಿ

# ಅಧ್ಯಾಯ–೧

## ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ.

## ೧.೧. ಪ್ರಸ್ತಾವನೆ

ಆಧುನಿಕ ಭಾರತೀಯ ಸಾಹಿತ್ಯ ಬೆಳವಣಿಗೆಯಲ್ಲಿ ಇಂಗ್ಲೀಷ್ ಅತಿ ಮುಖ್ಯ ಪ್ರಭಾವವನ್ನು ಬೀರಿದೆ. ವ್ಯಾಪಾರಕ್ಕೆ ಬಂದ ಬ್ರಿಟಿಷರು ಭಾರತವನ್ನು ವಸಾಹುತು ಶಾಹಿ ರಾಷ್ಟ್ರವನ್ನಾಗಿ ಮಾಡಿಕೊಳ್ಳುವುದರ ಮೂಲಕ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕವಾಗಿ ಪ್ರಭಾವವನ್ನು ಬೀರತೊಡಗಿದರು. ಅನಿವಾರ್ಯ ಮತ್ತು ಅವಶ್ಯಕತೆಯ ಹಿನ್ನೆಲೆಯಲ್ಲಿ, ಭಾರತೀಯರು ತಮ್ಮದೇ ಆದ ಕ್ಷೇತ್ರಗಳಲ್ಲಿ ವಿಭಿನ್ನವಾಗಿ ಚಿಂತಿಸಲು ಮುಂದಾದರು. ಆಂಗ್ಲರ ಇಂಗ್ಲೀಷ್ ಸಾಹಿತ್ಯದ ಪ್ರೇರಣೆಯಿಂದ ಭಾರತೀಯ ಸಾಹಿತ್ಯದ ಭಾಷೆಗಳು ಹೊಸ ಚಿಂತನೆಗೆ ತೆರೆದುಕೊಂಡವು. ಅದರ ಪರಿಣಾಮದಿಂದ ಶತಶತಮಾನಗಳಿಂದ ದೇಶಿಯವಾಗಿ ಜಡ್ಡುಗಟ್ಟಿದ ಭಾರತೀಯ ಸಾಹಿತ್ಯದ ಹೊಸ ಚೇತನಕ್ಕೆ ಇಂಗ್ಲೀಷ್ ಪ್ರೇರಣೆಯಾಯಿತು. ಅದರಲ್ಲೂ ಪ್ರಮುಖವಾಗಿ ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಇಂಗ್ಲೀಷ್ ದಟ್ಟವಾದ ಪ್ರಭಾವವನ್ನು ಬೀರತೊಡಗಿತು.

ಆಂಗ್ಲರ ಆಡಳಿತ ಮತ್ತು ಆಂಗ್ಲ ಭಾಷೆಯ ಪರಿಣಾಮದಿಂದ ಆಧುನಿಕ ಕನ್ನಡ ಸಾಹಿತ್ಯ ಉದಯವಾಗಲು ಕಾರಣವಾಯಿತು. ಆಧುನಿಕ ಪೂರ್ವ ಕನ್ನಡದ 'ದೇವರು', 'ದೆವ್ವ'ದಂತಹ ಪರಿಕಲ್ಪನೆಗಳು ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿದವು. ಆಂಗ್ಲರ ನವೋದಯ ಸಾಹಿತ್ಯದ ಬರವಣಿಗೆಗಳು ಕನ್ನಡದಲ್ಲಿ ಬರತೊಡಗಿದವು. ಕಥೆ, ಕಾದಂಬರಿ, ಕಾವ್ಯಗಳಾದಿಯಾಗಿ ಅನೇಕ ಪ್ರಕಾರಗಳು ಆಧುನಿಕತೆಯಲ್ಲಿ ವಿಭಿನ್ನವಾಗಿ ಯೋಚಿಸತೊಡಗಿದವು. ಆಂಗ್ಲ ಭಾಷೆಯ ಕಲಿಕೆಯಿಂದ ಕನ್ನಡ ಹೊಸ ರಚನೆಕಾರರ ಉದಯಕ್ಕೆ ಕಾರಣವಾಗತೊಡಗಿತು. ಕೆಲವರು ನೇರವಾಗಿ ಇಂಗ್ಲಿಷ್ ಭಾಷೆಯ ಮೂಲಕ ಬರಹಗಾರರಾಗಿ ಹೊರಹೊಮ್ಮ ತೊಡಗಿದರು. ಇನ್ನು ಕೆಲವರು ಇಂಗ್ಲಿಷ್ ಸಾಹಿತ್ಯದ ಚಿಂತನೆಯ ಪ್ರಭಾವವನ್ನು ತಮ್ಮದೇ ಆದ ಬರವಣಿಗೆಯ ಮೂಲಕ ಅಭಿವ್ಯಕ್ತಿಸತೊಡಗಿಸಿದರು. ಅಂಥ ಎರಡೂ ಪ್ರಕಾರಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಂಡವರಲ್ಲಿ ಕುವೆಂಪುರವರು ಪ್ರಮುಖರಾಗುತ್ತಾರೆ.

ಕುವೆಂಪು ತಮ್ಮ ಕೃತಿಗಳಲ್ಲಿ ಕವಿ, ಕಾವ್ಯ, ಅದರ ಉದ್ದೇಶ, ಕಾವ್ಯದ ಪ್ರಯೋಜನ ಮತ್ತು ಅವರ ಗುರಿಗಳನ್ನು ಕುರಿತು ಗಾಢವಾಗಿ ಚಿಂತಿಸಿದ್ದಾರೆ. ಈ ಚಿಂತನೆಯು ಪೂರ್ವ–ಪಶ್ಚಿಮದ ತಾತ್ವಿಕತೆಯಲ್ಲಿಯೂ ಭಾರತೀಯ ಹಾಗೂ ಕನ್ನಡ ಕಾವ್ಯಗಳಶಾಸ್ತ್ರ ಜಿಜ್ಞಾಸೆಯಲ್ಲಿಯೂ ಶೋಧಿಸಿಕೊಂಡ ವಿಚಾರಗಳಲ್ಲಿ ಅವರ ಕಾವ್ಯ ಚಿಂತನೆಯ ನೆಲೆಗಳನ್ನು ಕಾಣಬಹುದು.

ಕುವೆಂಪು ತನ್ನ ವ್ಯಕ್ತಿ ವಿಶಿಷ್ಟವಾದ ಧ್ವನಿಯಿಂದ, ಉಜ್ವಲವಾದ ತೇಜಸ್ಸಿನಿಂದ, ವೈವಿಧ್ಯ ಹಾಗೂ ವಿಸ್ತಾರಗಳಿಂದ ಮತ್ತು ಲೋಕಾಕರ್ಷಕವಾದ ಲಕ್ಷಣಗಳಿಂದ ಕುವೆಂಪು ಅವರ ಕವಿತೆ, ೨೦ನೇ ಶತಮಾನದ ಕನ್ನಡ ಕಾವ್ಯದ ಒಂದು ಮಹತ್ವದ ಭಾಗವಾಗಿದೆ. ಮಲೆನಾಡಿನ ಅಪ್ರತಿಷ್ಠಿತ ಸಾಮಾಜಿಕ ನೆಲೆಯಿಂದ ಹುಟ್ಟಿ ಬಂದ, ಆ ಮಲೆನಾಡಿನ ಪರ್ವತಾರಣ್ಯ ಚೇತನದ ಮೊದಲ ಪ್ರತಿನಿಧಿ ಎಂಬಂತೆ ತೋರುವ ಈ ಕವಿ ತನ್ನ ಅಭಿವ್ಯಕ್ತಿಯನ್ನು ಮೊಟ್ಟಮೊದಲಿಗೆ ಕಂಡುಕೊಂಡದ್ದು ಇಂಗ್ಲಿಷಿನಲ್ಲಿ ಎನ್ನುವುದು ಸ್ವಾರಸ್ಯದ ಸಂಗತಿಯಾಗಿದೆ. ಇಂದು ಕನ್ನಡ ಸಾಹಿತ್ಯ ವಿಮರ್ಶೆ ಕುವೆಂಪು ಅವರನ್ನು ನವೋದಯ ಸಾಹಿತ್ಯ ಸಂದರ್ಭದ ಪ್ರಮುಖ ಸಾಹಿತಿಯೆಂದು ವರ್ಣಿಸುವುದಾದರೂ, ಅವರ ಕಾವ್ಯಾಭಿವ್ಯಕ್ತಿಯ ಮೊದಲ ದಿನಗಳಲ್ಲಿ ಅವರ ಜೀವನ ವಾಹಿನಿ, ನವೋದಯದ ಮುಖ್ಯ ಪ್ರವಾಹಕ್ಕೆ ಸಮಾನಾಂತರವಾದ ದೂರದಲ್ಲಿಯೆ ಹರಿಯುತ್ತ ತನ್ನ ಪಾಡಿಗೆ ತಾನು ತನ್ನದಲ್ಲದ ಭಾಷೆಯೊಂದರಲ್ಲಿ ತನ್ನ ಅಭಿವ್ಯಕ್ತಿಯನ್ನು ಕಂಡುಕೊಳ್ಳುತಿತ್ತು. ಈ ಪ್ರಯತ್ನದ ಪರಿಣಾಮವಾಗಿ, ಅವರಿನ್ನೂ ಮೈಸೂರಿನ ವೆಸ್ಲಿಯನ್ ಮಿಷನ್ ಹೈ ಸ್ಕೂಲಿನ ಎಸ್.ಎಸ್.ಎಲ್.ಸಿ. ತರಗತಿಯ ವಿದ್ಯಾರ್ಥಿಯಾಗಿರುವಾಗಲೆ, ಅಂದರೆ ತಮ್ಮ ೧೮ನೆಯ ವಯಸ್ಸಿನಲ್ಲಿ The Beginner's Muse ಎಂಬ ಹದಿನಾರು ಪುಟಗಳ ಇಂಗ್ಲಿಷ್ ಭಾಷೆಯ ಕಿರುಕವನ ಸಂಗ್ರಹವನ್ನು ಪ್ರಕಟಿಸುತ್ತಾರೆ. ಮುಂದೆ Alien harpನ (ಪರಕೀಯ ತಂತಿವಾದ್ಯವನ್ನು) ಹಿಡಿದು, ಆ ಕಿರಿಯ ವಯಸ್ಸಿಗೆ 'ಕವಿ' ಎಂದು ಹೆಸರು ಮಾಡಿದವರು ಕುವೆಂಪು.

ಅವರ ಈ ಎರಡು ಕವನ ಸಂಕಲನಗಳ ಕವನಗಳನ್ನು ಮತ್ತು ನೆನಪಿನ ದೋಣಿಯಲ್ಲಿ ಉಲ್ಲೇಖವಾಗಿರುವ ಕೆಲವು ಕವನಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಆ ಕವನಗಳನ್ನು ಅಧ್ಯಯನದ ದೃಷ್ಟಿಯಿಂದ ಈ ರೀತಿಯಲ್ಲಿ ವಿಂಗಡಿಸಿಕೊಂಡಿದ್ದೇನೆ– ನಿಸರ್ಗ ಕುರಿತ ವಿಚಾರಗಳು, ದೈವದ ಪರಿಕಲ್ಪನೆ, ಆಧ್ಯಾತ್ಮಿಕದ ಪರಿಕಲ್ಪನೆ, ಸಾಮಾಜಿಕ ಚಿಂತನೆ, ರಾಷ್ಟ್ರೀಯತೆಯ ವಿಚಾರಗಳು, ಸ್ಥಳೀಯತೆಯ ವಿಚಾರಗಳು, ಪ್ರೇಮಕಾವ್ಯ, ಸಂಕೀರ್ಣ ಕವಿತೆಗಳು ಈ ವಿಷಯಗಳನ್ನು ಸಂಬಂಧಿಸಿದ ಕವಿತೆಗಳಾಗಿದ್ದು, ಆ ಇಂಗ್ಲಿಷ್ ಕವಿತೆಗಳ ಅಭಿವ್ಯಕ್ತಿ ಮತ್ತು ಆಶಯಗಳ ಅಧ್ಯಯನದ ಜೊತೆಗೆ ಮಾಡಿ ಆ ಕವನಗಳನ್ನು ವಿಶ್ಲೇಷಣೆ ಮಾಡಿ ಮತ್ತು ಆ ವಿಶ್ಲೇಷಣೆಯ ಭಾವ ಮೌಲ್ಯವನ್ನು ಗ್ರಹಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

## ೧.೨. ಅಧ್ಯಯನದ ಉದ್ದೇಶ, ವ್ಯಾಪ್ತಿ

ಎಳೆತನದಲ್ಲಿ ಇಂಗ್ಲೀಷ್ ಸಾಹಿತ್ಯವನ್ನು ಆದರ್ಶವಾಗಿಟ್ಟುಕೊಂಡಂತಹ ಕುವೆಂಪು ಅವರು ಮೊದಲ ಸಾಹಿತ್ಯವನ್ನು ಇಂಗ್ಲೀಷ್‌ನಲ್ಲಿಯೇ ಬರೆದರು. ಆದರೆ ಆ ಇಂಗ್ಲೀಷ್ ಸಾಹಿತ್ಯ ಬರೆಯುವ ಅವರ ಉದ್ದೇಶಗಳು ಹೇಗೆ ವೈಫಲ್ಯದಿಂದ ಅಂತ್ಯಗೊಂಡು, ಆ ವೈಫಲ್ಯವೇ ಅಡಿಗಲ್ಲಾಗಿ ಅವರಿಗೆ ವೈವಿಧ್ಯಮಯವಾದ ಬೇರೆ ಬೇರೆ ಸಾಹಿತ್ಯಗಳನ್ನು ರಚಿಸಲು ಹೇಗೆ ಕಾರಣವಾಯಿತು? ಮತ್ತು ಅದರಿಂದ ಅವರಿಗೆ ಅವರ ಬದುಕಿಗೆ ಹೊರಳು ಸಿಕ್ಕಿದ ಬಗೆಯಾದರೂ ಹೇಗೆ?

ಮುಂದೆ ಅವರಿಗೆ ಸಿಕ್ಕಿದ ಹೊರಳಿನಲ್ಲಿ ಅವರು ಮಾಡಿದ ಸಾಧನೆಗಳಿಗೆ ಆಕರಗಳು ಹೇಗೆ ಅವರ ಇಂಗ್ಲೀಷ್ ಸಾಹಿತ್ಯದಲ್ಲಿತ್ತು ಎನ್ನುವುದನ್ನು ಕಂಡುಕೊಳ್ಳುವುದು ನನ್ನ ಸಂಶೋಧನೆಯ ಗುರಿಯಾಗಿದೆ.

ಅಂದರೆ, ಎಳವೆಯಲ್ಲೇ ಇಂಗ್ಲಿಷ್ ಸಾಹಿತ್ಯದತ್ತ ಆಕರ್ಷಿತರಾದ ಕುವೆಂಪು, ಇಂಗ್ಲೀಷ್ ಸಾಹಿತಿಗಳಿಗೆ ಸಿಕ್ಕಂತಹ ಸ್ಥಾನ ಮಾನಗಳನ್ನು ತಾನು ದೊರಕಿಸಿಕೊಳ್ಳಬೇಕು ಎನ್ನುವಂತಹ ಅಭೀಪ್ಸೆಯಿಂದ ಮಾಡಿದಂತಹ ಇಂಗ್ಲೀಷ್ ಸಾಹಿತ್ಯದ ಕಾಯಕ, ಜೆ.ಎಚ್.ಕಸೀನ್ಸ್ ಕಡೆಯಿಂದ ಆದಂತಹ ಮೌಲ್ಯಮಾಪನ ಕುವೆಂಪು ಅವರಿಗೆ ಕನ್ನಡದತ್ತ ಹೊರಳಲು ಹೊರಳು ದಾರಿಯನ್ನು ಸೃಷ್ಟಿ ಮಾಡಿಕೊಟ್ಟಿತು. ಹಾಗೆ ಸೃಷ್ಟಿಯಾದಂತಹ ಮಾರ್ಗದಲ್ಲಿ ಕುವೆಂಪು ಕನ್ನಡ ಸಾಹಿತ್ಯವನ್ನು ಬೇರೆ ಬೇರೆ ಬಗೆಗಳಲ್ಲಿ ಅನ್ವೇಷಣೆ ಮಾಡಿ ಬರೆದರು. ಅ ಕನ್ನಡ ಸಾಹಿತ್ಯದ ಮುಂದಿನ ಹೊರಚಾಚುವೇನಿತ್ತು, ಅದು ಹೇಗೆ ಈ ಇಂಗ್ಲಿಷ್ ಕಾವ್ಯದ ರಚನೆಯ ಹಿಂದಿನ ಮನೋಧರ್ಮ ದಿಂದ ಪ್ರಭಾವಿತವಾಗಿತ್ತು, ತರುವಾಯ ಆ ಕನ್ನಡದ ಅವರ ಕಾವ್ಯದ ಮತ್ತು ಅವರ ಬೇರೆ ಸಾಹಿತ್ಯದ ಒಟ್ಟು ಮುಂದುವರಿಕೆಗೆ ಅವರೇ ಬರೆದಂತಹ ಇಂಗ್ಲೀಷ್ ಸಾಹಿತ್ಯ ಹೇಗೆ ಅಡಿಪಾಯವಾಗಿ ನಿಂತುಕೊಂಡಿತು. ಮುಂದೆ ಅವರು ಇಂಗ್ಲೀಷ್ ಸಾಹಿತ್ಯಗಳಲ್ಲಿ ಕಂಡುಕೊಂಡಂತಹ ಆದರ್ಶಗಳು ಹೇಗೆ ಕುವೆಂಪು ಅವರ ಕನ್ನಡ ಸಾಹಿತ್ಯವನ್ನು ಪ್ರವೇಶ ಮಾಡಿದವು. ಇಂತಹ ಮೂಲ ವಿಚಾರಗಳನ್ನು ಶೋಧಿಸುವುದಾಗಿದೆ.

ಯಾವ ಯಾವ ಸ್ತರದಲ್ಲಿ, ಯಾವ ಯಾವ ಕಾವ್ಯದಲ್ಲಿ, ಯಾವ ಯಾವ ರೀತಿಯಲ್ಲಿ ಅದು ವ್ಯಕ್ತವಾಯಿತು. ಈ ಅಂಶಗಳು ನನ್ನ ಅಧ್ಯಯನದಲ್ಲಿ ಬೇರೆ ಬೇರೆ ಅಭಿವ್ಯಕ್ತಿಗಳಲ್ಲಿ ಅದು ಹೇಗೆ ಅದರ ಮೂಲ ಧಾತುಗಳು ಸೇರಿಕೊಳ್ಳುತ್ತಾ ಹೋದವು, ಅವರ ಕಾವ್ಯ ಮನೋಧರ್ಮ ಹೇಗೆ ರೂಪುಗೊಂಡಿತು ಎಂಬುದನ್ನು ಅರಿಯುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ನನ್ನ ಅಧ್ಯಯನದ ಸಮಯದಲ್ಲಿ ಅವರ ಎರಡು ಇಂಗ್ಲಿಷ್ ಕವನ ಸಂಕಲನಗಳಾದ The Beginner's Muse, Alien harp ಮತ್ತು ಅವರ ಆತ್ಮಕಥೆಯಾದ ನೆನಪಿನ ದೋಣಿಯಲ್ಲಿರುವ ಕವಿತೆಗಳನ್ನು ಬೇರೆ ಬೇರೆ ಭಾಗಗಳಾಗಿ ವಿಂಗಡಿಸಿಕೊಂಡಿದ್ದೇನೆ, ಅದರ ಉದ್ದೇಶವೇನೆಂದರೆ ಅವರ ಒಟ್ಟು ಎಲ್ಲಾ ಇಂಗ್ಲಿಷ್ ಕೃತಿಗಳನ್ನು ರಚನೆ ಇಲ್ಲದೆ ಅಧ್ಯಯನ ಮಾಡಲು ಸಾಧ್ಯವಿಲ್ಲ. ಎಲ್ಲಾ ಕವಿತೆಗಳನ್ನು ಅಧ್ಯಯನ ಮಾಡಲು ಅದಕ್ಕೆ ಒಂದು ಅಧ್ಯಯನದ ಒಂದು ಸ್ವರೂಪವನ್ನು ಧಕ್ಕಿಸಿಕೊಳ್ಳಬೇಕಿದೆ. ಆ ಸ್ವರೂಪವನ್ನು ಧಕ್ಕಿಸಿಕೊಳ್ಳಲು ಭಾಗಗಳನ್ನಾಗಿ ಮಾಡಲಾಗಿದೆ. ಅವುಗಳ ಅಭಿವ್ಯಕ್ತಿ ವಿಧಾನಗಳನ್ನು, ಅದರಲ್ಲಿರುವ ಸ್ವಂತಿಕೆಗಳನ್ನು, ಅದರಲ್ಲಿರುವಂತಹ ಪ್ರಭಾವಗಳನ್ನು ಮತ್ತು ನಿರೂಪಣೆಯ ಸಾರ್ಥಕ್ಯವನ್ನು ವಿಶ್ಲೇಷಿಸುವುದು ಮುಖ್ಯವಾಗುತ್ತದೆ. ಹಾಗಾಗಿ ಕುವೆಂಪು ಅವರ ಇಂಗ್ಲಿಷ್ ಕವಿತೆಗಳನ್ನು ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ಏಕೆಂದರೆ ಒಂದೊಂದು ಪ್ರಕಾರಗಳಲ್ಲಿಯೂ ಕವಿಯ ಮನಸ್ಸು ಯಾವ ಯಾವ ರೀತಿ ವರ್ತನೆ ಮಾಡುತ್ತಿತ್ತು, ಯಾವ ಯಾವ ವ್ಯಾಪಾರಗಳಲ್ಲಿ ಸ್ಪಂದಿಸುತ್ತಿತ್ತು, ಅದನ್ನು ಪ್ರತ್ಯೇಕ ಪ್ರತ್ಯೇಕ

ಮಾಡಿ ಅಧ್ಯಯನ ಮಾಡಿದ್ದೇನೆ ಮತ್ತು ಅದನ್ನು ಒಟ್ಟುಗೂಡಿಸುವಂತಹ ಪ್ರಯತ್ನವನ್ನು ಮಾಡಿದ್ದೇನೆ. ಒಟ್ಟಾರೆ ಮೇಲೆ ಹೆಸರಿಸಿದ ಮೂರು ಕೃತಿಗಳನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದೇನೆ.

ಕುವೆಂಪು ೨೦ನೇ ಶತಮಾನದ ಕನ್ನಡದ ಪ್ರಮುಖ ಲೇಖಕರು. ಆಧುನಿಕ ಕನ್ನಡ ಸಾಹಿತ್ಯದ ಮೇರು ಕವಿ. ಅವರು ಕತೆ, ಕಾದಂಬರಿ, ಕಾವ್ಯ, ಮಹಾಕಾವ್ಯ, ನಾಟಕ, ವಿಮರ್ಶೆ ಮೊದಲಾದ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೈಯಾಡಿಸಿದ್ದಾರೆ. ಬೊಮ್ಮನಹಳ್ಳಿ ಕಿಂದರಜೋಗಿ ಕವನದಿಂದ ಹಿಡಿದು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದವರೆಗಿನ ಅವರ ಕಾವ್ಯದ ಹಾದಿ ಸುದೀರ್ಘವಾದುದು. ಒಬ್ಬ ಕವಿಯ ಬಗ್ಗೆ ಅಧ್ಯಯನ ಮಾಡುವಾಗ ಅವನ ಸಾಹಿತ್ಯದಷ್ಟೇ ಸಾಹಿತ್ಯೇತರ ಚಟುವಟಿಕೆಗಳು ಮುಖ್ಯವಾಗುತ್ತದೆ. ಕವಿಯ ಕಾವ್ಯವನ್ನು ಅಭ್ಯಸಿಸುವಾಗ ಆತನ ಪರಿಸರ, ಬಾಲ್ಯ, ಪ್ರಭಾವ ಹಾಗೂ ಸಾಂಸ್ಕೃತಿಕ ಘಟನೆಗಳು ಎಲ್ಲವೂ ಅಧ್ಯಯನಕ್ಕೆ ಒಳಪಡುತ್ತದೆ. ಕವಿಯ ಕಾವ್ಯ ಕೇವಲ ಕಾವ್ಯದ್ದಾಗಿರದೆ ಅವನ ಜೀವನ ವೃತ್ತಾಂತವೂ ಆಗಿರುತ್ತದೆ. ಕುವೆಂಪು ಅವರ ಸಮಗ್ರ ಕಾವ್ಯದ ಬಗ್ಗೆ ಸಾಕಷ್ಟು ಅಧ್ಯಯನ ನಡೆದಿದೆ. ಕವಿಯ ನೆನಪಿನ ದೋಣಿಯಲ್ಲಿ ಆತ್ಮಕಥೆಯಲ್ಲಿನ ಪದ್ಯಗಳನ್ನು ಮತ್ತು ಸಮಗ್ರ ಕಾವ್ಯ ಭಾಗ ೨ರಲ್ಲಿರುವ ಅವರ ಇಂಗ್ಲಿಷ್ ಪದ್ಯಗಳನ್ನು ಒಟ್ಟಾರೆಯಾಗಿ ಅಭ್ಯಸಿಸುವುದು ಪ್ರಸ್ತುತ ಅಧ್ಯಯನದ ಮೂಲ ಉದ್ದೇಶವಾಗಿದೆ.

ಕುವೆಂಪು ಅವರ 'ನೆನಪಿನ ದೋಣಿಯಲ್ಲಿ' ಕೃತಿ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ವಿವರಗಳನ್ನು ಒಳಗೊಂಡಿದೆ. ಕವಿ ತಮ್ಮ ಆತ್ಮಕಥೆಯಲ್ಲಿ ತಾನು ಬರೆದ ಕವಿತೆಗಳೊಂದಿಗೆ ಟಿಪ್ಪಣಿ ಸಹಿತವಾದ ವಿವರಣೆಯನ್ನು ನೀಡಿರುವುದು ಅಧ್ಯಯನಕ್ಕೆ ಉಪಯುಕ್ತ ಸಂಗತಿ. ಈ ಪದ್ಯಗಳ ಆಧಾರದಿಂದ ಕವಿಯ ಕಾವ್ಯವಿಕಾಸ ಹೇಗೆ ಆಗಿದೆ ಎಂಬುದನ್ನು ಗುರುತಿಸುವುದು ಅಧ್ಯಯನದ ಉದ್ದೇಶ.

ಕವಿಯ ಕವನಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಚಾರಿತ್ರಿಕವಾಗಿ ದಾಖಲೆಗಳಾಗುತ್ತದೆ. ಅವರ ಆರಂಭದ ರಚನೆಗಳು ಉತ್ತಮವಲ್ಲದಿದ್ದರೂ ಅವು ಚಾರಿತ್ರಿಕ ಹಿನ್ನಲೆಯಲ್ಲಿ ಮುಖ್ಯವಾಗುತ್ತದೆ ಎಂಬುದನ್ನು ತಿಳಿಸುವುದು ಅಧ್ಯಯನದ ಉದ್ದೇಶ.

### ೧.೩. ಅಧ್ಯಯನದ ವೈಧಾನಿಕತೆ

ಕುವೆಂಪು ಅವರ ಇಂಗ್ಲಿಷ್ ಕವನ ಸಂಕಲನಗಳಾದ ಬಿಗಿನರ್ಸ್ ಮ್ಯುಸ್ (Beginner's Muse ಎಂಬ ೧೬ ಪುಟಗಳ ಕಿರುಕವನ ಸಂಗ್ರಹ) ಹಾಗು ಏಲಿಯನ್ ಹಾರ್ಪ್ (Alien harp ೫೫ ಕವನಗಳ ಸಂಗ್ರಹ) ಜೊತೆಗೆ ನೆನಪಿನ ದೋಣಿಯಲ್ಲಿ ಬರುವ ಪದ್ಯಗಳನ್ನು ಕುರಿತ ಅಧ್ಯಯನ ಮಾಡಲಾಗಿದೆ. ಆ ಕವನಗಳಲ್ಲಿ ನಿಸರ್ಗ ಕುರಿತ ವಿಚಾರಗಳು, ದೈವದ ಪರಿಕಲ್ಪನೆ, ಆಧ್ಯಾತ್ಮಿಕದ ಪರಿಕಲ್ಪನೆ, ಸಾಮಾಜಿಕ ಚಿಂತನೆ, ರಾಷ್ಟ್ರೀಯತೆಯ ವಿಚಾರಗಳು, ಸ್ಥಳೀಯತೆಯ ವಿಚಾರಗಳು, ಪ್ರೇಮಕಾವ್ಯ, ಮತ್ತು ಸಂಕೀರ್ಣ ಕವಿತೆಗಳು ಎಂಬ ಈ ವಿಷಯಗಳಿಗೆ

ಸಂಬಂಧಿಸಿದ ಕವಿತೆಗಳಿದ್ದು, ಆ ಇಂಗ್ಲಿಷ್ ಕವಿತೆಗಳ ಅಭಿವ್ಯಕ್ತಿ ಮತ್ತು ಆಶಯಗಳ ಅಧ್ಯಯನ ಮತ್ತು ವಿಶ್ಲೇಷಣೆ ಮಾಡಿ ಆ ಕವನಗಳಲ್ಲಿರುವ ವಿಶ್ಲೇಷಣೆಯ ಭಾವ ಮೌಲ್ಯವನ್ನು ಗ್ರಹಿಸಿಕೊಳ್ಳುವ ಪ್ರಯತ್ನ ಮಾಡಿದ್ದೇನೆ. ನನ್ನ ಮೂಲ ಆಕರ ಗ್ರಂಥಗಳೆಂದರೆ –

೧. ನೆನೆಪಿನ ದೋಣಿ

೨. ಕುವೆಂಪು ಸಮಗ್ರ ಕಾವ್ಯ – ಸಂಪುಟ ೨

ಮನುಷ್ಯ ತನ್ನ ಅನುಭವಗಳನ್ನು ಅಭಿವ್ಯಕ್ತಿಸಲು ಬರವಣಿಗೆಯನ್ನು ಕಂಡುಕೊಂಡ. ತನ್ನ ಜೀವನದಲ್ಲಿ ನಡೆದ ಘಟನೆಗಳನ್ನು ಕಲ್ಪನಾಶಕ್ತಿಯಿಂದ ಪುನರ್‌ಸೃಷ್ಟಿಮಾಡಿದ. ಅನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ. ಸಾಹಿತಿ ತನ್ನ ಸಮಕಾಲೀನ ಸಂದರ್ಭದ ಸಂಗತಿಗಳನ್ನು ತಾನು ಬದುಕುತ್ತಿರುವ ಸಾಮಾಜಿಕ ಹಿನ್ನಲೆಯಲ್ಲಿ ಮೂಡಿದ ಅನುಭವವನ್ನು ಸಾಹಿತ್ಯ ಕೃತಿಯ ಮೂಲಕ ಅಭಿವ್ಯಕ್ತಿಸುತ್ತಾನೆ. ವ್ಯಕ್ತಿಯು ಸಮಾಜದಲ್ಲಿರುವಾಗ ಸಂಘಜೀವಿಯಾಗಿರುತ್ತಾನೆ. ತಾನು ಕಂಡ ಚೆಲುವು ನಲಿವು ಇವುಗಳು ಇತರರಿಗೂ ದೊರೆಯಲಿ, ಎಂಬ ಆಂತರಿಕ ಆಕಾಂಕ್ಷೆಯಿಂದ ಅವನು ಮತ್ತೊಬ್ಬರಲ್ಲಿ ಹೇಳಿಕೊಳ್ಳುತ್ತಾನೆ. ಸಮಾಜ ವಿಕಾಸಗೊಂಡಂತೆ ಅವನ ಅನುಭವದ ಅಭಿವ್ಯಕ್ತಿ ವಿಕಾಸಗೊಳ್ಳುತ್ತಾ ಹೋಗುತ್ತದೆ.

ಕುವೆಂಪು ಅವರ ಮಹಾಛಂದಸ್ಸಿನಲ್ಲಿ ರಚನೆ ಗೊಂಡಿರುವ ಹಿನ್ನಲೆಯ ವಿವರಗಳು ಕೃತಿಯಲ್ಲಿ ದೊರೆಯುತ್ತದೆ. ಕೃತಿಯಲ್ಲಿನ ಪದ್ಯಗಳನ್ನು ವಿಶ್ಲೇಷಣೆ ಮಾಡುತ್ತ ಅಧ್ಯಯನ ಮಾಡುವುದು ಪ್ರಮುಖ ಉದ್ದೇಶ. ಒಬ್ಬ ಪ್ರಮುಖ ಕವಿಯ ಉತ್ಕೃಷ್ಟ ಸಾಹಿತ್ಯ ಎಷ್ಟು ಮುಖ್ಯವೋ ಅದು ಆರಂಭದ ರಚನೆಗೂ ಅಷ್ಟೇ ಮುಖ್ಯ. 'ನೆನಪಿನ ದೋಣಿಯಲ್ಲಿ' ಆತ್ಮಚರಿತ್ರೆಯಲ್ಲಿ ಚಾರಿತ್ರಿಕ ವಿವರಗಳೂ ದೊರೆಯುತ್ತದೆ. ಕೃತಿಯಲ್ಲಿನ ಪದ್ಯಗಳನ್ನು ಅಧ್ಯಯನ ಮಾಡುವಾಗ ಪ್ರಮುಖ ಧಾರೆಗಳಾದ ಕವಿಯ ನಿಸರ್ಗ ಕುರಿತ ವಿಚಾರಗಳು, ದೈವದ ಪರಿಕಲ್ಪನೆ, ಆಧ್ಯಾತ್ಮಿಕದ ಪರಿಕಲ್ಪನೆ, ಸಾಮಾಜಿಕ ಚಿಂತನೆ, ರಾಷ್ಟ್ರೀಯತೆಯ ವಿಚಾರಗಳು, ಸ್ಥಳೀಯತೆಯ ವಿಚಾರಗಳು, ಪ್ರೇಮಕಾವ್ಯ, ಸಂಕೀರ್ಣ ಕವಿತೆಗಳು ಮೊದಲಾದ ವಿಷಯಗಳು ಬರುತ್ತದೆ.

ಈ ಅಧ್ಯಯನದಲ್ಲಿ ೭ ಅಧ್ಯಾಯಗಳಿವೆ. ಅಧ್ಯಯನದ ಅನುಕೂಲಕ್ಕಾಗಿಯೇ ವಿಭಾಗಗಳನ್ನಾಗಿ ಮಾಡಿಕೊಂಡು ವಸ್ತುಸ್ಥಿತಿಯ ಅಧ್ಯಯನ ಮಾಡಲಾಗಿದೆ. ಮೊದಲ ಎರಡು ಅಧ್ಯಾಯಗಳಲ್ಲಿ ಕವಿಯ ವ್ಯಕ್ತಿ ಪರಿಚಯ ಹಾಗೂ ಕೃತಿಯ ಸ್ವರೂಪವನ್ನು ವಿವರಿಸಲಾಗಿದೆ. ಹಾಗೆಯೇ ಮುಂದಿನ ಅಧ್ಯಾಯಗಳಲ್ಲಿ ಇಂಗ್ಲಿಷ್ ಸಾಹಿತ್ಯ ಕುವೆಂಪುರವರ ಸಾಹಿತ್ಯದ ಮೇಲಾದ ಪ್ರಭಾವ ಕುವೆಂಪು ಅವರ ನಿಸರ್ಗ ಕುರಿತ ವಿಚಾರಗಳು, ದೈವದ ಪರಿಕಲ್ಪನೆ, ಆಧ್ಯಾತ್ಮಿಕದ ಪರಿಕಲ್ಪನೆ, ಸಾಮಾಜಿಕ ಚಿಂತನೆ, ರಾಷ್ಟ್ರೀಯತೆಯ ವಿಚಾರಗಳು, ಸ್ಥಳೀಯತೆಯ ವಿಚಾರಗಳು, ಪ್ರೇಮಕಾವ್ಯ ಮತ್ತು ಸಂಕೀರ್ಣ ಕವಿತೆಗಳ ಬಗೆಗಿನ ವಿವರಗಳು ಕುರಿತಂತೆ ನೇರವಾದ ಸಂಶೋಧನೆಯನ್ನು ಮಾಡಲಾಗಿದೆ. ಈ ಅಧ್ಯಯನದ ವ್ಯಾಪ್ತಿಯಲ್ಲಿ ವಿವಿಧ ಪಾತ್ರಗಳಲ್ಲಿ ನಿಸರ್ಗ ಅಭಿವ್ಯಕ್ತಗೊಂಡ

ಬಗೆಯನ್ನು ಹೇಳಲಾಗಿದೆ. ಪ್ರಕೃತಿ ಎನ್ನುವುದು ಕುವೆಂಪು ಅವರಿಗೆ ಪರಮನಾರಾಧನೆ. ಪ್ರಕೃತಿಯ ಚಲುವಿನಲ್ಲಿ ದೈವದ ಸಾಕ್ಷಾಕಾರವಾಗುತ್ತದೆ. ಕವಿಯ ಪ್ರಕೃತಿಯ ಅನುಭವದ ಸ್ವರೂಪವನ್ನು ಕುರಿತು ಮಹತ್ವದ ಚರ್ಚೆ ಆರಂಭವಾಗುತ್ತದೆ. ನಮ್ಮ ಸುತ್ತಣ ನಿಸರ್ಗವನ್ನು ಪ್ರೀತಿಸುವುದು ನಮಗೆ ಕೇವಲ ಭೌತಿಕವಾದ ಅಗತ್ಯ ಮಾತ್ರವಲ್ಲ. ಒಂದು ಆಧ್ಯಾತ್ಮಿಕ ಅವಶ್ಯಕತೆಯೂ ಹೌದು ಎನ್ನುವುದನ್ನು ಒಂದು ಮೌಲ್ಯದಂತೆ ಪ್ರತಿಪಾದಿಸುವ ಕುವೆಂಪು ಅವರ ನಿಲುವು ಎಷ್ಟು ಸಮಂಜಸವು ಎಂಬುದನ್ನು ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶ. ಕುವೆಂಪು ಅವರ ಹೆಣ್ಣಿನ ಬಗೆಗಿನ ಭಾವನೆ ಅವರ ಬಾಳ ಸಂಗಾತಿ ಹಾಗೂ ತಾಯಿ ಕುರಿತಾದ ಭಾವನೆ ಹೇಗೆ ಪಡಿಮೂಡಿದೆ ಎಂಬುದನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಹಾಗೆಯೆ ಕುವೆಂಪು ಅವರು ಸ್ವತಂತ್ರ್ಯವಾದ ವ್ಯಕ್ತಿತ್ವ ರೂಪಿಸಿಕೊಳ್ಳಲು ಕಾರಣರಾದವರ ಬಗ್ಗೆ ಬರೆದಿರುವ ಕೆಲವು ಪದ್ಯಗಳನ್ನು ರಚಿಸುವದನ್ನು ಅಧ್ಯಯನ ಮಾಡಲಾಗಿದೆ. ಆಧ್ಯಾತ್ಮವೇ ಕುವೆಂಪು ಅವರ ಕಾವ್ಯದ ಪ್ರಮುಖ ದೋರಣೆ. ಕುವೆಂಪು ಅವರ ದೈವದ ಕಲ್ಪನೆ ಅತ್ಯಂತ ವಿಶಿಷ್ಟವಾದುದು.

ಅಧ್ಯಾಯಗಳು ಈ ಅಡಿಯ ವಿಷಯಗಳನ್ನು ಒಳಗೊಂಡಿದೆ:

೧. ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ
   ೧.೧. ಪ್ರಸ್ತಾವನೆ
   ೧.೨. ಅಧ್ಯಯನದ ಉದ್ದೇಶ, ವ್ಯಾಪ್ತಿ,
   ೧.೩. ಅಧ್ಯಯನದ ವೈಧಾನಿಕತೆ
   ೧.೪. ಈವರೆಗಿನ ಅಧ್ಯಯನಗಳ ಸಮೀಕ್ಷೆ
೨. ಅಧ್ಯಯನದ ಪರಿಕಲ್ಪನೆ.
೩. ಇಂಗ್ಲಿಷ್ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವ
೪. ಕುವೆಂಪು ಅವರ ಇಂಗ್ಲಿಷ್ ಕವಿತೆ, ಆಶಯ, ಅಭಿವ್ಯಕ್ತಿ
   ೪.೧. ನಿಸರ್ಗ ಕುರಿತ ವಿಚಾರಗಳು
   ೪.೨. ದೈವದ ಪರಿಕಲ್ಪನೆ
   ೪.೩. ಆಧ್ಯಾತ್ಮಿಕದ ಪರಿಕಲ್ಪನೆ
೫. ಕುವೆಂಪು ಕವಿತೆಗಳಲ್ಲಿ ಸಮಷ್ಟಿಯ ಪರಿಕಲ್ಪನೆ
   ೫.೧. ಸಾಮಾಜಿಕ ಚಿಂತನೆ
   ೫.೨. ರಾಷ್ಟ್ರೀಯತೆಯ ವಿಚಾರಗಳು
   ೫.೩. ಸ್ಥಳೀಯತೆಯ ವಿಚಾರಗಳು

೬. ಸಂಕೀರ್ಣ ಕವಿತೆಗಳಲ್ಲಿ ವಿಭಿನ್ನ ನೆಲೆಗಳು

೬.೧. ಸಂಕೀರ್ಣ ಕವಿತೆಗಳು

೬.೨. ಪ್ರೇಮ ಕಾವ್ಯ

೭. ಸಮಾರೋಪ

ಅನುಬಂಧಗಳು

೭.೧. ಮೂಲ ಅಧ್ಯಯನ ಆಕರಗಳು

೭.೨. ಅಧ್ಯಯನ ಆಧಾರ ಗ್ರಂಥಗಳು

ಈ ಪ್ರಬಂಧವು ಮೇಲಿನ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಅನೇಕ ಎಳೆಗಳಿಂದ ಕೂಡಿದ ಯಾವುದೇ ಸಂಸ್ಕೃತಿ ನಿರಂತರ ಸ್ಥಿತ್ಯಂತರಕ್ಕೆ ಒಳಗಾಗುತ್ತಿರುತ್ತದೆ. ಪ್ರತಿ ಸಂದರ್ಭದಲ್ಲೂ ಸಮಕಾಲೀನತೆಯನ್ನು ತೋರಿಸುವ ಸಾಹಿತ್ಯ ಕೃತಿಯೊಂದಿಗೆ ಸಂಸ್ಕೃತಿಯ ಪ್ರಕ್ರಿಯೆ, ಅನನ್ಯತೆಯನ್ನು ಗುರುತಿಸುವ ಜವಾಬ್ದಾರಿ ಸಂಶೋಧನೆಯ ಬಹಳ ಮುಖ್ಯವಾದ ಅಂಶ. ಸಂಶೋಧನೆ ಎನ್ನುವುದು ಏಕರೂಪದ್ದಲ್ಲ. ಚಾರಿತ್ರಿಕ ಅಗತ್ಯಗಳಿಗೆ ಅನುಗುಣವಾಗಿ, ಕಾಲದಿಂದ ಕಾಲಕ್ಕೆ ಬದಲಾಗಿ ಹೋಗುತ್ತದೆ. ಈ ನಿಟ್ಟಿನಲ್ಲಿ ಸಂಶೋಧಕನು ಸಂಶೋಧನೆಯ ವಸ್ತುವೂ ಆಗಿರುತ್ತಾನೆ. ಆದ್ದರಿಂದ ಸಾಹಿತ್ಯ ಮತ್ತು ಸಂಸ್ಕೃತಿ ಅಧ್ಯಯನವನ್ನು ವ್ಯಕ್ತಿ ದೃಷ್ಟಿಕೋನದೊಂದಿಗೆ ಸಾರ್ವತ್ರಿಕ ನೆಲೆಯಲ್ಲೂ ಕಂಡು ಕೊಳ್ಳಬೇಕಾಗುತ್ತದೆ.

'ಸಾಂಸ್ಕೃತಿಕ ಅಧ್ಯಯನ' ಎಂಬ ಪರಿಕಲ್ಪನೆ ಕಾಲಘಟ್ಟಗಳಲ್ಲಿ ಬದಲಾವಣೆಗೆ ಒಳಗಾಗುತ್ತ ಸಾಂದರ್ಭಿಕವಾಗುತ್ತಿರುತ್ತದೆ. ಹಾಗಾಗಿ ಇಂಥ ಅಧ್ಯಯನವನ್ನು ಸಾರ್ವತ್ರಿಕ ಸತ್ಯ ಎಂದು ತಿಳಿಯದೆ ಒಂದು ಯುಗದ ಸಂವೇದನೆಯಾಗಿ ಪರಿಗಣಿಸಬಹುದು. ಈ ಹಿನ್ನಲೆಯಲ್ಲಿ ನಮ್ಮ ಅರಿವಿನ ಪರಧಿಯೊಳಗೆ ಕಾಣಿಸುವಂಥ ವಸ್ತು, ಸಂಗತಿಗಳನ್ನು ಅರ್ಥೈಸಲು ಹಾಗು ಭಿನ್ನದೃಷ್ಟಿಕೋನದಿಂದ ಒಂದು ಕೃತಿಯನ್ನು ಪ್ರವೇಶಿಸಲು ನೆರವಾಗುವ ನೆಲೆಯಲ್ಲಿ ಸಾಂಸ್ಕೃತಿಕ ಅಧ್ಯಯನ ಎಂಬ ಪರಿಕಲ್ಪನೆಯನ್ನು ವಿಸ್ತರಿಸಿಕೊಳ್ಳಬಹುದು ಎಂದು ಭಾವಿಸಲಾಗಿದೆ.

ಇಂದು ಸಾಹಿತ್ಯ ಕ್ಷೇತ್ರವು ಪರಧಿಯನ್ನು ವಿಸ್ತರಿಸಿಕೊಳ್ಳುತ್ತ, ಹಲವು ಆಯಾಮಗಳಲ್ಲಿ ಬೆಳೆಯುತ್ತಿದೆ. ಒಂದರಿಂದ ಮತ್ತೊಂದು ಜ್ಞಾನಶಾಖೆಯನ್ನು ಪ್ರಭಾವಿಸಿಕೊಳ್ಳುತ್ತ ಮುನ್ನಡೆಯುತ್ತಿದೆ. ಇತರ ಕ್ಷೇತ್ರಗಳಲ್ಲಿ ಚರ್ಚಿಸಲ್ಪಡುವ, ತಾತ್ವೀಕರಿಸುವ ಧೋರಣೆಯನ್ನು ಒಳಗೊಳ್ಳುತ್ತ ಬೆಳೆಯುವ ಪ್ರಕ್ರಿಯೆ ಕೂಡ ಸಾಂಸ್ಕೃತಿಕ ಅಧ್ಯಯನದ ಸ್ವರೂಪಗಳನ್ನು ಪಡೆಯುತ್ತದೆ.

ಇಂಗ್ಲಿಷ್‌ನಲ್ಲೇ ಜಗತ್ತಿನ ಮಹಾಕವಿಯಾಗಬೇಕೆಂಬ ತೀವ್ರ ಹಂಬಲದ ಭ್ರಮೆಯಲ್ಲಿದ್ದ ಕುವೆಂಪು ಅವರಿಗೆ ಇಂಗ್ಲಿಷ್ ಎಲ್ಲದಕ್ಕೂ ಅಂತಿಮ ಉದಾತ್ತವಾಗಿದ್ದಂತ ಕಾಲ. ಅವರು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಇಂಗ್ಲಿಷ್ ಕವನಗಳ ರಚನೆಗೆ ತೊಡಗಿದ್ದು. ಅವರ 'ಬಿಗಿನರ್ಸ್

ಮ್ಯುಸ್'ನಲ್ಲಿರುವ ಕವನಗಳೆಲ್ಲವೂ ಮಿಲ್ಟನ್ ಕಾವ್ಯದ ಅನುಕರಣೆಗಳ ಪ್ರಯತ್ನಗಳೆ. ಅಂದರೆ ಇಂಗ್ಲಿಷ್ ರಮ್ಯಕಾವ್ಯದ ಅನುಕರಣೆ ಎಂದು ಕುವೆಂಪು ಅವರೆ ಸ್ವತಃ ಹೇಳಿಕೊಂಡಿದ್ದಾರೆ. ನಂತರದಲ್ಲಿ ಇಂಗ್ಲಿಷ್ ಸಾಹಿತ್ಯದ ಮೋಹದ ಬಿಗಿಹಿಡಿತದಿಂದ ಬಿಡಿಸಿಕೊಳ್ಳುವಲ್ಲಿ ಕುವೆಂಪು ಅವರಿಗೆ ಇಂಗ್ಲಿಷ್ ಭಾಷೆಯ ಯಜಮಾನ್ಯದ ಕಠೋರತೆಯ ಅರಿವುಂಟಾಗಿದ್ದು. ಆದ್ದರಿಂದಲೆ ಇಂಗ್ಲಿಷ್‌ನ್ನು ಪೂತನಿ ಎಂದು ಕರೆದದ್ದು. ಮುಂದೆ ಅವರು ಇಂಗ್ಲಿಷ್ ರಮ್ಯ ಕಾವ್ಯದ ಅನುಕರಣೆಗಳನ್ನು, ಆತ್ಮಕತೆ ಬರೆಯುವ ಕಾಲದಲ್ಲಿ ದಾಖಲಿಸಿರುವುದು. ಹಾಗೆ ದಾಖಲಿಸುವ ಪ್ರಮುಖ ಉದ್ದೇಶವೇ ಅಂದಿನ ಕಾಲದ ತರುಣ ಕವಿಯ ಮನೋಧರ್ಮ, ಆಸೆ, ಆಕಾಂಕ್ಷೆ, ಭಾವಾನಾಂಶಗಳ ಮೇಲೆ ಬೆಳಕು ಚೆಲ್ಲುತ್ತ ಪರಿಚಯಿಸುವುದು ಮತ್ತು ಕವಿ ಪ್ರತಿಭೆ, ಇಂಗ್ಲಿಷ್ ಮತ್ತು ಇಂಗ್ಲಿಷ್ ಸಾಹಿತ್ಯವನ್ನು ಸ್ವೀಕರಿಸಿದ ಬಗೆಯನ್ನು ತಿಳಿಸಿಕೊಡುವುದು ಮುಖ್ಯವಾಗಿದ್ದೂ ಅನುಕರಣೆಯ ಕನಸುಗಳನ್ನು ದಾಖಲಿಸಿದ್ದಾರೆ ಎಂಬುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

## ೧.೪. ಈವರೆಗಿನ ಅಧ್ಯಯನಗಳ ಸಮೀಕ್ಷೆ

ಈ ಮೇಲಿನ ಒಂದು ವಿಷಯಕ್ಕೆ ಸಂಬಂಧ ಪಟ್ಟ ಹಾಗೆ ಅಧ್ಯಯನದ ಸಮೀಕ್ಷೆ ನಡೆಸಲು ಹೊರಟಾಗ ನನಗೆ ಸಿಕ್ಕ ಮಾಹಿತಿಯನ್ನು ಆದರಿಸಿ ಪ್ರಸ್ತುತ ಲೇಖನವನ್ನು ಬರೆಯುತ್ತಿದ್ದೇನೆ.

ಕುವೆಂಪು ಅವರ ಕೃತಿಗಳನ್ನು ಕುರಿತಂತೆ ಅನೇಕ ಲೇಖನಗಳು, ಸಂಶೋಧನೆಯ ಗ್ರಂಥಗಳು ಹೊರ ಬಂದಿವೆ. ನನ್ನ ಸಂಶೋಧನ ವಿಷಯಕ್ಕೆ ಪೂರಕವಾಗಿ ಇದುವರೆಗೂ ನಡೆದಿರುವ ಅಧ್ಯಯನಗಳನ್ನು ಸಂಕ್ಷಿಪ್ತವಾಗಿ ಸಮೀಕ್ಷೆ ಮಾಡಿರುತ್ತೇನೆ. ಇದರಿಂದ ನನ್ನ ಅಧ್ಯಯನಕ್ಕೆ ಒಂದು ವೈಶಿಷ್ಟ್ಯತೆ ಇರುತ್ತದೆ ಎಂಬ ಕಾರಣಕ್ಕಾಗಿ ನೋಡಿರುತ್ತೇನೆ. ಇದರಲ್ಲಿನ ಅಭಿಪ್ರಾಯಗಳು ಮಾನದಂಡವಾಗಿರುವುದಿಲ್ಲ.

ನಮ್ಮ ರಾಜ್ಯದ ಅನೇಕ ಕನ್ನಡ ವಿಶ್ವವಿದ್ಯಾಲಯಗಳ ಸಂಶೋಧನಾ ಪ್ರಬಂಧಗಳನ್ನು, ಪರಿಶೀಲಿಸಿದಾಗ ಕುವೆಂಪು ಅವರ 'ನೆನೆಪಿನ ದೋಣಿಯಲ್ಲಿ ಬರುವ ಪದ್ಯಗಳು – ಒಂದು ಅಧ್ಯಯನ' ಎಂಬ ಎಂ.ಫಿಲ್ ಸಂಪ್ರಬಂಧದವನ್ನು ಮಹೇಂದ್ರರವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ಒಂದು ಅಧ್ಯಯನದಲ್ಲಿ ತಮ್ಮ ಅಧ್ಯಾಯಗಳನ್ನು ಈ ರೀತಿ ರೂಪಿಸಿಕೊಂಡಿದ್ದಾರೆ– ಕುವೆಂಪು ಅವರ ನೆನೆಪಿನ ದೋಣಿಯಲ್ಲಿ ಎಂಬ ಕೃತಿಯಲ್ಲಿನ ಕವಿತೆಗಳ ಸ್ವರೂಪ, ಕುವೆಂಪು ಅವರ ನಿಸರ್ಗ ದರ್ಶನ, ಅದರಲ್ಲಿನ ಸ್ತ್ರೀ ಸಂಬಂಧಿತ ಕವಿತೆಗಳು ಮತ್ತು ಮಹಾಪುರುಷರನ್ನು ಕುರಿತ ಪದ್ಯದಳು ಹಾಗೂ ಕೊನೆಯ ಅಧ್ಯಾಯದಲ್ಲಿ ದೇವರ ಬಗೆಗಿನ ಕವಿತೆಗಳು ಎಂಬ ಕನ್ನಡ ಕವಿತೆಗಳನ್ನು ಆರಿಸಿಕೊಂಡು ಅದರ ಕುರಿತ ಅಧ್ಯಯನ ಮಾಡಿದ್ದಾರೆ. ಈ ಕವಿತೆಗಳ ಅಧ್ಯಯನಕ್ಕಾಗಿ ಮೇಲಿನ ರೀತಿಯ ಅಧ್ಯಾಯಗಳನ್ನು ವಿಂಗಡಿಸಿ ಅದರ ಅನುಸಾರವಾಗಿ ಸಂಪ್ರಬಂಧವನ್ನು ನಿರೂಪಿಸಿರುತ್ತಾರೆ.

ಇಲ್ಲಿ ಆರಿಸಿಕೊಂಡಿರುವ ನಿಸರ್ಗ ಕವಿತೆಗಳೆಂದರೆ ಪೂವು, ಬೆಳದಿಂಗಳ ರಾತ್ರಿ, ಮುಂಜಾನೆ, ಪುಷ್ಪಗೀತೆ, ಹಾಡುವ ಹಕ್ಕಿ, ದೀಪಾವಳಿಯ ಸಂಜೆ, ಚಿಣ್ಣಮುದ್ದಿನ ಹಕ್ಕಿ, ಯುಗಾದಿಯ ಹಾಡು, ತಾರಾಸೇತು, ಬೈಗುಗಗನ, ಹೂದೋಟ, ಮಡಿವಾಳ, ಹೊಲೆಯರೆಯ ಮೇಲೆ, ತಾರೆಗಳ ದಿಬ್ಬಣ, ಹೊಳೆ, ಉದಯಗೀತೆ, ಮಸಣ, ಪಾಳುಮನೆ, ಮುದ್ದು ಹೂಗಳೆ ಮೊದಲಾದ ಪದ್ಯಗಳನ್ನು ನೋಡಬಹುದು. ಹಾಗೆಯೇ ಕುವೆಂಪು ತನ್ನ ಮಲೆನಾಡಿಗೆ ಸಂಬಂಧಿಸಿದಂತೆ ಬರೆದ ಕವಿತೆಗಳಿವೆ; ಮಲೆನಾಡು, ಮಲೆನಾಡ ವೈಭವ, ಮಲೆನಾಡಿನಲ್ಲಿ ಮಳೆಬಿಟ್ಟ ಮೇಲೆ, ರಸಸಿದ್ಧಿ, ಕವಿಶೈಲದಲ್ಲಿ ಸಂಧ್ಯ, ಹಳ್ಳಿ, ಹಳ್ಳಿಯ ಸಂಜೆ, ಪಾಳುಮನೆ ಮೊದಲಾದ ಕವಿತೆಗಳನ್ನು ನೋಡಬಹುದು.

ಕುವೆಂಪು ಅವರ ನಿಸರ್ಗಗೀತೆಗಳಲ್ಲಿ ಹಳ್ಳಿ, ಹಳ್ಳಿಯ ಪರಿಸರಕ್ಕೆ ಸಂಬಂಧಿಸಿದ ಕವಿತೆಗಳನ್ನು ಗುರುತಿಸಿ 'ಹಳ್ಳಿ' ಎಂಬ ಅವರ ಕವಿತೆಯನ್ನು ಕುರಿತು ಹೀಗೆ ವಿಶ್ಲೇಷಣೆಯನ್ನು ಮಾಡಿದ್ದಾರೆ– ಬಳ್ಳಿಯ ಹೋವಿಂ ಬೆಳ್ಳಗೆ ಕಾಣುವ, ಹಳ್ಳಿಯ ಹಳ್ಳಿಯೆ ನೀ ಚೆಂದ, ಹುಲ್ಲಿನ ಹಸುರಿಂದೆಲ್ಲಿಯು ಮುರುಗುವ ಹಳ್ಳಿಯೇ ನೀ ಬಲು ಆನಂದ. ಈ ಕವಿತೆ ಭಾವಗೀತೆಯ ಸ್ವರೂಪವನ್ನು ಹೊಂದಿದೆ. ನಾದ– ಲಯ– ಮಾಧುರ್ಯದಿಂದ ಈ ಕವಿತೆ ಕೂಡಿದೆ. ಪ್ರಸ್ತುತ ಕವಿತೆಯಲ್ಲಿ ಹಳ್ಳಿಯ ಸೌಂದರ್ಯವನ್ನು ವರ್ಣಿಸಿದ್ದಾರೆ. ಕವಿ ಹಳ್ಳಿಯನ್ನು ಉನ್ನತವಾದ ನೆಲೆಯಲ್ಲಿ ಕಂಡು ಅದರ ವಿವರಗಳನ್ನು ಕೊಡುತ್ತಾರೆ. ಈ 'ಹಳ್ಳಿ' ಕವಿತೆ ಮುಖಾಂತರ ಕವಿ ಗ್ರಾಮಾಂತರ ಜೀವನದ ಸೊಗಸನ್ನು ಹೇಳುತ್ತಾರೆ. ಕವಿಯ ನಿಸರ್ಗ ಪ್ರೀತಿಯ ತಂಗುದಾಣವೇ ಹಳ್ಳಿಯಾಗಿದೆ. ಹಳ್ಳಿಗಾಡಿನ ಬದುಕಿನ ವಿಶೇಷತೆ ಏನೆಂಬುದನ್ನು ಕವಿ ತಿಳಿಸಿಕೊಡುತ್ತಾರೆ ಎಂದು ಇನ್ನೂ ಮುಂತಾದಿಯಾಗಿ ವಿಶ್ಲೇಷಣೆ ಮಾಡಿರುತ್ತಾರೆ.

ಮುಂದೆ ಸ್ತ್ರೀ ಕೇಂದ್ರಿತ ಕೆಲವು ಕವಿತೆಗಳನ್ನು ಆರಿಸಿಕೊಂಡಿದ್ದಾರೆ. ಕುವೆಂಪು ಅವರ 'ಅನಾಥಬಾಲ' ಎಂಬ ಕವಿತೆಯನ್ನು ಅರಿಸಿಕೊಂಡು ಅದಕ್ಕೆ ವಿವರಣೆ ನೀಡಿದ್ದಾರೆ. ಆ ಕವಿತೆ ಹೀಗಿದೆ– ಎಲೆ ಜನನಿ, ಎಲ್ಲಿರುವೆ? ಬಿಳಿದಾದ ಮಲ್ಲಿಗೆಯು, ಪೊಳೆಯುತಿಹ ಮರದಲ್ಲಿ ನೆಗೆ ಬೀರುತ, ಅಲರ ರೂಪವ ತಾಳಿ, ತಳಿರ ಸೊಬಗನು ಹೊಂದಿ, ಇಳೆಯ ನಾಕದೊಳು ನೀಂ ನೆಲೆಸಿರ್ಪೆಯ? ಈ ಕವಿತೆ ಕುರಿತ ವಿವರಣೆಯಲ್ಲಿ ತಾಯಿಯ ಮಹತ್ವ ಏನು ಎಂಬುದನ್ನು ತಿಳಿಸಿ, ಅವಳೇ ನನ್ನ ಬದುಕಿಗೆ ಸ್ಫೂರ್ತಿಯ ಧಾರೆ ಎನ್ನುತ್ತಾರೆ. ತಾಯಿ ಪ್ರಕೃತಿಯಲ್ಲಿ ಲೀನವಾಗಿದ್ದಾಳೆ. ತಾಯಿ ಸತ್ತು ಒಂದು ನಿಶ್ಚಿತ ರೂಪವನ್ನು ಪಡೆದು ನಿಸರ್ಗದಲ್ಲಿ ಸೊಬಗಿನಿಂದ ಕೂಡಿದ್ದಾಳೆ ಎಂದು ಹೇಳುತ್ತಾರೆ. ಕವಿಗೆ ತನ್ನ ತನ್ನ ತಾಯಿ ಇಲ್ಲದಿರುವ ಸನ್ನಿವೇಶವನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲವಾಗಿದೆ. ತನ್ನ ಅಗಲುವಿಕೆಯಿಂದ ಬಳಲುತ್ತಿರುವ ಮಗನನ್ನು ತಾಯಿ ಮಮತೆಯಿಂದ ಮುದ್ದಿಸಿ ಸಮಾಧಾನಪಡಿಸುತ್ತಾಳೆ. ತಾಯಿ ಕಳೆದುಕೊಂಡಾಗ ಅವರ ಮನಸ್ಸಿನಲ್ಲಿ ಸೂತಕದ ವಾತಾವರಣ ಮೂಡುತ್ತದೆ. ಆಗ ತಾಯಿ ಸತ್ತಿಲ್ಲ ಬದುಕಿ ನನ್ನನ್ನು

ಸಲಹುತ್ತಿದ್ದಾಳೆ ಎನ್ನುವ ಭಾವವನ್ನು ವ್ಯಕ್ತಪಡಿಸುತ್ತಾರೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಹೀಗೆ, ಇನ್ನು ಮುಂದೆ ಮಹಾಪುರುಷರ ಕುರಿತ ಕವಿಗಳು ಮತ್ತು ದೇವರ ಬಗೆಗಿನ ಕವಿತೆಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ.

ಕುವೆಂಪು ಅವರ ಸಾಹಿತ್ಯ ಕುರಿತಂತೆ, ಅವರ ಕನ್ನಡ ಕವನ ಸಂಕಲನಗಳಲ್ಲಿ ಕಾದಂಬರಿ ಅಧಾರಿತ, ಆತ್ಮಕಥೆ, ಅವರ ಮಹಾಕಾವ್ಯವಾದಂತಹ ರಾಮಾಯಣ ದರ್ಶನಂ ಹೀಗೆ ಇನ್ನು ಅನೇಕ ಕೃತಿಗಳ ಕುರಿತು ಹಲವಾರು ಅಧ್ಯಯನಗಳು ನಡೆದಿವೆಯಾದರೂ, ಅವರ ಇಂಗ್ಲಿಷ್ ಕವಿತೆಗಳ ಕುರಿತಂತೆ ಇಲ್ಲಿಯವರೆಗೂ ಅಧ್ಯಯನಗಳು ಕಂಡುಬಂದಿರುವುದಿಲ್ಲ ಎಂದು ಈ ಸಮೀಕ್ಷೆಯ ಮೂಲಕ ಸ್ಪಷ್ಟಪಡಿಸುತ್ತೇನೆ.

* * * * * *

# ಅಧ್ಯಯನದ ಪರಿಕಲ್ಪನೆ

ನನ್ನ ಇಂಗ್ಲಿಷ್ ಮಹಾ ಪ್ರಬಂಧದ ವಿಷಯದಲ್ಲಿ ಉಲ್ಲೇಖವಾಗಿರುವ ಅಭಿವ್ಯಕ್ತಿ (Expression) ಈ ಪಾರಿಭಾಷಿಕ ಪದದ ಅರ್ಥವನ್ನು ಸೂತ್ರ ರೂಪದಲ್ಲಿ ಖಚಿತವಾಗಿ ವಿವರಿಸುವುದು ಕಷ್ಟ. ಏಕೆಂದರೆ ಇದು ಕಾವ್ಯದ ವಿವಿಧ ಪ್ರಕಾರಗಳನ್ನು ಕುರಿತು ಭಿನ್ನವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಅಭಿವ್ಯಕ್ತಿ ಮನುಷ್ಯರ ಸಹಜ ಪ್ರಕ್ರಿಯೆ. ಅಭಿವ್ಯಕ್ತಿ ಎಂಬ ಪದವನ್ನು ಸರಳವಾಗಿ ವಿವರಿಸುವುದಾದರೆ, ನಮ್ಮ ಭಾವನೆಗಳನ್ನು ತಮ್ಮದೆಯಾದ ರೀತಿಯಲ್ಲಿ ಪ್ರಕಟಪಡಿಸುವ ದಾರಿ. ಅಭಿವ್ಯಕ್ತಿ ಅದು ಒಂದು ಸಂಕೀರ್ಣ ಧ್ವನಿ (ಪೋನೆಟಿಕ್) ಎಕ್ಸ್‌ಪ್ರೆಸ್ ಮಾಡುವುದು ಕಾವ್ಯದ ಕೆಲವು ಅಂಶಗಳನ್ನು ಒತ್ತು ನೀಡಲು ಬಳಸಲಾಗಿದೆ. ಅಭಿವ್ಯಕ್ತಿ ಎಂಬ ಸಾಧನವನ್ನು ಲೇಖನಿ ಹಿಡಿದು ಬರಹ ರೂಪದಲ್ಲಿ ಪ್ರಕಟಪಡಿಸಬಹುದು, ಕುಂಚವನ್ನು ಹಿಡಿದು ಚಿತ್ರದ ಮೂಲಕವೂ ವ್ಯಕ್ತಪಡಿಸಬಹುದು.

ಕಾವ್ಯದ ಅಭಿವ್ಯಕ್ತಿಯನ್ನು ಮುಖ್ಯವಾಗಿ ನೋಡುವುದಾದರೆ. ಕವಿಯ ಭಾಷಾ ಜ್ಞಾನ, ಪೂರ್ವ ಕಾವ್ಯ ಪರಿಚಯ, ಲಕ್ಷಣ, ಜ್ಞಾನ ಇವೆಲ್ಲ ಕಾವ್ಯ ಸೃಷ್ಟಿಗೆ ಕಾರಣವೆಂದು ಪ್ರಾಚೀನ ಲಾಕ್ಷಣಿಕರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಆಧುನಿಕ ಕವಿಗಳ ಕಾವ್ಯದ ಪ್ರೇರಣೆ, ಧೋರಣೆಗಳನ್ನು ಗಮನಿಸಿದರೆ ಬದುಕಿನ ಬೆಳವಣಿಗೆಯಲ್ಲಿ ತಾನು ಅನುಭವಿಸುವ ನೋವುಗಳಿಗೆ ಮಾತಿನ ಕವಚ ಮೂಡಿಸಿ ತನ್ನ ಸುತ್ತಲಿನ ಪ್ರಪಂಚ ಹಾಗೂ ಬದುಕನ್ನು ಸೂಕ್ಷ್ಮ ಸಂವೇದನಾಶೀಲ ಭಾವಗಳೊಂದಿಗೆ ಭಾಷೆಯಲ್ಲಿ ಅಭಿವ್ಯಕ್ತ ಪಡಿಸುವುದೆ ಕಾವ್ಯ. ಅದನ್ನು ಹೇಳಲು ಶಬ್ದ, ಪ್ರತೀಕ, ಸಂಕೇತ, ಮುಂತಾದ ಪರಿಕರಗಳನ್ನು ಬಳಸಿಕೊಂಡು ಪ್ರಕೃತಿ, ಸೌಂದರ್ಯ, ರಸ, ಲಕ್ಷಣಗಳಿಂದ ಹಂಚಿಕೊಂಡ ಕಾವ್ಯವೆಂದು ಪರಿಭಾವಿಸಲಾಗಿದೆ. ಇಂಥ ಕಾವ್ಯ, ಪ್ರಾಚೀನ ಮಾದರಿಯನ್ನು ಬಿಟ್ಟು ಪ್ರೇಮ, ದೇಶಭಕ್ತಿ, ಪ್ರಕೃತಿ, ಸೌಂದರ್ಯ, ಸುಖ, ದುಃಖ, ರಾಗ, ದ್ವೇಷ, ಜಿಜ್ಞಾಸೆ, ಶ್ರದ್ಧೆ ಮೊದಲಾದ ವಿವಿಧ ವಿಷಯಗಳನ್ನು ಕುರಿತು ಆಯಾ ಕಾಲದ ಸಮಾಜಕ್ಕೆ ಪ್ರಜ್ಞೆಯ ಕೊಂಡಿಯಾದಂತೆ ರಚನೆಗೊಳ್ಳುತ್ತಾ ಬಂದಿತು. ಇದಕ್ಕೆ ನಿದರ್ಶನವಾಗಿ ಬಿ.ಎಂ.ಶ್ರೀಯವರ 'ಇಂಗ್ಲೀಷ್ ಗೀತಗಳು' ಹೊಸ ದಾರಿಯನ್ನು ತಳೆದವು. ಇಲ್ಲಿ ಎಲ್ಲವೂ ಹೊಸ ರೀತಿಯಲ್ಲಿದೆ. ಇಲ್ಲಿಯ ಅನುಭವ ಹೊಸದು, ಛಂದಸ್ಸು, ಶೈಲಿ ಹೊಸದು. ಹೀಗೆ ಆಧುನಿಕ ಕನ್ನಡ ಕಾವ್ಯ ನವೋದಯದ ಕಾವ್ಯಯುಗ ಹೆಮ್ಮೆಯಿಂದ ಜನ್ಮ ತಾಳಿತು.

ಭಾರತದಲ್ಲಿ ಬ್ರಿಟಿಷರ ಅರಸೊತ್ತಿಗೆ ಹಲವಾರು ಸವಾಲುಗಳನ್ನು ಎದುರಿಸುತ್ತಿತ್ತು. ಆ ಸಂದರ್ಭದಲ್ಲಿ, ದೇಶದ ಧುರೀಣರು ಬ್ರಿಟಿಷರ ಆಳ್ವಿಕೆಯ ಲೋಪ ದೋಷಗಳನ್ನು ಬಯಲಿಗೆಳೆದು ಭಾರತದಲ್ಲಿನ ಅಸಮಾನತೆ, ದಾರಿದ್ರ್ಯ, ಅನ್ಯಾಯ ಇವುಗಳನ್ನು ಎತ್ತಿ ತೋರಿಸಲು ಸ್ವಾಮಿ ವಿವೇಕಾನಂದ, ಲೋಕಮಾನ್ಯ ತಿಲಕರಂತ ರಾಷ್ಟ್ರನಾಯಕರು ಮುಂದಾದರು. ಇಂಥ ಪರಿಸರದಲ್ಲಿ ಬದುಕಿ ಬಾಳಿದ ನಮ್ಮ ಕವಿಗಳಿಗೆ ದೇಶಭಕ್ತಿ, ದೇಶ ಪ್ರೇಮ, ಉಜ್ವಲ ಕನಸುಗಾರಿಕೆ ತಾರಕಕ್ಕೇರಿದವು. ಹಳ್ಳಿಗಳ ಮುಖ್ಯ ಜೀವನ, ಸಂಸ್ಕೃತಿ, ಸರಳತೆಗಳಿಗೆ ದೇಶ ಮತ್ತು ಜನರು ಹೊಸತಿಗಾಗಿ ಹಂಬಲಿಸಿದರು. ಹಾಗೆ ಎಲ್ಲ ಬಗೆಯ ನಿಬಂಧನೆಗಳಿಂದಲೂ ಬಿಡುಗಡೆ ಹೊಂದಲು ಕಾತರರಾಗಿದ್ದರು. ಇಂತ ಪ್ರೇರಣೆಯಲ್ಲಿ ಹೊಸಗನ್ನಡದ ಕಾವ್ಯ ಮೂಡಿ ಬಂದಿತು.

ಸ್ವಾತಂತ್ರ್ಯ ಹೋರಾಟ ಮತ್ತು ಬಿ.ಎಂ. ಶ್ರೀಯವರ ಇಂಗ್ಲೀಷ್ ಗೀತಗಳನ್ನು ತೋರಿದ ದಾರಿ, ಹಲವಾರು ಪ್ರತಿಭಾವಂತರು ತಮ್ಮ ಸ್ವಂತಿಕೆಯಿಂದ ಕಾವ್ಯ ರಚನೆಗೆ ಮುಂದಾದರು. ಪಂಜೆ ಮಂಗೇಶರಾಯರು, ಗೋವಿಂದ ಪೈ, ಕಡೆಂಗೊಂಡ್ಲು ಶಂಕರಭಟ್ಟ ಹಾಗೆ ಡಿ.ವಿ.ಜಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕುವೆಂಪು, ಬೇಂದ್ರೆ, ಪು.ತಿ.ನರಸಿಂಹಾಚಾರ್, ವಿ.ಸೀತಾರಾಮಯ್ಯ, ಗೋಪಾಲಕೃಷ್ಣ ಅಡಿಗ, ವಿ.ಕೃ.ಗೋಕಾಕ್, ಕೆ.ಎಸ್. ನರಸಿಂಹಸ್ವಾಮಿ ಇಂಥ ಅನೇಕ ಕವಿಗಳು ವಿಭಿನ್ನ ಬಗೆಯ ಕಾವ್ಯದ ವಸ್ತುಗಳನ್ನು ಎತ್ತಿಕೊಂಡು ಸುಂದರವಾದ ಮತ್ತು ಪ್ರಯೋಗಶೀಲವಾದ ಕಾವ್ಯವನ್ನು ರಚಿಸಿದರು. ಇದು ಕಾವ್ಯ ಬೆಳವಣಿಗೆಗೆ ಹಾಗೂ ವೈವಿಧ್ಯ ವಿಸ್ತಾರಗಳಿಗೆ ಪ್ರೇರಣೆ ನೀಡಿ ಆಧುನಿಕ ಕನ್ನಡ ಕಾವ್ಯದ ರಚನೆಗೆ ಕಾರಣವಾಯಿತು.

ಕುವೆಂಪು ಕಾವ್ಯ ಮೀಮಾಂಸೆಯ ಅಭಿವ್ಯಕ್ತಿವಾದವು ಭಾರತೀಯತೆ ಪ್ರಜ್ಞೆಯ ಚಿಂತನೆಯ ಜೊತೆಗೆ ಪಾಶ್ಚಾತ್ಯದ ಅವಲೋಕನವಿದೆ. ಮನಶಾಸ್ತ್ರೀಯ ನೆಲೆಯಲ್ಲಿ, ಯೋಗವಿಜ್ಞಾನದ ಮೂಲ, ತತ್ತ್ವಶಾಸ್ತ್ರಗಳ ಪರಿಚಯ ಕಾವ್ಯ ಮೀಮಾಂಸೆಯ ಕುರಿತಾಗಿನ ಮುಖ್ಯವಾಗಿ ಗಮನಿಸಬೇಕಾದ ಮಾತೆಂದರೆ, "ಒಬ್ಬ ಪ್ರತಿಭಾವಂತನಾದ ಕವಿ, ಸಾಹಿತ್ಯವನ್ನು ಸಾಹಿತ್ಯ ನಿರ್ಮಿತಿಯ ಸ್ವರೂಪವನ್ನು ಕುರಿತು ಮಾತನಾಡುವ ರೀತಿಗೂ ಅದೇ ವಿಷಯವನ್ನು ಕುರಿತು ಒಬ್ಬ ಶಾಸ್ತ್ರಕೋವಿದನಾದವನು ಮಾತನಾಡುವ ರೀತಿಗೂ ವ್ಯತ್ಯಾಸವಿದೆ. ಏಕೆಂದರೆ ಒಂದು ಹಂತದಲ್ಲಿ ಕ್ರಿಯಾಶೀಲವಾಗುವ ಅವರ ಸೃಜನ ಪ್ರತಿಭೆ, ಮತ್ತೊಂದು ಹಂತದಲ್ಲಿ ಚಿಂತನಶೀಲ ಪ್ರತಿಭೆಯಾಗಿ ಕೆಲಸ ಮಾಡುತ್ತದೆ ಎಂಬುದನ್ನು ಅವರ ಸಾಹಿತ್ಯ ನಿರ್ಮಿತಿ ಮತ್ತು ಸಾಹಿತ್ಯ ಚಿಂತನೆಯ ಬರಹಗಳು ಸಾಬೀತುಪಡಿಸುತ್ತವೆ."[೧]

ಕುವೆಂಪು ಅವರು ಅಂದು ಸಾಹಿತ್ಯದಲ್ಲಿ ಸಂಭವಿಸುತ್ತಿದ್ದ ಹೊಸತನವನ್ನು 'ನವೋದಯ' ಎಂಬ ಪಾರಿಭಾಷಿಕ ಪದದಿಂದ ನಿರ್ದೇಶಿಸಿದರೆಂಬುದು ಗುರುತಿಸಿಕೊಳ್ಳಬೇಕಾದ ಸಂಗತಿಯಾಗಿದೆ. 'ನಮ್ಮ ಕನ್ನಡ ಸಾಹಿತ್ಯದಲ್ಲಿಯೂ ನವಚೈತನ್ಯದ ಚಿಲುಮೆ ಚಿಮ್ಮುತ್ತದೆ... ಅನೇಕಾನೇಕ ಮಧುರ ಕಂಠದ ವಿಹಂಗಮಗಳು ಉಲಿಯತೊಡಗಿವೆ. ಈ ನವೋದಯದಲ್ಲಿ ನಮ್ಮ ನಾಡಿನ ಎದೆ ತಾವರೆಗಳು ಹಿಗ್ಗಿ ಅರಳುತ್ತಿವೆ'[೨] ಎಂಬ ಮಾತನ್ನು ಆಡಿದ್ದು ೧೯೨೪ರಲ್ಲಿ. ಈ ವಿಷಯವನ್ನು

ಕುವೆಂಪು 'ಕಾವ್ಯ ಮೀಮಾಂಸೆ'ಯ ಲೇಖನದಲ್ಲಿ ಜಿ.ಎಸ್.ಶಿವರುದ್ರಪ್ಪನವರು ಉಲ್ಲೇಖಿಸುತ್ತಾರೆ. 'ಶ್ರೀ' ಯವರ 'ಇಂಗ್ಲೀಷ್ ಗೀತ'ಗಳಿಂದ ಸಾಮಾನ್ಯವಾಗಿ ರೋಮ್ಯಾಂಟಿಕ್ ಎಂದು ಕರೆಯುವ ನವೋದಯ ಯುಗ ಪ್ರಾರಂಭವಾಯಿತು. ಇಂಗ್ಲೀಷ್ ಸಾಹಿತ್ಯದ ಪ್ರೇರಣೆಯಿಂದ ಕನ್ನಡದಲ್ಲಿ ಹೊಸ ರೂಪಗಳನ್ನು ಆವಿಷ್ಕಾರ ಮಾಡಿಕೊಳ್ಳಬೇಕೆಂಬ ನಿಲುವನ್ನು ನವೋದಯ ಸಾಹಿತ್ಯ ಚಳುವಳಿಯ ಒಂದು ತತ್ತ್ವ ಪ್ರಣಾಲಿಯನ್ನಾಗಿ ಘೋಷಿಸಿದ ಆಚಾರ್ಯ ಬಿ.ಎಂ.ಶ್ರೀ.ಯವರು. ಕನ್ನಡ ನವೋದಯವನ್ನು ಅವರು ಪುನರುಜ್ಜೀವನ ಎಂಬ ಮಾತಿನಿಂದ ನಿರ್ದೇಶಿಸುತ್ತಾ ಅದರ ಲಕ್ಷಣವನ್ನು ಹೀಗೆಂದು ಸ್ಪಷ್ಟಪಡಿಸುತ್ತಾರೆ – 'ಅದು ಬರಿ ಪುನರುತ್ಥಾನವಲ್ಲ, ಅನುಸರಣವಲ್ಲ, ಪುನರುಜ್ಜೀವನ ಎನ್ನುವುದು – ಒಂದು ಹೊಸ ನಿರ್ಮಾಣ, ಮರುಹುಟ್ಟು, ಆಳವಾದ ಸಮನ್ವಯ ಹೊಸದು ಹಳದು, ನಮ್ಮದು ಹೆರವರದು ಎಲ್ಲವನ್ನೂ ಹೊಂದಿಕೆ ಮಾಡುವುದು' ನವೋದಯ ಸಾಹಿತ್ಯ ಚಳುವಳಿಯ ಸೈದ್ಧಾಂತಿಕ ನೆಲೆಯನ್ನು ಶ್ರೀಯವರ ಈ ಹೇಳಿಕೆ ಸ್ಪಷ್ಟಪಡಿಸುತ್ತದೆ. ಕನ್ನಡ ಕಾವ್ಯದ ಈ ಹಂತದಲ್ಲಿ 'ಅನುವಾದ' ಹಾಗೂ ಅನುಸೃಷ್ಟಿಗಳ ಮೂಲಕ ಹೊಸ ಹುಟ್ಟನ್ನು ತರುವ ಕಾಳಜಿಗಳು ಅತ್ಯಂತ ಕ್ರಿಯಾಶೀಲವಾಗಿದ್ದ ಕಾರಣದಿಂದಲೇ ಈ ಕಾಲದ ಸಾಹಿತ್ಯವನ್ನು 'ನವೋದಯ' ಎಂದು ಗುರುತಿಸಲಾಗಿದೆ.

ಕವಿಯಾದವನು ತನ್ನ ಕವಿತೆಯ ಅಭಿವ್ಯಕ್ತಿಯ ಸಂದರ್ಭದಲ್ಲಿ ಕಾವ್ಯ ವಿಷಯ ಪರವಾದ ತನ್ನ ಅಭಿಪ್ರಾಯಗಳನ್ನು ಕೊಡಬಹುದು. ಕನ್ನಡದಲ್ಲಿ ಕವಿಗಳು ಕಾವ್ಯಮೀಮಾಂಸಕರೂ ಆಗಿರುವ ನಿದರ್ಶನಗಳಿವೆ (ಸಂಸ್ಕೃತದಲ್ಲಿ ಕವಿಗಳೂ, ಕಾವ್ಯಮೀಮಾಂಸಕರೂ ಆಗಿರುವುದು ವಿಶೇಷವಾಗಿದೆ). ತಮ್ಮ ಹಲವಾರು ಕವಿತೆಗಳಲ್ಲಿ ಕುವೆಂಪುರವರು ಕಾವ್ಯ ಚಿಂತನೆಯ ನೆಲೆಗಳನ್ನು ದಾಖಲಿಸುತ್ತಾರೆ, ಚರ್ಚಿಸುತ್ತಾರೆ. ಇದರಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವವಿದ್ದರೂ ಭಾರತೀಯ ತತ್ತ್ವದ ಮರೆವಿಲ್ಲದೆಯೇ ಚರ್ಚಿಸುವುದು ಇವರ ವೈಶಿಷ್ಟ್ಯವೆನಿಸುತ್ತದೆ. ಕುವೆಂಪು ಅವರ ಕವಿತೆಗಳಲ್ಲಿ ಕಂಡುಬರುವ ಕಾವ್ಯಮೀಮಾಂಸೆಯ ಚಿಂತನೆಗಳನ್ನು ಈ ಕೆಳಗಿನ ಅಂಶಗಳ ಮುಖಾಂತರ ವಿಶ್ಲೇಷಿಸಲಾಗಿದೆ.

'ಕಾವ್ಯವೆಂಬುದು ರಮಣೀಯವಾಗಿ ರಸಪೂರ್ಣವಾದುದು' ಎಂಬುದು ಪ್ರಾಚೀನ ಮೀಮಾಂಸಕರ ಅಭಿಪ್ರಾಯ. ನವೋದಯ ಕನ್ನಡ ಸಂದರ್ಭದಲ್ಲಿಯೂ ಕಾವ್ಯ ಕ್ರಿಯೆಯ ಈ ವಿವಿಧ ಮಗ್ಗಲುಗಳ ಪರಿಚಯವಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ವಿಸ್ತೃತವಾದ ಚರ್ಚೆಗಳು ನಡೆದಿವೆ. ಕುವೆಂಪು ಅವರ ಪದ್ಯ ಭಾಗದಲ್ಲಿಯೂ ಈ ಕುರಿತಾಗಿ ಬಹಳಷ್ಟು ಮಾಹಿತಿಗಳು ದೊರಕುತ್ತವೆ. ಸೃಷ್ಟಿ ಭಗವಂತನ ಲೀಲೆಯಿಂದ ನಡೆಯುತ್ತಿರುವುದು ಎಂಬ ನಮ್ಮ ಪ್ರಾಚೀನರ ನಂಬಿಕೆಯಂತೆಯೇ ಕವನದಲ್ಲಿ ಕವಿಯ ಕಾರ್ಯ ಮಹತ್ವದ್ದು. ಇದು ಸೃಷ್ಟಿಯಲ್ಲಿ ಭಗವಂತನ ಕಾರ್ಯದಂತೆಯೇ ಎಂಬುದು ಕುವೆಂಪುರವರ ವಿಚಾರವಾಗಿದೆ.

**'ಸೃಷ್ಟಯಲಿ ಸೃಷ್ಟಿಕರ್ತನು ; ಕವಿಯು ಕವನದಲಿ,'**[೨] ಎಂಬ ಮಾತಿನಲ್ಲಿ ಕಾವ್ಯ ಕುರಿತಾಗಿ ಚರ್ಚಿಸುವಾಗ ಕುವೆಂಪು ಭಾರತೀಯ ಕಾವ್ಯಮೀಮಾಂಸೆಯ ಪ್ರಭಾವಕ್ಕೊಳಗಾಗಿರುವುದು ಕಂಡುಬರುತ್ತದೆ. ಕಾವ್ಯದಲ್ಲಿ 'ಸೌಂದರ್ಯ' ಮಾತ್ರವಲ್ಲ, ಶಿವನು ಕಾವ್ಯದ ಕಣ್ಣು' ಎನ್ನುತ್ತಾರೆ.

ಇದು ಮಮ್ಮುಟನ "ಶಿವೇತರಕ್ಷತೆಯೇ" ಎಂಬ ಮಾತಿಗೆ ಹತ್ತಿರವಿದೆ. ಸೌಂದರ್ಯ ಹಾಗೂ ದರ್ಶನ ಮೇಳೈಸಿದಾಗ ಕವಿಗೆ ಆಗುವ ಆನಂದ ವರ್ಣಾತೀತ.

"ಸೌಂದರ್ಯೋಪಾಸನೆಗಿದೆ ಪೊಳ್ತು ;
ಬಾ, ಬಾ, ಸಾಧನೆಗೆ !
ಸೌಂದರ್ಯದಿ ಶಿವ ಮೈದೋರಿಹನೈ
ಬಾ ಆರಾಧನೆಗೆ !"[೪]

ಎನ್ನುವ ಕವಿ 'ಸೌಂದರ್ಯವೊಂದನ್ನೇ ಇರಿಸಿಕೊಂಡು,

"ಸೌಂದರ್ಯವೆನ್ನ ಹರಿ ! ಸೌಂದರ್ಯವೆನ್ನ ಹರ !
ಸೌಂದರ್ಯವೆನ್ನ ಅವ್ಯಕ್ತ ಬ್ರಹ್ಮ !"[೫]

"ಕುವೆಂಪು ಅವರ ದೃಷ್ಟಿ ಸೌಂದರ್ಯೈಕನಿಷ್ಠವಾದುದಲ್ಲ, ಶಿವಸಮನ್ವಿತವಾದುದ್ದು. "ಶಿವ ವಿರಹಿತವಾದ ಸೌಂದರ್ಯ ಅವರ ಪಾಲಿಗೆ ಅಗ್ರಹ್ಯವಾಗುತ್ತದೆ, ದೂಷ್ಯವಾಗುತ್ತದೆ. ಶಿವಕ್ಕಾಗಿಯೇ ಸೌಂದರ್ಯವನ್ನೊಲಿದ ರಸಋಷಿ ಚೇತನ ಅವರದು"[೬] ಎಂದು ಅವರ ಅಭಿಪ್ರಾಯ.

"ಪದಗಳೆಂಬ ಮಣಿಗಳೆಲ್ಲ
ಭಾವವೆಂಬ ದಾರದಲ್ಲಿ
ತಮಗೆ ತಾವೆ ಕೋದುಕೊಂಡು
ಕಬ್ಬಮಾಲೆಯಾಗಿ ಮೆರೆಯೆ"[೭]

ಹೀಗೆ 'ಕಾವ್ಯ' ಎನ್ನುವುದು ಭಾವವೆಂಬ ದಾರದಲ್ಲಿ ಸುರಿದಿರುವ ಪದಗಳೆಂಬ ಮಣಿಗಳು. ಈ ರೀತಿಯ ಭಾವ–ಕಾವ್ಯ ದೇಶ ಕಾಲ–ದಿನಗಳನ್ನು ಮೀರಿರುವುದು.

ಕಾವ್ಯದ ಯಶಸ್ಸಿಗೆ ಛಂದಸ್ಸು, ಅಲಂಕಾರ, ಅಷ್ಟಾದಶವರ್ಣನೆ ಮೊದಲಾದ ಪರಿಕರಗಳೆ ಕಾರಣವೆಂದು ತಿಳಿದು ಕಾವ್ಯ ರಚನೆ ಮಾಡಿದವರು ನಮ್ಮ ಪ್ರಾಚೀನ ಕವಿಗಳೆಲ್ಲರು. ಆದರೆ ಕುವೆಂಪು ಅವುಗಳಿಗೆ ಅತ್ಯಂತ ಕೊನೆಯ ಸ್ಥಾನವನ್ನು ಕೊಟ್ಟು, ಹೃದಯ, ಭಾವ, ರಸಗಳಿಗೆ ಮೊದಲ ಸ್ಥಾನವನ್ನು ನೀಡಿರುವುದನ್ನು ಅವರ ಕಾವ್ಯದ ಎಲ್ಲ ಕಡೆ ಗುರುತಿಸಬಹುದು.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ಕುವೆಂಪು ಸಮಗ್ರ ಗದ್ಯ ಸಂಪುಟ – ೧; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೧೯ ; ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨. ಜಿ.ಎಸ್.ಶಿವರುದ್ರಪ್ಪ ; ಕುವೆಂಪು ಪುನರಾವಲೋಕನ – ಪುಟ ೧೫೬–೧೫೭. ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೪೫೦, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೪. ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೩೦೧, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೫. ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೩೨೮, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೬. ಗಂಗೋತ್ರಿ – ಪುಟ ೩೮೪

೭. ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೯, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

* * * * * *

# ಇಂಗ್ಲಿಷ್ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವ

ಪುಟ್ಟಪ್ಪನವರು ಕುಪ್ಪಳಿಯಲ್ಲಿ ಹುಟ್ಟಿದ ಕಾಲಕ್ಕೆ, ಅದು ದಟ್ಟವಾದ ಕಾಡಿನ ನಡುವೆ ಇತ್ತು. ಅದು ಮಲೆನಾಡು. ಬಯಲು ಸೀಮೆಯವರಾದವರು ಅಲ್ಲಿಗೆ ಹೋಗಿ ತಲುಪುವುದು ಹೇಗೆ ಎಂಬುದನ್ನು ಕವಿ ತಮ್ಮ 'ಕರಿಸಿದ್ದ' ಎಂಬ ಕಥನ ಕವನದ ಆರಂಭದಲ್ಲಿ ಹೇಳಿದ್ದಾರೆ. ತೀರ್ಥಹಳ್ಳಿಯ ಕಳೆದು, ತುಂಗಾ ನದಿಯನ್ನು ದಾಟಿ, ಒಂಬತ್ತು ಮೈಲಿಗಳ ದೂರದಲ್ಲಿರುವುದೇ ಕುಪ್ಪಳಿ. ಮಲೆನಾಡಿನಲ್ಲಿ ಊರು ಎಂದರೆ ಒಂದು ದೊಡ್ಡ ಮನೆ. ಅದರ ಸುತ್ತಾ ಗದ್ದೆ ತೋಟಗಳಲ್ಲಿ ಕೆಲಸ ಮಾಡುವ ಒಕ್ಕಲಿನ ಬಿಡಾರಗಳು. ಕುಪ್ಪಳಿಯಲ್ಲಿ ಕುವೆಂಪುರವರ ಹಿರಿಯರ ಮನೆ ಹಸಿರಿನಿಂದ ಕಂಗೊಳಿಸುವ ಮಧ್ಯದಲ್ಲಿತ್ತು. ಅವರ ಮನೆಯ ಹಿಂಬದಿಗೆ ಬೆಟ್ಟ. ಕವಿ ಮುಂದೆ ಅದನ್ನು 'ಕವಿಶೈಲ' ಎಂದು ಕರೆದರು. ಆ ಬೆಟ್ಟದ ತುಂಬ ದಟ್ಟವಾದ ಕಾಡು. ಮನೆಯ ಸುತ್ತ ಮೈಲಿ ಮೈಲಿ ಪರ್ವತ ಪಂಕ್ತಿ.

ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ, ಮಲೆನಾಡಿನ ಸುತ್ತಮುತ್ತಾ ಎಲ್ಲಿಯೂ ಶಾಲೆ ಎಂಬುದು ಇರಲಿಲ್ಲ. ಕುವೆಂಪು ಅವರದ್ದು ತಕ್ಕ ಮಟ್ಟಿನ ಸಂಪತ್ತನ್ನು ಕಂಡಿದ್ದ ಮನೆ. ಆದ್ದರಿಂದ ಅಲ್ಲಿಗಾದರೂ ಅಕ್ಷರ ವಿದ್ಯೆ ಪ್ರವೇಶಿಸುವ ಸಾಧ್ಯತೆ ಇತ್ತು. ಆದರೆ ಇವರ ಮನೆಯ ಸುತ್ತ ಗುಡಿಸಲುಗಳಲ್ಲಿ, ಸಣ್ಣ ಪುಟ್ಟ ಮನೆಗಳಲ್ಲಿ, ವಾಸಿಸುತ್ತಿದ್ದ ಕೆಲಸದಾಳುಗಳು ತಲೆಮಾರುಗಳ ಕಾಲ ಅಕ್ಷರ, ಓದು, ಬರೆಹ ಯಾವುದನ್ನೂ ಕಂಡವರಲ್ಲ. ಅಂಥದ್ದರಲ್ಲಿ ಬಾಲಕ ಪುಟ್ಟಪ್ಪನಿಗೆ ವಿದ್ಯೆ ದೊರೆತದ್ದು, ಅದರಲ್ಲೂ ಅಧುನಿಕ ವಿದ್ಯೆ ದೊರೆತದ್ದು ಹೇಗೆ? ಅದೂ ಒಂದು ಪವಾಡ ಎಂಬಂತೆಯೇ ನಡೆಯಿತು. ಅಂದಿನ ಮಲೆನಾಡಿನ ಅನುಕೂಲಸ್ಥ ಹಿರಿಯರಿಗೆ ಅಕ್ಷರ ಮಹಿಮೆಯ ಅರಿವಿತ್ತು. ಅವರೆಲ್ಲರೂ ಸ್ವತಃ ಅಕ್ಷರ ಬಲ್ಲವರಾಗಿದ್ದು, ಪುಸ್ತಕಗಳನ್ನು ಓದಿದ್ದವರಾಗಿಲ್ಲದಿದ್ದರೂ, ರಾಮಾಯಣ, ಮಹಾಭಾರತಗಳ ಕಥೆಗಳನ್ನು ಕೇಳಿ ತಿಳಿದವರಾಗಿರುತ್ತಿದ್ದರು. ಜೊತೆಗೆ ತಮ್ಮ ಮುಂದಿನ ತಲೆಮಾರಿನವರಾದರೂ ಓದು-ಬರಹಗಳನ್ನು ಬಲ್ಲವರಾಗಬೇಕೆಂಬ ಆಸೆ ಅವರಿಗಿರುತ್ತಿತ್ತು. ತಮ್ಮ ಮಕ್ಕಳು ಮೊಮ್ಮಕ್ಕಳಿಗೆ ಅಕ್ಷರ ವಿದ್ಯೆಯನ್ನು ನೀಡಬಲ್ಲ ಉಪಾಧ್ಯಾಯರುಗಳನ್ನು ಅವರನ್ನು 'ಐಗಳು' ಎಂದು ಕರೆಯಲಾಗುತ್ತಿತ್ತು. ಹೊರಗಿನಿಂದ ಆಮದು ಮಾಡಿಕೊಳ್ಳುತ್ತಿದ್ದರು. ಹಾಗೆ ಆಮದಾದ 'ಐಗಳು' ಬಹಳ ಕಾಲ ಉಳಿಯುತ್ತಿರಲಿಲ್ಲ.

ಇಂಥ ಸಮಯದಲ್ಲಿ ಆ ಐಗಳ ಪಂಕ್ತಿಯಲ್ಲಿ "ರೋಮನ್ ಕ್ಯಾಥೊಲಿಕ್ ಜಾತಿಗೆ ಸೇರಿದ್ದ, ಮಂಗಳೂರಿನವರಾದ ಆನಂದರಾಯರೆಂಬುವರು" ಉಪಾಧ್ಯಾಯರಾಗಿ ಬಂದರು. ಅದುವರೆಗೂ ಮಲೆನಾಡಿನ ಮಕ್ಕಳಿಗೆ ತಿಳಿದಿರದಿದ್ದ 'ಮೇಷ್ಟರು, ಸಾರ್' ಎಂಬ ಎರಡು ಇಂಗ್ಲಿಷ್ ಪದಗಳು ರೂಢಿಗೆ ಬಂದವು. ನೂತನ ರೀತಿಯ ವಿದ್ಯಾಭ್ಯಾಸಕ್ಕೆ ಬುನಾದಿಯನ್ನು ಅವರು ಹಾಕಿದರು. ಅದುವರೆಗೂ ಮಕ್ಕಳು ಕಾಣದಿದ್ದ 'ಪುಸ್ತಕಗಳೂ ಬಳಕೆಗೆ ಬಂದವು. ಇಂಗ್ಲಿಷ್ ವರ್ಣಮಾಲೆಯನ್ನು ತಿದ್ದಿಸಿದರು. ಹಿಂದಿನ ಐಗಳಂತೆ ಅವರು ಮಕ್ಕಳನ್ನು ಕಂಡಾಬಟ್ಟೆ ಬೈಯ್ಯುತ್ತಿರಲಿಲ್ಲ. ಆನಂದರಾಯರ ಅನಂತರ ಪುಟ್ಟಪ್ಪನವರ ಮೇಲೆ ತಕ್ಕಮಟ್ಟಿಗೆ ಪ್ರಭಾವ ಬೀರಿದ ಅಧ್ಯಾಪಕರೆಂದರೆ ಮೋಸೆಸ್ ಎನ್ನುವರು. ಪಾಠ ಪ್ರವಚನಗಳು ಅಷ್ಟು ಹೆಚ್ಚಾಗಿ ಇಲ್ಲದಿದ್ದುದ್ದರಿಂದಲೂ, ಎಳೆತನದಿಂದಲೇ ಕಾಡು, ಬೆಟ್ಟ, ನದಿಗಳು, ಸೂರ್ಯೋದಯ, ಸೂರ್ಯಾಸ್ತಗಳು ಬಲವಾದ ಆಕರ್ಷಣೆಯನ್ನು ಒಡ್ಡಿದ್ದುದರಿಂದಲೂ ಬಾಲಕ ಪುಟ್ಟಪ್ಪನವರು ಸರ್ವದಾ ಗಿರಿವನಪ್ರಿಯರಾಗಿ ವಿಕಾಸಗೊಳ್ಳುತ್ತಿದ್ದರು.

ಕವಿಗಳೆಂದರೆ ಯಾರು? ಕವಿಯ ಗುರಿಯೇನು? ಕವಿತೆ ಎಂದರೇನು? ಕಾವ್ಯದ ಉದ್ದೇಶ ಏನು? ಎಂಬ ವಿಚಾರಗಳು ಕುವೆಂಪು ಅವರನ್ನು ಬಾಲ್ಯದಿಂದಲೇ ಕಾಡಿದ್ದ ಪ್ರಶ್ನೆಗಳು. ಈ ಪ್ರಶ್ನೆಗಳಿಗೆ ಪರಂಪರೆ ಮತ್ತು ಹೊಸ ಸಂಸ್ಕೃತಿಗಳ ಸಂಘರ್ಷದಲ್ಲಿ ಉತ್ತರಗಳನ್ನು ಕಂಡುಕೊಳ್ಳಲು ಅವರು ತೊಡಗುತ್ತಾರೆ. ಕವಿತೆ ಎಂದರೆ ಆತ್ಮವು ತನಗೆ ತಾನೇ ಮಾಡಿಕೊಳ್ಳುವ ಒಂದು ಅಲೌಕಿಕವಾದ ಸ್ವ-ಆರಾಧನೆ. ಆನಂದವೇ ಅದರ ಶೀಲ ಎನ್ನುತ್ತಾರೆ ಕುವೆಂಪು. ೨೦ನೇ ಶತಮಾನದ ಆದಿಭಾಗದಲ್ಲಿ ಬರವಣಿಗೆಯಲ್ಲಿ ತೊಡಗಿದ ಕುವೆಂಪು ಅವರು ಹೊಸದು ಹಳೆಯದರ ಸಂಕೀರ್ಣ ಪದರುಗಳಲ್ಲಿ ಕಾವ್ಯ ಮೀಮಾಂಸೆಯ ಬಲವಾದ ತಳಹದಿಯಲ್ಲಿ ಕಟ್ಟಲು ಮುಂದಾಗುತ್ತಾರೆ.

ವೈಚಾರಿಕ ರಹಿತ ಅವೈಜ್ಞಾನಿಕ ನೆಲೆಗಳನ್ನು ವಿಮರ್ಶಿಸಿ ಮಾನವೀಯ ಮೌಲ್ಯಗಳ ಶೋಧನೆಗೆ ತೊಡಗಿದ್ದು ಕುವೆಂಪು ಅವರ ಸಂವೇದನೆಯ ವೈಶಿಷ್ಟ್ಯವಾಗಿದೆ. ಹೀಗಾಗಿ ಪ್ರಾದೇಶಿಕ ಪರಿಸರ ಹಾಗೂ ರಾಷ್ಟ್ರೀಯ ಸಾಂಸ್ಕೃತಿಕ ಸಂದರ್ಭದಲ್ಲಿ ಅವರ ಕೃತಿಗಳಿಂದ ಉತ್ಪನ್ನವಾಗುವ, ಪ್ರಕಟವಾಗುವ, ಧ್ವನಿಸುವ ವೈಚಾರಿಕ ಆಕೃತಿಗಳು, ಚಿಂತನೆಗಳು ನಿರಂತರ ಅಭ್ಯಾಸ ಯೋಗ್ಯವಾದವೂ, ಚಿಂತನಶೀಲವೂ ಆಗಿದೆ.

ಸರಿಸುಮಾರು ಈ ಸಮಯದಲ್ಲಿ ಪುಟ್ಟಪ್ಪನವರ ಭಾಗ್ಯವೆಂಬಂತೆ ಅವರ ಬಂಧುಗಳಾದ ಹೊಸಮನೆ ಮಂಜಪ್ಪಗೌಡ ಎಂಬುವರಿಂದ ಅವರಿಗೆ ಇಂಗ್ಲಿಷ್ ಕಾವ್ಯದ ಬಾಗಿಲು ತೆರೆಯಿತು. ಆ ವೇಳೆಗಾಗಲೇ ಪುಟ್ಟಪ್ಪನವರು ತಮ್ಮ ಪಠ್ಯ ಪುಸ್ತಕದಲ್ಲಿದ್ದ ವರ್ಡ್ಸ್‌ವರ್ತ್ ಮುಂತಾದವರ ಕೆಲವು ಕವನಗಳನ್ನು ಓದಿಕೊಂಡಿದ್ದರು. ಒಂದು ದಿನ ಮಂಜಪ್ಪಗೌಡರು ಇವರನ್ನು ಕರೆದುಕೊಂಡು ಕಾಡಿನ ದಾರಿಯಲ್ಲಿ ನಡೆಯುತ್ತಾ ಲಾಂಗ್‌ಫೆಲೋ ಕವಿಯ **ದಿ ಸಾಮ್ ಆಫ್ ಲೈಫ್** ಕವನದ ಪಂಕ್ತಿಗಳನ್ನು ನೆನಪಿನಿಂದ ಹೇಳುತ್ತಾ ವಿವರಿಸಿದರು. ಆಗ ತಮಗಾದ ಅನುಭವಕ್ಕೆ ಪುಟ್ಟಪ್ಪನವರು

ತಮ್ಮ ನೆನಪಿನ ದೋಣಿಯಲ್ಲಿ ಹೀಗೆ ಉಕ್ತಿ ನೀಡಿದ್ದಾರೆ: "ನನ್ನ ಆತ್ಮಕ್ಕೆ ಚೈತನ್ಯ ಪೂರ್ಣವಾದ ಒಂದು ಮಂತ್ರದೀಕ್ಷೆಯನ್ನು ಕೊಟ್ಟಿತು ಆ ಕವಿತೆ."

ಇಲ್ಲಿಂದ ಮುಂದೆ ಪುಟ್ಟಪ್ಪನವರ ಇಂಗ್ಲಿಷ್ ಪ್ರೇಮ ಇನ್ನು ಹೆಚ್ಚಾಗಿ ಬೆಳೆಯ ತೊಡಗಿತು. ಮಲೆನಾಡಿನ ಮೂಲೆಯ ಒಂದು ಹಳ್ಳಿಯಿಂದ ಅಂದಿನ ತುಂಬಾ ಪ್ರಸಿದ್ಧವಾಗಿದ್ದ, ಮಹಾರಾಜರ ರಾಜಧಾನಿಯಾಗಿದ್ದ ಮೈಸೂರಿಗೆ ಪ್ರಯಾಣ ಬೆಳೆಯಿತು. ಅಲ್ಲಿ ಹಾರ್ಡ್‌ವಿಕ್ ಶಾಲೆಗೆ ಸೇರಿ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಶಾಲೆಯ ಓದಿನ ಜೊತೆಗೆ ಷೆಲ್ಲಿ, ವರ್ಡ್ಸ್‌ವರ್ತ್, ಕೀಟ್ಸ್ ಮುಂತಾದವರ ಕವನಗಳ ಸುದೀರ್ಘವಾದ ಅಧ್ಯಯನ ನಡೆಯಿತು. ಇನ್ನೂ ಎಷ್ಟೋ ಮಹತ್ವದ ಇಂಗ್ಲಿಷ್ ಕಾದಂಬರಿಗಳು, ಟಾಲ್‌ಸ್ಟಾಯ್ ಮುಂತಾದವರ ಮಹಾ ಕಾದಂಬರಿಗಳು, ಪೌರ್ವಾತ್ಯ, ಪಾಶ್ಚಾತ್ಯ, ತತ್ವಶಾಸ್ತ್ರ ಗ್ರಂಥಗಳು ಹೈಸ್ಕೂಲ್ ವಿದ್ಯಾರ್ಥಿಯಾದ ಪುಟ್ಟಪ್ಪನವರ ಚೇತನದ ಭಾಗಗಳಾದವು. ಅವರ ಪ್ರತಿಭೆ, ಶ್ರದ್ಧೆಗಳು ಜಗತ್ತಿನ ಮಹಾಕೃತಿಗಳ ಅಧ್ಯಯನ ಸರಳವಾಗುವಂತೆ ಮಾಡಿದವು.

ಇಂಗ್ಲಿಷ್ ಕವಿಗಳ ಕವನಗಳು ಪುಟ್ಟಪ್ಪನವರ ಮೇಲೆ ಇಷ್ಟು ಗಾಢವಾದ ಪ್ರಭಾವವನ್ನು ಬೀರಿದ್ದರಿಂದ, ಅವರು ಇಂಗ್ಲಿಷಿನಲ್ಲಿ ಕವನಗಳನ್ನು ರಚಿಸಿದರು. ಅವರಿಗೆ ಆ ವೇಳೆಗೆ ದೊರೆತಿದ್ದ ಇಂಗ್ಲಿಷ್ ಭಾಷಾ ಸಂಪತ್ತು ಹಾಗೂ ಇಂಗ್ಲಿಷ್ ಕಾವ್ಯ ಛಂದಸ್ಸಿನಲ್ಲಿ ಅವರು ಆಗಲೇ ಪಡೆದುಕೊಂಡಿದ್ದ ವಿದ್ವತ್ತು ಇವುಗಳನ್ನು ಅವರು ಆ ಕಾಲದಲ್ಲಿ, ಎಂದರೆ ಅವರು ಹೈಸ್ಕೂಲಿನಲ್ಲಿದ್ದಾಗಲೇ ರಚಿಸಿದ ಇಂಗ್ಲಿಷ್ ಕವನಗಳಲ್ಲಿ ಕಾಣಬಹುದು. ಆಗಲೇ ಅವರು ನೂರಾರು ಕವನಗಳನ್ನು ಬರೆದರು. ಅವರಿಗೆ ಮೂಲ ಸಾಮಗ್ರಿ ಕನ್ನಡ ನಾಡಿನ ಮಲೆನಾಡು ಅವರಿಗೆ ಒದಗಿಸಿದ್ದ ಸೌಂದರ್ಯಾನುಭೂತಿ, ಮತ್ತು ಭಾರತದಲ್ಲಿ ನಡೆದುಹೋಗಿದ್ದ ಅನೇಕಾನೇಕ ಐತಿಹಾಸಿಕ ಘಟನೆಗಳು. ಅವರ ಇಂಗ್ಲಿಷ್ ಕವನಗಳನ್ನು ಅವರ ಮಿತ್ರರು ಮೆಚ್ಚುವುದಿರಲಿ, ಅವರ ಹಿರಿಯರು, ಅಧ್ಯಾಪಕರುಗಳೇ ಓದಿ ಆಶ್ಚರ್ಯಮೂಕರಾದರು. ಕಾರಣ ಇಂಗ್ಲಿಷ್ ಭಾಷೆಯ ಮೇಲೆ ಅವರು ಆ ವೇಳೆಗಾಗಲೇ ಸಾಧಿಸಿದ್ದ ಪ್ರಭುತ್ವ, ಅಲ್ಲಿನ ಭಾವತೀವ್ರತೆ, ಛಂದಸ್ಸಿನ ವೈವಿಧ್ಯಗಳನ್ನು ಅವರು ಕಾವ್ಯಕ್ಕೆ ಬಳಸಿದ ರೀತಿ, ಉಪಮೆ, ರೂಪಕಗಳ ಸಂಪತ್ತು ಇತ್ಯಾದಿಗಳು.

"ಕುವೆಂಪು ಪುಸ್ತಕಗಳಿಂದ ಕಲಿತದ್ದಕ್ಕಿಂತ ಸುತ್ತಮುತ್ತಣ ಪ್ರಪಂಚದಿಂದ ನವನವೋನ್ಮೇಶ ಶಾಲಿನಿಯಾದ ಪ್ರಕೃತಿಯಿಂದ ಕಲಿತದ್ದೇ ಹೆಚ್ಚು. ಪ್ರಕೃತಿ ಅವರ ಮೊದಲ ಗುರು, ಪ್ರಕೃತಿ ಮಾತೆಯ ಮುಂದೆ ಇವರು ಹಸುಗೂಸು. ಪ್ರಕೃತಿಯನ್ನು ತನ್ಮಯರಾಗಿ ನೋಡುತ್ತಾ ನೋಡುತ್ತಾ ಆತ್ಮ ಸಾಕ್ಷಾತ್ಕಾರ ಪಡೆದರು."[೧] ಕುವೆಂಪುರವರ ಕಾವ್ಯಗಳಿಗೆ ಸ್ಫೂರ್ತಿ ಬಂದದ್ದು ಎರಡು ಕಡೆಯಿಂದ, ಒಂದು ಜನ ಸಮೂಹ, ಮತ್ತೊಂದು ಪ್ರಕೃತಿ ಕಡೆಯಿಂದ. ಕವಿ ಸಾಕ್ಷಿಭೂತನಾಗಿ ಇವೆಲ್ಲವನ್ನು ನೋಡಿ ಭಾಷೆಯ ಮೂಲಕ ಕನ್ನಡಿಸುತ್ತಾನೆ. ಅದಕ್ಕೆ ಉದಾಹರಣೆಯಾಗಿ ಈ ಕವನ ಸಾಕ್ಷಿಯಾಗಿದೆ.

"ಕವಿಹೃದಯವೊಂದು ವೀಣೆ
ಲೋಕವದನು ಮಿಡಿವುದು
ವ್ಯಕ್ತಿತನವೇ ಕವಿಗೆ ಇಲ್ಲ
ಅವನು ಇಲ್ಲ ಅಥವಾ ಎಲ್ಲಾ
ಎಂತೊ ನಾಡಿನೊಡಲ ನಾಡಿ
ಎಂತುಟಾಸೆಯಿಹುದೊ ನೋಡಿ,
ಎಂತೊ ಜನದ ಮೋಕವಾಣಿ
ಅಂತೆ ತಂತಿ ನುಡಿವುದು"[೨]

ಅವರ ಕೆಲವು ಹಾಡುಗಳು "ಸಿರಿಬನದೇವಿಯ ಬೊಕ್ಕಸದಿಂದ ಕದ್ದವು. ಕೆಲವು ಸುಂದರ ಋತುಗಳ ಸಿರಿಗೈಯಿಂದ ಸುಲಿದವು. ಮತ್ತೆ ಕೆಲವು ನೇಸರ ಚಂದಿರ ತಾರೆಗಳಿಂದ ಬೇಡಿ ತಂದವು. ರಂಗು, ತಿಮ್ಮು, ಗೌರಿ, ಗಿರಿಜೆ ಮೊದಲಾದವರಿಂದ ಸಾಲ ಪಡೆದವು ಕೆಲವು."[೩] ಅವರು ಶಾಲೆಯಲ್ಲಿ ಕಲಿತದ್ದು ಅಲ್ಲ, ಗಿರಿನದಿಕಂದರನಿರ್ಝುರಿಣಿ, ರವಿಶಶಿತಾರೆ, ಕಾಜಾಣ, ಕೋಗಿಲೆ, ತೇನೆ, ಕಾಮಳ್ಳಿ, ಪಿಕಳಾರ, ಮಿಂಚುಳ್ಳಿ, ಹುಲಿ, ಹಂದಿ, ದೊಡ್ಡಕಡ, ಮಿಗ, ಮುಸಿಯ, ಕೋಡುಗೆ, ಎರಳೆ, ಸಾರಂಗ, ಬರ್ಕ, ಉಡ, ಸೀತಾಳಿ, ಕೇದಗೆ, ಬಕುಳ, ಮಲ್ಲಿಗೆ, ಸುರಿ, ಸುರ, ಹೊನ್ನೆ, ಉದಯಾಸ್ತ, ಋತು ಪರಿವರ್ತನೆ – ಇವುಗಳ ಜೊತೆಗೆ ಇನ್ನೂ ಹಲವಾರು ಪ್ರಾಕೃತಿಕ ವೈಚಿತ್ರ್ಯಗಳು ಸೇರಿಕೊಂಡು ಒಂದೊಂದು ಅವರಿಗೆ ಗುರುವಾಗಿ ಅವರನ್ನು ನಡೆಸಿ ನುಡಿಸಿ ಸೃಷ್ಟಿಸಿವೆ.

ಪುಟ್ಟಪ್ಪನವರಿಗೆ ಮುಂದೆ ಮೈಸೂರು ಎಲ್ಲಾ ಅಭ್ಯುದಯದ ಮೂಲ ನೆಲೆಯಾಗಿ ನಿಂತರೂ ಅವರು ಕುವೆಂಪು ಆಗಿ ರೂಪುಗೊಳ್ಳಲು ಮಲೆನಾಡಿನ ನಿಸರ್ಗ ವೈಭವವೇ ಕಾರಣವಾಗಿದ್ದು ಸ್ಪಷ್ಟ. ಪುಟ್ಟಪ್ಪನವರು ಬಿ.ಎ. ತರಗತಿ ಸೇರುವ ಹೊತ್ತಿಗೆ ಪಾಶ್ಚಾತ್ಯ ಸಾಹಿತ್ಯವನ್ನು ಸಂಪೂರ್ಣವಾಗಿ ಕರಗತ ಮಾಡಿಕೊಂಡಿದ್ದರು. ಇಂಗ್ಲಿಷ್ ಸಾಹಿತ್ಯದ ಜಗತ್ ಪ್ರಸಿದ್ಧ ಕವಿಗಳು, ನಾಟಕಕಾರರು, ಸಾಹಿತ್ಯ ವಿಮರ್ಶಕರು, ಕಾವ್ಯ ಮೀಮಾಂಸಕರು, ಪ್ರಬಂಧಕಾರರು ಬುದ್ಧಿಗೆ ಪುಷ್ಟಿಯನ್ನು ಭಾವಕ್ಕೆ ಕ್ರಾಂತಿಯನ್ನು ಒದಗಿಸಿದರು. ಕುವೆಂಪುರವರಿಗೆ ಆರಂಭದಲ್ಲಿ ಲೇಖನಗಳು, ಭಾಷಣಗಳಿಂದ ಕೂಡಿದ ದೇಶ ಪ್ರೇಮದ ಮೊದಲಿಗೆ ಕುವೆಂಪುರವರಿಗೆ ಸಾಹಿತ್ಯ ಸಂಬಂಧವಾದ ವ್ಯುತ್ಪತ್ತಿ ಆಂಗ್ಲಭಾಷೆಯ ಮೂಲಕ ಲಭ್ಯವಾದುದು ನೂರಕ್ಕೆ ನೂರು ಭಾಗ ಸತ್ಯವಾದ ಮಾತು. ಇದನ್ನು ಸ್ವತಃ ಕುವೆಂಪುರವರು ಅನುಮೋದಿಸುತ್ತಾರೆ.

"ಇಂಗ್ಲಿಷ್ ಸಾಹಿತ್ಯವು ನನಗೆ ಗುರು, ಪಾಶ್ಚಾತ್ಯದಿಂದ ಬಿಡಿಸಿಕೊಳ್ಳುತ್ತೇನೆನ್ನುವುದು ತಪ್ಪು, ಏಕೆ ಬಿಡಿಸಿಕೊಳ್ಳಬೇಕು ನಾಕಾಣೆ, ಒಳ್ಳೆಯ ಗಾಳಿ, ಯಾವ ಕಡೆಯಿಂದ ಬಂದರೂ ಅದನ್ನು ಸೇವಿಸುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು. ಒಂದು ಕಡೆ ಜೈ ಜಗತ್ ಎನ್ನುತ್ತಾ ಮತ್ತೊಂದು ಕಡೆ ಕಿಟಕಿ ಬಾಗಿಲುಗಳನ್ನೆಲ್ಲಾ ಮುಚ್ಚಿಕೊಂಡು ನರಳುವುದು ಮೂರ್ಖತನವಾಗುತ್ತದೆ.

ಇಂಗ್ಲೀಷಿನವರು ಭಾರತಕ್ಕೆ ಬರದಿದ್ದರೆ ನಾನು ಕುಪ್ಪಳಿಯಲ್ಲಿ ಸಗಣಿ ತಟ್ಟಿಕೊಂಡು, ಬ್ರಾಹ್ಮಣರ ಗದ್ದೆ ಉತ್ತುಕೊಂಡಿರುತ್ತಿದ್ದೆ. ಅವರೊಡನೆ ಕ್ರೈಸ್ತ ಮಿಷನರಿಗಳು ಬರದೆ ಇದ್ದಿದ್ದರೆ ನಾನು "ಶ್ರೀ ರಾಮಾಯಣ ದರ್ಶನಂ" ಬರೆದ ಕವಿಯಾಗುತ್ತಿರಲಿಲ್ಲ. ವೈದಿಕರ ಮತ ಮೌಢ್ಯದ ಕೆಸರುಸುಬಿನಲ್ಲಿ ಒದ್ದಾಡುವ ಮೂಢ ಶೂದ್ರ ಹಂದಿಯಾಗಿರುತ್ತಿದೆ."[೪]

ಕುವೆಂಪುರವರಿಗೆ ಸೃಜಿಸಿದ್ದು ಇಂಗ್ಲೀಷ್ ಭಾಷಾ ಸಾಹಿತ್ಯವೆಂಬುದು ಕವಿಯ ಸ್ಪಷ್ಟ ನುಡಿ. ಆದ್ದರಿಂದಲೇ ಕುವೆಂಪುರವರ ಕವಿತೆಗಳು ಪ್ರಾರಂಭದಲ್ಲಿ ರಚನೆಗೊಂಡಿದ್ದು ಇಂಗ್ಲಿಷ್ ಭಾಷೆಯಲ್ಲಿ ಆಂಗ್ಲಕವಿತೆಗಳಿಗೆ ಮಾರುಹೋಗಿದ್ದ ಕವಿ ಎಸ್.ಎಸ್.ಎಲ್.ಸಿ. ತರಗತಿಯಲ್ಲಿ ಓದುತ್ತಿದ್ದಾಗಲೇ, ೧೯೨೨ರಲ್ಲಿ Beginner's Muse ಎಂಬ ಹದಿನಾರು ಪುಟದ ಪುಸ್ತಕ ಪ್ರಕಟಿಸಿದರು. ಮುಂದೆ ಆಂಗ್ಲಭಾಷೆಯ ಹೆಚ್ಚು ಕವಿತೆಗಳನ್ನು ಬರೆಯತೊಡಗಿದ ಅವರ ಬರವಣಿಗೆಯನ್ನು ಕನ್ನಡಕ್ಕೆ ತಿರುಗಿಸಿದ್ದು ಐರಿಷ್ ಕವಿ ಜೇಮ್ಸ್ ಕಸಿನ್ಸ್. 'ಮಾತೃ ಭಾಷೆಯಾಲ್ಲಿ ಮಾತ್ರ ಸೃಜನಶೀಲ ಕಾವ್ಯ ಅರಳಲು ಸಾಧ್ಯ' ಎಂಬ ಅವರ ಮಾತನ್ನು ಕುವೆಂಪುರವರು ಮೇಲ್ನೋಟಕ್ಕೆ ತಿರಸ್ಕರಿಸಿದಂತೆ ಕಂಡರು, ಅವರ ಅಂತರಂಗ ಸ್ವೀಕರಿಸಿತ್ತು. ಆದ್ದರಿಂದ 'April' ಎಂಬ ತಮ್ಮ ಆಂಗ್ಲ ಕವನವನ್ನು ಕನ್ನಡಕ್ಕೆ 'ಚೈತ್ರ' ಎಂಬ ಹೆಸರಿನಲ್ಲಿ ಅನುವಾದಿಸಿದರು.

ಮುಂದೆ ಅವರ ಬರವಣಿಗೆಯು ಕನ್ನಡದ ಮಲೆನಾಡಿನ ಸೊಗಡು ತುಂಬಿದ ಕವಿತೆ, ಕತೆ, ಕಾದಂಬರಿಗಳು, ಮಹಾಕಾವ್ಯ, ವಿಮರ್ಶೆ ಎಲ್ಲವೂ ಒಂದೊಂದಾಗಿ ಮೂಡಿ ಬಂದವು. ಕನ್ನಡ ಸಾಹಿತ್ಯ ಶ್ರೀಮಂತಿಕೆ ಹೆಚ್ಚಿಸಲು ಕಾರಣರಾದ ಕುವೆಂಪುರವರ ವಿಷಯದಲ್ಲಿ ಜೇಮ್ಸ್ ಕಸಿನ್ಸ್‌ರವರಿಗೆ ಋಣಿಯಾಗಲೇಬೇಕು. ಕನ್ನಡ ಪರ ಧೋರಣೆ ಚಿಂತನೆಗಳು ಅವರ ಭಾಷಣಗಳಲ್ಲಿ ಪ್ರಬಂಧಗಳಲ್ಲಿ ಬಹು ಗಟ್ಟಿ ಧ್ವನಿಯಲ್ಲೇ ಅಭಿವ್ಯಕ್ತಿಗೊಂಡವು. ಮಲೆನಾಡಿನ ರುದ್ರ ರಮಣೀಯ ಸೌಂದರ್ಯ ವಿಧವಿಧವಾದ ವರ್ಣನೆಗಳೊಂದಿಗೆ ಅಭಿವ್ಯಕ್ತಗೊಂಡಿತು. ಆದರೂ ಕುವೆಂಪುರವರ ಇಂಗ್ಲಿಷ್ ಭಾಷೆಯ ಬಗ್ಗೆ ಇದ್ದ ಅಭಿಮಾನ ಕಡಿಮೆಯೇನು ಆಗಲಿಲ್ಲ. "ಮಲೆನಾಡಿನ ಪ್ರಕೃತಿ ಅನುಭವ ತನ್ನ ಕನ್ನಡ ಕವಿತೆಗಳಿಗಿಂತ ಹೆಚ್ಚಾಗಿ ನಾನು ಬರೆದ ಇಂಗ್ಲಿಷ್ ಕವನಗಳಲ್ಲಿ ಕಾಣಿಸಿಕೊಂಡಿವೆ. ನನ್ನ ನೆನಪಿನ ದೋಣಿಯಲ್ಲಿ ಅಷ್ಟೊಂದು ಇಂಗ್ಲಿಷ್ ಕವನಗಳನ್ನು ನಾನು ಕೊಟ್ಟಿರುವ ಕಾರಣವೇ ಅದು."[೫] ಎಂದು ಹೇಳುವ ಅವರ ಮಾತುಗಳು ಇಂಗ್ಲಿಷ್ ಭಾಷೆ ಅವರ ಮೇಲೆ ಉಂಟು ಮಾಡಿದ ಪ್ರಭಾವವನ್ನು ಮನದಟ್ಟು ಮಾಡುತ್ತದೆ.

ಕುವೆಂಪುರವರ ಓದುವ ದಾಹ ಅಪಾರವಾಗಿತ್ತು. ನಗರ ಗ್ರಂಥಾಲಯವನ್ನು ಮೊದಲ ಸಲ ಪ್ರವೇಶ ಮಾಡಿದ ತಕ್ಷಣ ಸಾಲು ಸಾಲಾಗಿ ಜೋಡಿಸಿರುವ ದೊಡ್ಡ ದೊಡ್ಡ ಗ್ರಂಥಗಳನ್ನು ನೋಡಿ ರೋಮಾಂಚನಗೊಳ್ಳುತ್ತಾರೆ. ಎಲ್ಲವನ್ನೂ ಓದಿಬಿಡುವ ತವಕ ಇಮ್ಮಡಿ ನೂರ್ಮಡಿಯಾಗುತ್ತದೆ. ದೊಡ್ಡ ದೊಡ್ಡ ಪಾಶ್ಚಾತ್ಯ ಕಾವ್ಯ ಸಂಪುಟಗಳು ಅರ್ಥವಾಗದಿದ್ದರೂ ಓದುವ ಹುಚ್ಚು ಕಡಿಮೆಯಾಗಲೇ ಇಲ್ಲ. ಉತ್ತಮ ಮಾರ್ಗದರ್ಶನದ ಕೊರತೆಯಿಂದಾಗಿ ಕುವೆಂಪುರವರು ಏಕಾಂಗಿಯಾಗಿ ತಾವೇ

ಅರ್ಥೈಸಿಕೊಳ್ಳಲು ಪ್ರಯತ್ನಿಸಿ ಯಶಸ್ವಿಯಾದರು. "ಸಾಹಿತ್ಯದೊಡನೆ ಹೋರಾಡಿ ಅರ್ಥದೊಡನೆ ಗುದ್ದಾಡಿ ತಪ್ಪೋ ನೆಪ್ಪೋ ಭಾವನೆಗಳೊಡನೆ ಗರಡಿಯಾಡಿ, ನನ್ನ ಬುದ್ಧಿಗೆ ವ್ಯಾಯಾಮ ಒದಗಿ ಬಲಿಷ್ಠವಾಯಿತು. ಉಜ್ಜಿ ಉಜ್ಜಿ ನನ್ನ ಭಾವಶಕ್ತಿ ಉಜ್ವಲವಾಯಿತು. ಪ್ರತಿಭೆಗೆ ಒಂದು ಕಿಚ್ಚು ಲಭಿಸಿ, ಆತ್ಮಪ್ರತ್ಯಯ ನಿಷ್ಠೆಗೆ ನಾಂದಿಯಾಯಿತು. ಆದ್ದರಿಂದ ನಾನು ಎಸ್.ಎಸ್.ಎಲ್.ಸಿ ತರಗತಿಯಲ್ಲಿರುವಾಗಲೇ ಷೆಕ್ಸ್‌ಪೀಯರ್ ನಾಟಕಗಳನ್ನು, ಮಿಲ್ಟನ್ ಕವಿಯ 'ಪ್ಯಾರಡೈಸ್ ಲಾಸ್ಟ್' ಕಾವ್ಯವನ್ನು ಓದಲು ಸಮರ್ಥನಾದೆ...[೬] ಇನ್ನೂ ಮುಂದುವರಿದು "ಇಂಗ್ಲಿಷ್ ಸಾಹಿತ್ಯದ ಜಗತ್ಪ್ರಸಿದ್ಧ ಕವಿಗಳು, ನಾಟಕಕಾರರು, ಸಾಹಿತ್ಯ ವಿಮರ್ಶಕರು, ಕಾವ್ಯಮೀಮಾಂಸಕರು, ಪ್ರಬಂಧಕಾರರು ಬುದ್ಧಿಗೆ ಪುಷ್ಟಿಯನ್ನು ಭಾವಕ್ಕೆ ಕ್ರಾಂತಿಯನ್ನು ಒದಗಿಸಿದರು. ಭಾರತೀಯ ಸ್ವಾತಂತ್ರ ಸಂಗ್ರಾಮದ ವೀರಪುರುಷರ ಚರಿತ್ರೆ, ಲೇಖನ, ಭಾಷಣಗಳಿಂದ ಭಾರತೀಯತಾ ಭಕ್ತಿಯನ್ನು ದೇಶಪ್ರೇಮದ ಸ್ಫೂರ್ತಿಯನ್ನು ಪಡೆದ ನನ್ನ ಚೇತನ ತನ್ನ ಗ್ರಾಮೀಣ ಸ್ವಲ್ಪತ್ವವನ್ನು ವಿಸರ್ಜಿಸಿ ವಿಶ್ವಭೂಮತ್ವಕ್ಕೆ ಪಾದಾರ್ಪಣೆ ಮಾಡಿತು. ಸ್ವಾಮಿ ವಿವೇಕಾನಂದರಿಂದ ಮೊದಲುಗೊಂಡು ಆಧ್ಯಾತ್ಮ ಗಗನದ ಅನೇಕ ಉಜ್ವಲ ನಕ್ಷತ್ರಗಳೊಡನೆ ನನ್ನ ಜೀವಾತ್ಮ ಸಂಪರ್ಕಗೊಂಡು ತನ್ನ ತಮಃ ಪ್ರಪಂಚದಿಂದ ಮೇಲಕ್ಕೆ ಹಾರಿ ಅಂಬರಗಾಮಿಯಾಗಿ ಅನಂತತೆಯ ಅಚಲ ಪ್ರದೇಶಗಳಲ್ಲಿ ವಿಹಾರಿಯಾಯಿತು."[೭] ಹೀಗೆ ಪಾಶ್ಚಾತ್ಯ ಹಾಗೂ ಭಾರತೀಯ ಸಾಹಿತ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾದ ಕುವೆಂಪುರವರ ಮೇಲೆ ತಮ್ಮ ಸೃಜನಶೀಲ ವ್ಯಕ್ತಿತ್ವ ಅರಳಲು ಅನುವಾಯಿತು. ಇಲ್ಲಿ ಕವಿಯ ಶ್ರದ್ಧೆ, ಆಸಕ್ತಿ ಶ್ರಮವನ್ನು ಮರೆಯುವಂತಿಲ್ಲ.

> "ಪಾಶ್ಚಾತ್ಯ ಸಾಹಿತ್ಯದ ಕುಂಡದಲ್ಲಿಯೆ...ನನ್ನ ಸಾಹಿತ್ಯವಟ ಶಿಶು ಬೇರು ಬಲಿತು ಕುಂಡವನ್ನೊಡೆದುಕೊಂಡು ನೆಲಕ್ಕೆ ಕಾಲೂರಿ ಭದ್ರವಾಗಿ ನಿಂತಿತು, ಮಾತೃಸತ್ವದ ಮಹಿಮೆಯಿಂದ ತನ್ನ ವಟವೃಕ್ಷದ ಮಹತ್ ಸ್ವರೂಪದ ಬೃಹತ್ ವಿಕಾಸದತ್ತ ಮೈಚಾಚಿ ಮೊಗವೆತ್ತಿ ಆಕಾಶದತ್ತ ಶಾಖೋಪಶಾಖೆಯ ಸುದೀರ್ಘ ಬಹುಪ್ರಸಾರ ಮಾಡಲು ಉತ್ಸಾಹದಿಂದ ವಿಜೃಂಭಿಸಿತು."[೮]

ಇಂಗ್ಲಿಷ್ ಸಾಹಿತ್ಯದ ಪ್ರಭಾವ ವಸಾಹತಿನ ಮೂಲಕ ಅವರಿಗೆ ಬಂದಿದ್ದರೂ ಅದು ಅವರ ಸೃಜನಶೀಲತೆಗೆ ಅಡ್ಡಿಯಾಗಲಿಲ್ಲ ಎಂದಂತಾಗುತ್ತದೆ. ಇಂಗ್ಲಿಷ್ ಕಾವ್ಯದ ಮೋಹಿನಿಗೆ ಮರುಳಾದವರು ಕುವೆಂಪು ಅವರೊಬ್ಬರೇ ಅಲ್ಲ, ಬೇಂದ್ರೆಯವರ ಪ್ರಾರಂಭಿಕ ಕಾವ್ಯ ರಚನೆ ಕೂಡ ಇಂಗ್ಲಿಷನಲ್ಲಿ ಆಯಿತು. ಇಷ್ಟೇ ಅಲ್ಲ, ಅವರು ತಮ್ಮ ಹೆಸರನ್ನು ಕೂಡ 'ಬೆನ್ ರ್‍ಯಾಮಸನ್' ಎಂದು ಬದಲಿಸಿಕೊಂಡರು. ಕನ್ನಡದ ಸುದೈವದಿಂದ ಕುವೆಂಪು ಹಾಗೂ ಬೇಂದ್ರೆ ಇಬ್ಬರೂ ಕನ್ನಡಕ್ಕೆ ತಿರುಗಿದರು. ಅಷ್ಟೇ ಅಲ್ಲದೆ, ತಮ್ಮ ಕಾಲದ ಶ್ರೇಷ್ಠ ಕವಿಗಳೂ ಆದರು.

ಪಾಶ್ಚಾತ್ಯ ಸಾಹಿತ್ಯ ಪರಂಪರೆಯ ನಾಲ್ವರು ಮಹಾ ಸಾಹಿತಿಗಳಾದಂತಹ ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್ ಹಾಗೂ ಟಾಲ್‌ಸ್ಟಾಯ್ ಇವರುಗಳು ಕುವೆಂಪು ಅವರಿಗೆ

ಮಾರ್ಗದರ್ಶಿಗಳಾದರು. ಷೇಕ್ಸ್‌ಪಿಯರ್‌ನಿಂದ ಸರಳ ರಗಳೆಯ ನಾಟಕ, ಮಿಲ್ಟನ್‌ನಿಂದ ಮಹಾಕಾವ್ಯ, ವರ್ಡ್ಸ್‌ವರ್ತ್‌ನಿಂದ ಭಾವಗೀತೆ ಹಾಗೂ ಟಾಲ್‌ಸ್ಟಾಯ್‌ನಿಂದ ಕಾದಂಬರಿ ಅವರಿಗೆ ಬಳುವಳುಗಳಾಗಿ ಬಂದವು. ಹಾಗೂ ಈ ಪ್ರಕಾರಗಳನ್ನು ಕನ್ನಡಕ್ಕೆ ತಂದು ಅವರು ಅವುಗಳನ್ನು ಸಮೃದ್ಧಗೊಳಿಸಿದರು. "ಷೇಕ್ಸ್‌ಪಿಯರ್ ನಾಟಕಗಳನ್ನು ಓದಿದಾಗೆಲ್ಲ ಕನ್ನಡದಲ್ಲಿಯೂ ಬ್ಲಾಂಕ್‌ವರ್ಸ್ ನಾಟಕರಚನೆ ಮಾಡಬೇಕು ಎಂಬ ಹಂಬಲವಾಗುತ್ತಿತ್ತು. ಮಿಲ್ಟನ್ ಕವಿಯ ಪ್ಯಾರಡೈಸ್ ಲಾಸ್ಟ್‌ನಂತೆ ಕನ್ನಡದಲ್ಲಿ ಬ್ಲಾಂಕ್‌ವರ್ಸ್ ಎಪಿಕ್ ಬರೆಯಬೇಕೆನ್ನುವ ಅಭೀಪ್ಸೆ ಬೇರೆ ಕಾಡುತ್ತಿತ್ತು." ಎಂದು ಹೇಳಿ ೧೯೨೭ರ ಸುಮಾರಿಗೆ ಇವರಿಬ್ಬರ ಪ್ರಭಾವಕ್ಕೆ - ಛಂದಸ್ಸಿನ ಮಟ್ಟಿಗಾದರೂ- ತಾವು ಒಳಗಾದುದನ್ನು ಕುವೆಂಪು ನೆನೆದಿದ್ದಾರೆ.[೨] ಷೇಕ್ಸ್‌ಪಿಯರ್‌ನ ಪ್ರಭಾವ ಛಂದಸ್ಸಿಗೆ ಮಾತ್ರ ಸೀಮಿತವಾಗಿಲ್ಲ ಎನ್ನುವುದಕ್ಕೆ ಕುವೆಂಪು ಹ್ಯಾಮ್ಲೆಟ್ ನಾಟಕದಿಂದ ಪ್ರೇರಣೆ ಪಡೆದು ರಕ್ತಾಕ್ಷಿಯನ್ನು ಹಾಗೂ ದ ಟೆಂಪೆಸ್ಟ್ ನಾಟಕದ ರೂಪಾಂತರವಾದ ಬಿರುಗಾಳಿಯನ್ನು ರಚಿಸಿದುದು ಸಾಕ್ಷಿಯಾಗಿದೆ.

ಮಲೆನಾಡಿನ ಕುಪ್ಪಳಿಯಲ್ಲಿ ಹುಟ್ಟಿದ ಪ್ರಕೃತಿ ಕವಿ ಕುವೆಂಪು ಮತ್ತು ಇಂಗ್ಲೆಂಡಿನ ಕಾಕರ್ ಮೌತ್‌ನಲ್ಲಿ ಜನಿಸಿದ ನಿಸರ್ಗ ಕವಿ ವರ್ಡ್ಸ್‌ವರ್ತ್ ಈ ಇಬ್ಬರ ನಡುವೆ ಕಾಲ, ದೇಶ, ಸಂಸ್ಕೃತಿಗಳ ಅಗಾಧ ಅಂತರವಿದ್ದರೂ ಸಹ ವಿಸ್ಮಯಗೊಳಿಸುವಷ್ಟು ಸಾದೃಶ್ಯಗಳೂ ಇರುವುದನ್ನು ನಾವು ನೋಡುತ್ತೇವೆ.

ಮಿಲ್ಟನ್‌ನನ್ನು ಹೋಮರ್, ವರ್ಜಿಲ್, ಡಾಂಟೆಯವರೊಡನೆ ಹೆಸರಿಸುವ ಮೂಲಕ ಪಶ್ಚಿಮದ ಮಹಾಕಾವ್ಯ ಪರಂಪರೆಯಲ್ಲಿ ಅವನ ಔನತ್ಯವನ್ನು ಕುವೆಂಪು ಸೂಚಿಸಿದ್ದರೂ ಅವನ ಬಗ್ಗೆ ವಿವರವಾಗಿ ಬರೆದಂತಿಲ್ಲ, ಭವ್ಯತೆಯನ್ನು ನಿದರ್ಶಿಸುವ ಸಂದರ್ಭದಲ್ಲಿ ಪ್ಯಾರಡೈಸ್ ಲಾಸ್ಟ್‌ದ ಸೇಟನ್ನನ ಕೇಯಸ್ ಮಹಾಲಂಘವನ್ನು ಉಲ್ಲೇಖಿಸುವುದನ್ನು ಬಿಟ್ಟರೆ, ವರ್ಡ್ಸ್‌ವರ್ತ್‌ನನ್ನು ಮಾತ್ರ ಮತ್ತೆ ಮತ್ತೆ ನೆನೆದಿದ್ದಾರೆ. ಅವನನ್ನು ಕುರಿತು ಅವರು ಬರೆದ ಸಾನೆಟ್ ಅವರ ಸುಪ್ರಸಿದ್ಧ ಕವಿತೆಯಲ್ಲೊಂದು. ವರ್ಡ್ಸ್‌ವರ್ತ್ ಅವರಿಗೆ ಕಾವ್ಯರ್ಷಿ.

ಅಸಾಧಾರಣವಾದ ವ್ಯಕ್ತಿತ್ವವನ್ನು ಹೊಂದಿದ್ದ ಕುವೆಂಪು ಮತ್ತು ವರ್ಡ್ಸ್‌ವರ್ತ್ ಇಬ್ಬರೂ ನಿಸರ್ಗದ ಆರಾಧಕರಾಗಿದ್ದು, ಸಾಹಿತ್ಯದಲ್ಲಿ ಅತ್ಯುನ್ನತಿ ಸಾಧಿಸಿದವರು. ನಿಸರ್ಗದ ಅಪ್ರತಿಮ ಉಪಾಸಕರಾಗಿದ್ದ ಅವರಿಗೆ ಮೌನ, ಏಕಾಂತಗಳು ಪ್ರಿಯವಾದ ಸಂಗತಿಗಳಾಗಿದ್ದವು. ಅವರು ಮಾನವ ಮತ್ತು ಪ್ರಕೃತಿಯ ಅನನ್ಯ ಸಂಬಂಧವನ್ನು ಗುರುತಿಸಿ ರಸಋಷಿಗಳಾಗಿ ಪ್ರಕೃತಿಯಲ್ಲಿ ಪರಮಾತ್ಮನನ್ನು ಕಂಡು ಆರಾಧಿಸಿದರು. ಸೌಂದರ್ಯ ಮಾರ್ಗದ ಮೂಲಕ ಸಾಗಿ, ಶಿವ, ಸತ್ಯದ ಸಾಕ್ಷಾತ್ಕಾರವನ್ನು ಪಡೆದವರಾಗಿದ್ದರು. ವರ್ಡ್ಸ್‌ವರ್ತ್ ಕವಿಯನ್ನು ಕುರಿತ ವಿಮರ್ಶಗ್ರಂಥವನ್ನು ಓದಿ ಆ ಮಹಾಕವಿ ಚೇತನದಿಂದ ಸ್ಫೂರ್ತಿ ಪಡೆದು The Squirrel Scream ಎಂಬ ಕವನವನ್ನು ರಚನೆ ಮಾಡಿದ್ದರು ಎಂಬ ಉಲ್ಲೇಖ ಅವರ ನೆನಪಿನ ದೋಣಿಯಲ್ಲಿ ಸಿಗುತ್ತದೆ. ಮುಂದೆ ಇಂಥ ಪ್ರಯತ್ನಗಳು ಹಲವಾರು, ಇನ್ನೂ ಹೆಸರಿಸುವುದಾದರೆ, ವರ್ಡ್ಸ್‌ವರ್ತ್ ಕವಿಯ

The Reaper ಕವನವನ್ನು ಓದಿ ಅದರಿಂದ ಪ್ರಭಾವಿತರಾಗಿ ಆ ಕವನದ ಅನುವಾದವನ್ನು ಮಾಡುತ್ತಾರೆ, ಮತ್ತೊಂದು ಅವರ Exhortations ಎಂಬ ಶೀರ್ಷಿಕೆಯಲ್ಲಿ ಒಂದು ಸುದೀರ್ಘ ಕವನ ರಚಿತವಾಗಿದೆ. ಈ ಕವನದಲ್ಲಿ ಹುಟ್ಟೂರಿನ ಮೇಲಿನ ಅಕ್ಕರೆಯ ಮತ್ತು ಚೆಲುವಿನ ಮಮತೆ ಅದರಲ್ಲಿ ಎದ್ದು ಕಾಣುತ್ತದೆ; ಮತ್ತು ಆ ಸೌಂದರ್ಯವು ಕವಿಯ ಬಾಲ್ಯದ ಮುಗ್ಧತೆಯ ಮೇಲೆ ಮಾಡಿದ ಪರಿಣಾಮವನ್ನು ತರುವಾಯದ ತಾರುಣ್ಯೋತ್ತರ ಕಾಲದಲ್ಲಿ ಮೈಸೂರಿನಿಂದ ಮರಳಿ ಬಂದವನ ಮೇಲೆ ಮಾಡಿದ ಪರಿಣಾಮದೊಡನೆ ಹೋಲಿಸುವ ಪ್ರಯತ್ನವನ್ನೂ ಮಾಡುತ್ತದೆ. ಈ ಕವನದಲ್ಲಿ ಪಾಶ್ಚಾತ್ಯ ಕವಿಗಳ, ಅದರಲ್ಲಿಯೂ ಮುಖ್ಯವಾಗಿ ವರ್ಡ್ಸ್‌ವರ್ತ್ ಮಹಾಕವಿಯ ಕೃತಿಗಳ ಪರಿಚಯದಿಂದುಂಟಾದ ಪ್ರಕೃತಿ ಸೌಂದರ್ಯಾಸ್ವಾದನೆಯ ಪ್ರಭಾವವೂ ಕಾಣುತ್ತದೆ.

ಕುವೆಂಪು ಅವರು ವರ್ಡ್ಸ್‌ವರ್ತ್ ಕವಿಯ ಬಗ್ಗೆ ತಳೆದಿದ್ದ ಅಪಾರ ಪ್ರೀತಿ, ಅಭಿಮಾನಗಳನ್ನು ಅವರ 'ಕೃತ್ತಿಕೆ' ಕವನ ಸಂಕಲನದಲ್ಲಿನ 'ವರ್ಡ್ಸ್‌ವರ್ತ್' ಕವನ ಪ್ರತಿಬಿಂಬಿಸಿದೆ.

> "ಆಂಗ್ಲಕವಿಗಳಲಿ ನಿನ್ನೆದೆಯ ಸೆಳೆದಂತೆ
> ಉಳಿದವರು ಸೆಳೆದಿಲ್ಲ ನರನಾಟಕವ ನೋಡಿ
> ರಂಗದಲಿ ಚಿತ್ರಿಸಿದ ಷೇಕ್ಸ್‌ಪೀಯರನುಂ ಕೂಡಿ
> ನೀನೊಂದು ಪರ್ಣಕುಟಿ, ಆತನೋ ಪಿರಿಯಸಂತ
> ಶಾಂತಿಯಲಿ ಕೊನೆಗಾಣುವುದು ನಿನ್ನಮಲ ಚಿಂತೆ
> ಆತನದೊ ಕ್ರಾಂತಿಯಲಿ....
>
> .....ಭಿನ್ನಾಭಿಪ್ರಾಯವನು ಜಗವೆಲ್ಲ
> ಘೋಷಿಸಲು, ನೀನೆನಗೆ
> ಸಹೃದಯನು, ಕವಿವರನು ನನ್ನೊಲ್ಮೆ ಇದೊ ನಿನಗೆ
> ನಿನ್ನ ಋಷಿ ಜೀವನಕೆ ನಿನ್ನ ನಿರ್ಮಲ ನೀತಿ
> ಜನರೊಲ್ಮೆ, ಶಾಂತಿ, ಕನಿಕರ ದಯೆಗೆ ಎಣೆಯಿಲ್ಲ"[೯]

ಇದೇ ರೀತಿ 'ಅನಿಕೇತನ' ಸಂಗ್ರಹದಲ್ಲಿಯೂ ಸೇರಿಸಲ್ಪಟ್ಟ 'ಮ್ಯಾಗ್ನೋಲಿಯಾ ಗ್ರಾಂಡಿಫೋರಾ' ಎಂಬ ಕವನವೂ ಸಹ ನಮ್ಮ ದೇಶದ ಸಂಸ್ಕೃತಿ ಸಾರವನ್ನು ಮೈಗೂಡಿಸಿಕೊಂಡು ಬೆಳೆದ ಕವಿಯ ತನ್ನತನವನ್ನು ಸಾರುತ್ತದೆ.

> "ಓ ನೋಡು ಬಾ
> ಗಿಡದ ಕೈಮುಗಿಹ ಮೊಗ್ಗಾಗಿ ಮೈದೋರುತಿದೆ
> ಮಾಗ್ನೋಲಿಯಾ ಗ್ರಾಂಡಿಪ್ಲೋರಾ!"[೧೦]

ಕವಿತೆ ಪೂರ್ವಾಲೋಚಿತ ಕಲೆ ಅಲ್ಲ ಅನ್ನುವ ಕುವೆಂಪು ಮಾತು ವರ್ಡ್ಸ್‌ವರ್ತ್‌ಗೂ ಸಹ ಕವನವೆಂಬುದು "Spontaneous over flow of powerful feelings..."ಎಂಬ ಅಭಿಪ್ರಾಯವಿದೆ.

ವರ್ಡ್ಸ್‌ವರ್ತ್ ಕವಿಯು ತನ್ನ "Tintern Abbey" ಅಥವಾ "Yarrow Visited" ಮತ್ತು ಇತರ ಕವನಗಳ ಮೂಲಕ ತಾನು ಈ ಜಗತ್ತಿನ ಗೊಂದಲಗಳಿಂದ ಎಷ್ಟು ದೂರವಾದರೂ ಹೋದೇನು ಎನ್ನುವ ಮಾತನ್ನು ಪದೇ ಪದೇ ಹೇಳಿದ್ದಾನೆ. "The world is too much with us" ಕವನದಲ್ಲಂತೂ ಕವಿಯ ಈ ಭಾವನೆಯ ಪರಾಕಾಷ್ಠೆ ತಲುಪಿದಂತೆ ಕಾಣುತ್ತದೆ. ಜಗತ್ತಿನ ಈ ಗೊಂದಲಗಳಿಂದ ದೂರ ಹೋಗಬೇಕೆನ್ನುವ ಕುವೆಂಪು ಅವರ ಈ ಸಾಲುಗಳನ್ನು ಗಮನಿಸಬಹುದು.

"ದೂರಾ ಬಹುದೂರ ಹೋಗುವ ಬಾರಾ
ಅಲ್ಲಿಹುದೆಮ್ಮ ಊರ ತೀರ
ದೂರ ದೂರಾ ಹೋಗುವ ಬಾರಾ"[೧೧]

"ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;
ಮಲೆಯ ನಾಡಿಗೆ, ಮಳೆಯ ಬೀಡಿಗೆ, ಸಿರಿಯ ಚೆಲುವಿನರೂಢಿಗೆ
ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆಯ ಕಾಡಿಗೆ;
ಹಸುರು ಸೊಂಪಿನ ಬಿಸಿಲು ತಂಪಿನ ಗಾನದಿಂಪಿನ ಕೂಡಿಗೆ!"[೧೨]

ಛಂದಸ್ಸಿನ ಬಳಕೆಯಲ್ಲಿಯೂ ಅಸಾಧಾರಣ ವೈವಿಧ್ಯತೆಯನ್ನು ಕುವೆಂಪು ಮತ್ತು ವರ್ಡ್ಸ್‌ವರ್ತ್ ತೋರಿದ್ದಾರೆ. ಸುನೀತ (Sonnet) ಗಳಿಂದ ಹಿಡಿದು ನೀಳ್ಗವನಗಳ ತನಕ ವಿವಿಧ ಛಂದಸ್ಸುಗಳನ್ನು ಇಬ್ಬರೂ ಬಳಸುತ್ತಾರೆ. ಸಾಂದರ್ಭಿಕವಾಗಿ ವೈಯಕ್ತಿಕ ಛಂದಸ್ಸುಗಳನ್ನು ಸೃಷ್ಟಿಸಿ ಉಪಯೋಗಿಸಿದ್ದಾರೆ. ವರ್ಡ್ಸ್‌ವರ್ತ್ 'ಮೈಕಲ್' ಅನ್ನುವ ನೀಳ್ಗವನ ಬರೆದರೆ, ಕುವೆಂಪು ಅವರು 'ಕಿಟ್ಟಯ್ಯ' ಅನ್ನುವ ನೀಳ್ಗವನ ಬರೆದಿದ್ದಾರೆ. ಇಷ್ಟಾದರೂ ಕುವೆಂಪು ಅವರ ಕ್ರತುಶಕ್ತಿ ವರ್ಡ್ಸ್‌ವರ್ತ್‌ಗಿಂತ ವೈವಿಧ್ಯಮಯ. ವರ್ಡ್ಸ್‌ವರ್ತ್ ಹೆಜ್ಜೆಯಿಡಲು ಧೈರ್ಯವನ್ನು ಮಾಡದ ಕಾದಂಬರಿಗಳನ್ನು, ಸಣ್ಣ ಕಥೆಗಳನ್ನು ಮತ್ತು ಅನೇಕ ವೈವಿಧ್ಯಮಯ ವಿಚಾರಪೂರಿತ ಬರಹಗಳನ್ನೂ ಕುವೆಂಪು ಅವರು ಬರೆಯುವುದರ ಮೂಲಕ ತಮ್ಮ ಬಹುಮುಖ ಪ್ರತಿಭೆಯನ್ನು ತೋರುತ್ತಾರೆ. ಕುವೆಂಪು ಅವರ ಸಾಧನೆಯ ಶ್ರೇಷ್ಟತೆಯ ಪ್ರತೀಕವಾಗಿ ಅವರ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನಂ' ನಿಲ್ಲುತ್ತದೆ. ಹೀಗೆ ವರ್ಡ್ಸ್‌ವರ್ತ್‌ನ ಪ್ರಭಾವವಿದ್ದಾರೂ ಅದನ್ನು ಮೀರಿ ಬೆಳೆದ ಕವಿ ಕುವೆಂಪು ಎಂಬುದು ನಿರ್ವಿವಾದದ ಸಂಗತಿ.

ನಿಸರ್ಗಾರಾಧಕನೆಂದು ಖ್ಯಾತಿ ಗಳಿಸಿದ ವರ್ಡ್ಸ್‌ವರ್ತ್ ತನ್ನ ಆರಾಧನೆಗೆ ಕಾರಣಗಳನ್ನು ಕಾವ್ಯಮಯವಾಗಿ ಹೀಗೆ ನಿರೂಪಿಸಿದ್ದಾನೆ.

" These forms of beauty have not been to me.
As if a landscape to a blind man's eye;
But oft in lonely rooms, and mid the din
of towns and cities, I have owned to them
In hours of weariness, sensation sweet,
Felt in the blood, and felt along the heart,
and passing even into my purer mind
With tranquil restoration..."[13]

ನಿಸರ್ಗದ ವೈವಿಧ್ಯಮಯವಾದ ಚೆಲುವಿನ ನೋಟಗಳು ಕವಿಯ ಕಣ್ಣಿಗೆ, ದೂರದಲ್ಲಿ ಏಕಾಂಗಿಯಾಗಿ ಕೊಠಡಿಯಲ್ಲಿ ಕುಳಿತಾಗಲೊ, ನಗರದ ಗದ್ದಲದ ನಡುವೆ ನಿಂತಾಗಲೊ ಮನಸ್ಸು ಬಹಳ ದಣಿದಾಗಲೊ ಈ ದೃಶ್ಯಗಳು ಅನುಗ್ರಹಿಸಿದ ಮಧುರಾನುಭವಗಳು ಮತ್ತೆ ತೇಲಿ ಬರುತ್ತವೆ. ತನ್ನ ನೆತ್ತರಿನಲ್ಲಿ ಈ ಅನುಭವಗಳು ಹರಿಯುವುದನ್ನು, ಅವು ಹೃದಯದಲ್ಲಿ ಮನೆ ಮಾಡಿರುವುದನ್ನು ತನ್ನ ಶುಭ್ರ ಚೇತನದಾಳಕ್ಕೆ ಅವು ಅವತರಿಸಿ ಅಪೂರ್ವವಾದ ಶಾಂತಿ ತಂದುಕೊಡುವುದನ್ನು ಕವಿ ಅನುಭವಿಸುತ್ತಾ ಮೌನವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತಾನೆ.

ಅವರ ಮತ್ತೊಂದು ಕವನ–

"...... I trust
To them I may have owned another gift
of aspect more sublime; that blessed mood,
on which the burthen of the mystery,
In which the heavy and the weary weight
of all this unintelligible world
Is lighten'd – That seene and blessed mood,
In which the affections gently lead us on,
until, the breath of this corporeal frame,
and even the motion of our human blood
In body and become a living soul
While with an eye made quit by the power
of harmony, and the deep power of joy,
We see into the life of things"[14]

ಇನ್ನು ಭವ್ಯತರವಾದ ಮುಖ ಅದಕ್ಕಿದೆ. ಆ ದಿವ್ಯ ಭಾವದಲ್ಲಿ ಜಗತ್ತಿನ ರಹಸ್ಯ ಬಗೆ ಹರಿಯುತ್ತದೆ. ಈ ಅಸ್ಪಷ್ಟ ಜಗತ್ತಿನ ದಣಿವಿನ ಭಾರ ಕಳೆದು ಮೈ ಹಗುರಾಗುತ್ತದೆ. ಅದು ಸೃಷ್ಟಿಸುವ ದಿವ್ಯ ಶಾಂತ ಸ್ಥಿತಿಯಲ್ಲಿ, ಕರುಣೆಯಿಂದ ಮೃದುವಾಗಿ ನಮ್ಮನ್ನು ಕೈ ಹಿಡಿದು ನಡೆಸಿ ತಲುಪಿಸುವ ನಿಲುಗಡೆಯಲ್ಲಿ, ಈ ಆಕೃತಿಯ ಉಸಿರು ಇನ್ನೇನು ನಿಂತಿತೊ ಎನಿಸಿ, ರಕ್ತ ಚಲನೆಯೂ ನಿಂತಂತೆ ಅನ್ನಿಸಿ ದೇಹ ನಿದ್ರಿಸಿ ನಾವು ಉಸಿರಾಡುವ ಚೈತನ್ಯವೇ ಆಗುತ್ತೇವೆ. ಸಾಮರಸ್ಯದಿಂದ ಕೂಡಿದ ದೃಷ್ಟಿ ಹಾಗೂ ಸಂತೋಷ ನೀಡಿದ ಶಕ್ತಿಯಿಂದ ವಸ್ತುಗಳ ಆತ್ಮವನ್ನೇ ಒಳಹೊಕ್ಕು ನೋಡಬಲ್ಲವರಾಗುತ್ತೇವೆ.

ಪ್ರಕೃತಿ ಆರಾಧನೆಯನ್ನು ಕುರಿತ ವರ್ಡ್ಸ್‌ವರ್ತ್‌ನ ದೃಷ್ಟಿ ಹೀಗಿದೆ. ಆದರೆ ಅವನಂತೆಯೇ ಪ್ರಕೃತಿ ದರ್ಶನದಿಂದ ಆ ಆನಂದಾನುಭವದಿಂದ ಉನ್ಮತ್ತರಾಗುವ, ಭಾವ ಸಮಾಧಿಯಲ್ಲಿ ಮುಳುಗುವ ಕುವೆಂಪು ಅವರು ಅವನನ್ನು ಹಿಂದೆಯೇ ಬಿಟ್ಟು ಮುಂದುವರೆಯುತ್ತಾರೆ. ಆರಾಧನೆ, ಆಸ್ವಾದನೆಗಳೆರಡರಲ್ಲೂ ಅವನಿಂದ ಬಹಳ ಮುಂದೆ ಸಾಗುವ ಅವರು ತಮ್ಮ ನಿಸರ್ಗಾರಾಧನೆಯ ಹಿಂದಿರುವ ವಿಶಿಷ್ಟ ಮನೋಭಾವವನ್ನು ಹೀಗೆ ಚಿತ್ರಿಸಿದ್ದಾರೆ.

ಕುವೆಂಪು ಅವರಿಗೆ ಪ್ರೇರಣೆಯಾದ ಮತ್ತೊಬ್ಬ ಇಂಗ್ಲಿಷ್ ಕವಿ ಷೆಲ್ಲಿ. ಷೆಲ್ಲಿ ಕ್ರಿ.ಶ. ೧೭೯೨ರಲ್ಲಿ ಇಂಗ್ಲೇಂಡಿನಲ್ಲಿ ಜನಿಸಿದನು. ವಿಜ್ಞಾನ ಕಲಿಯುತ್ತಿದ್ದವನು ೧೮೧೦ರಲ್ಲಿ ಪದವೀಧರನಾಗಿ 'ನಾಸ್ತಿಕತೆಯ ಅಗತ್ಯ' ಎಂಬ ಪ್ರಬಂಧ ಬರೆದ. ವಿಲಿಯಂ ಗಾಡ್ವಿನ್‌ನ ಕೃತಿಯಿಂದ ಪ್ರಭಾವಿತನಾದ ಷೆಲ್ಲಿ ಇಂಗ್ಲೇಂಡಿನ ಭಾವಗೀತೆ, ಕವಿತೆಗಳಲ್ಲಿ ಅತ್ಯಂತ ಶ್ರೇಷ್ಠನಾಗಿದ್ದ. ಇವನ 'ಕಾವ್ಯ ಸಮರ್ಥನೆ' 'Defence of Poetry' ೧೮೨೧ ರಲ್ಲಿ ರಚಿತವಾಯಿತು. ತನ್ನ 'Defence of Poetry' ಯಲ್ಲಿ ಅವನ ಜನಪ್ರಿಯ ಭಾವಗೀತೆಗಳೆಂದರೆ 'ಪಶ್ಚಿಮದ ಮಾರುತಕ್ಕೆ ಪ್ರಗಾಥ' 'ಸ್ಕೈಲಾರ್ಕ್', 'ಮೋಡ' ಮುಂತಾದವು 'ಸ್ವಾತಂತ್ರ್ಯಕ್ಕೆ ಪ್ರಗಾಥವು' (Ode to Liberty) ಷೆಲ್ಲಿಯ ರಾಜಕೀಯ ಕವಿತೆಗಳಲ್ಲಿ ಅಗ್ರಸ್ಥಾನ ಪಡೆದಿದೆ. 'ಹೆಲ್ಲಾಸ್', 'ಇಸ್ಲಾಮಿನ ಬಂಡಾಯ', 'ಕ್ವೀನ್ ಮ್ಯಾಬ್', 'ಚೆಂಚಿ', (ನಾಟಕ) 'ಬೌದ್ಧಿಕ ಸೌಂದರ್ಯವನ್ನು ಕುರಿತ ಸ್ತೋತ್ರಗೀತೆ', 'ಎಪಿಪ್ಸಿಚಿಡಿಯನ್' ಇನ್ನು ಮುಂತಾದವು ಷೆಲ್ಲಿಯ ಅತ್ಯುತ್ತಮ ಕೃತಿಗಳಾಗಿವೆ. ತನ್ನ 'Defence of Poetry' ಯಲ್ಲಿ ಷೆಲ್ಲಿ ಹೇಳಿರುವ ಮಾತುಗಳು ಆತನ ಭಾವಗೀತೆಗಳಲ್ಲಿ ಕಾರ್ಯರೂಪಕ್ಕಿಳಿದಿದೆ. ಅವನ ದೃಷ್ಟಿಯಲ್ಲಿ ಕಾವ್ಯ ರಚನೆಯು ರಚನೆಯ ತರ್ಕ ಅಥವಾ ವಿವೇಚನೆ ಅಲ್ಲ, ಅತ್ಯಂತ ಸುಂದರ ಕವಿತೆಗಳನ್ನು ಕೆಲವು ದುಡಿಮೆ ಮತ್ತು ಅಧ್ಯಯನದಿಂದ ರಚಿಸಲು ಸಾಧ್ಯವಿಲ್ಲ. ಸ್ಫೂರ್ತಿಯ ಚಿಲುಮೆಯಿಂದ ಕಾವ್ಯರಸ ಉಕ್ಕುವುದಾದರೂ ಉಜ್ವಲ ಕಲ್ಲಿದ್ದಲಿನ ಕೆಂಡದಂತೆ ಅದರ ಪ್ರಭಾವ ಕ್ಷಣಿಕವಲ್ಲ. ಹೀಗೆ ಹೇಳುವ ಷೆಲ್ಲಿ ಎಲ್ಲಿಯೂ ತನ್ನ ಕಾವ್ಯದಲ್ಲಿ ಈ ಅಂಶ ಮೀರಿಲ್ಲ ಎನಿಸುತ್ತದೆ. ಕವಿಯ ಅಂತಃಸತ್ವದ ಸಾಮರ್ಥ್ಯ ಹಾಗೂ ಕಾವ್ಯದಲ್ಲಿ ಕಲ್ಪಕತೆಯ ಪಾತ್ರ ಎಂಬ ಪ್ರಮುಖ ಕಾವ್ಯ ಮೀಮಾಂಸೆಯ ವಿಚಾರಗಳನ್ನು ಚರ್ಚಿಸುತ್ತದೆ 'Defence of Poetry'. ಪ್ರಮುಖವಾಗಿ ಅವನ ಕಾವ್ಯದಲ್ಲಿ ಯಾವುದೇ ವಿಷಯದ ಬಗ್ಗೆ ತೀವ್ರವಾಗಿ ಮತ್ತು ಸಮಗ್ರವಾಗಿ ಆಲೋಚಿಸಿ

ಮತ್ತು ಛಂದೋಬದ್ಧವಾಗಿ ಬರೆಯುವ ಶೈಲಿಯನ್ನು ರೂಢಿಸಿ ಕೊಂಡಿದ್ದನು. ಅವನು ಮುಖ್ಯವಾಗಿ ಓದುಗನ ದೃಷ್ಟಿಯಿಂದ ಅವನಿಗೆ ಏನು ಬೇಕು ಎಂದರಿತು ತನ್ನ ಲೇಖನವನ್ನು ಬರೆಯುತ್ತಿದ್ದನು. ಅವನ ಕಲ್ಪನೆಯ ಲಹರಿಯೇ ಬಹಳ ವಿಶಿಷ್ಟ ಮತ್ತು ವಿಭಿನ್ನವಾಗಿತ್ತು.

ಹೀಗೆ ನಿಸರ್ಗ, ಪ್ರೇಮ, ಶೋಕ, ರಸಗಳಂತೆ ಮುಂತಾದ ಭಾವಗಳನ್ನು ತನ್ನ ಉತ್ತಮ ಕವಿತೆಗಳಲ್ಲಿ ಪರಿಚಯಿಸಿದ ಷೆಲ್ಲಿ ರೋಮ್ಯಾಂಟಿಕ್ ಸಂಪ್ರದಾಯದ ಅಗ್ರಗಣ್ಯ ಕವಿ ಎನಿಸಿ ಕೊಂಡಿದ್ದಾನೆ. ಇಂಥ ಅವನ ಪ್ರತಿಪಾದನೆಗಳಿಂದಾಗಿ ಕುವೆಂಪು ಅವರು ತೀವ್ರವಾಗಿ ಪ್ರಭಾವಗೊಳಗಾಗುತ್ತಾರೆ, ಆ ಪ್ರೇರಣೆಯಿಂದಾಗಿ ಕುವೆಂಪು ಅವರು ಷೆಲ್ಲಿಯ ಬಗ್ಗೆ ವರ್ಣಿಸುತ್ತಾ ಅವನ ಬಗ್ಗೆ ಒಂದು ಕವನವನ್ನು ಷೆಲ್ಲಿಗೆ ಎಂದು ಬರೆಯುತ್ತಾರೆ.

ಪ್ರಸ್ತುತ ಕವಿತೆಯ ಬಗ್ಗೆ ಕುವೆಂಪು ಅವರ ಮಾತುಗಳು– "ಷೆಲ್ಲಿಯ 'A Defence of Poetry (ಕವಿತೆಯ ಸಮರ್ಥನೆ) ಓದಿದೆ. ತುಂಬ ಉತ್ತೇಜಕವೂ ಹರ್ಷದಾಯಕವೂ ಆಗಿತ್ತು. ಎಷ್ಟು ಸಂತೋಷವಾಯಿತು ಎಂದರೆ ಅದನ್ನು ಮುಗಿಸಿದ ಮೇಲೆ ನನಗೆ ನಾನೆ ಹೇಳಿಕೊಂಡೆ: 'ಸರಿ, ಬಿಡು: ಇನ್ನೇನೂ ಹೆದರಿಕೆಯಿಲ್ಲ. ನನ್ನ ಹಿರಿ ಅಣ್ಣನೊಬ್ಬ ನನ್ನ ಹಕ್ಕನ್ನು ಸಮರ್ಥಿಸಿದ್ದಾನೆ.' ಒಡನೆಯೆ ಸ್ಫೂರ್ತಿಗೊಂಡು ಒಂದು ಸಾನೆಟ್ಟನ್ನೂ ಬರೆದುಬಿಟ್ಟೆ, ಅತ್ಯಂತ ಭಾವಾವೇಶದಿಂದ, 'To Shelly' ಎಂಬ ಶೀರ್ಷಿಕೆಯಲ್ಲಿ."[೧೫] ಎಂದು ತಮ್ಮ ನೆನೆಪಿನ ದೋಣಿಯಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

A Defence of Poetry (ಷೆಲ್ಲಿಗೆ) ಎಂಬ ಕವನವನ್ನು ೯.೪.೧೯೨೪ರಲ್ಲಿ ರಚಿಸುತ್ತಾರೆ.

"O Brother! thou hast drunk the splendid joy
That comes to poets divine, when all alone,
But not forlorn, they hold the wondrous throne
Of inspiration sweet; when they enjoy
The bliss of faculty divine; when they decoy
From heaven the angelic train strange and unknown!
With Muse, when they her regions did annoy."[16]

ಕುವೆಂಪು ಅವರು ಷೆಲ್ಲಿಯ 'A Defence of Poetry' ಯನ್ನು ಓದಿ, ಅದರಿಂದ ಪ್ರಭಾವಿತರಾಗಿ ಷೆಲ್ಲಿಯನ್ನು ತನ್ನ ಅಣ್ಣನೆಂದು ಸಂಭೋದಿಸುತ್ತಾ, "ನಿನ್ನನ್ನು ಬಿಟ್ಟರೆ ಯಾರಿಲ್ಲ, ನಿನ್ನ ಕವಿತಾ ಸಾಮರ್ಥ್ಯ ಮಹಾದ್ಭುತ, ಪ್ರಪಂಚದ ಎಲ್ಲಾ ಅಪರಿಮಿತ ಅನಂದವನ್ನೆಲ್ಲಾ ನೀನೊಬ್ಬನೇ ಕುಡಿದುಬಿಟ್ಟಿರುವೆ. ನೀನು ನನ್ನಂತಹ ಎಷ್ಟೋ ಅಂಬೆಗಾಲು ಇಡುತ್ತಿರುವ ಕವಿಗಳಿಗೆ ಸ್ಫೂರ್ತಿಯ ಸೆಲೆಯಾಗಿರುವೆ. ನೀನು ಸದಾ ಬೆಳಗುತ್ತಿರುವ ಚೈತನ್ಯ" ಎಂದು ಷೆಲ್ಲಿಯನ್ನು ಹಾಡಿ ಹೊಗಳುತ್ತಿದ್ದಾರೆ.

"Defender of poetic paradise,
And wielder of lyrical weapons sweet,
Thou art my pride, for what is thine is mine!
Thy glory fills the space beneath such skies
As were unknown to thee; thy name all greet.
Shine, Poet, even as the blazing sun doth shine!"[17]

"ಎಲೈ ಮಹಾನ್ ಕವಿಯೇ, ನೀನು ಕಾವ್ಯವೆಂಬ ಸ್ವರ್ಗದ ರಕ್ಷನು. ಒಂದು ಕಾವ್ಯವನ್ನು ರಚಿಸುವಾಗ ಸಾಕಷ್ಟು ನಿಯಮಗಳನ್ನು ಅನುಸರಿಸಬೇಕಾಗುತ್ತದೆ, ಆ ನಿಯಮಗಳನೆಲ್ಲಾ ಕರಗತ ಮಾಡಿಕೊಂಡು ಸಾಮ್ರಾಟನಾಗಿ ನಿಂತಿರುವ ನನ್ನ ಕವಿಯೇ, ನೀ ನನ್ನ ಹೆಮ್ಮೆಯ ಪ್ರತೀಕ, ಏಕೆಂದರೆ ನಿನ್ನದೆಲ್ಲವೂ ನನ್ನದೇ ಆಗಿಹೋಗಿದೆ. ನಿನಗೇ ಅರಿವಿಲ್ಲದೆ ನಿನ್ನ ಕೀರ್ತಿಯ ಪತಾಕೆ ಎಲ್ಲೆಡೆ ಹಬ್ಬಿದೆ. ನಿನ್ನ ಹೆಸರನ್ನು ಸಾರಿ ಸಾರಿ ಹೇಳಿ ನಾವೆಲ್ಲರು ಸಂಭ್ರಮಿಸುತ್ತಿದ್ದೇವೆ. ಹೊಳೆಯುವ ಸೂರ್ಯನನ್ನು ಬೆಳಗುವಂತೆ ಮಾಡಿದೆ. ನಿನ್ನ 'ಡಿಫೆನ್ಸ್ ಆಫ್ ಪೊಯೆಟ್ರಿ' ಓದಿದ ನಂತರ ಎಂದು ಕವಿಯನ್ನು ಧ್ಯಾನಿಸುತ್ತಿದ್ದಾರೆ.

ಹೀಗೆ ಆಂಗ್ಲ ಸಾಹಿತ್ಯದ ಮತ್ತು ಆಂಗ್ಲ ಕವಿಗಳ ಕಾವ್ಯ ಸರಳತೆಯ ಜೊತೆಗೆ ಆ ವೇಗ, ತೀವ್ರತೆ, ಭವ್ಯತೆ, ದರ್ಶನದೀಪ್ತಿಯನ್ನೂ ಮೈಗೂಡಿಸಿಕೊಂಡು ಉಜ್ವಲವಾಗಿ ಬೆಳಗುವ ಕುವೆಂಪುರವರ ಕಾವ್ಯವು ಆಂಗ್ಲ ಕವಿಗಳನ್ನೂ ಮೀರಿ ಬೆಳೆದವು ಎಂಬುದು ನಿರ್ವಿವಾದದ ಸಂಗತಿಯಾಗಿದೆ.

ಪೂರ್ವಜನ್ಮದ ಸಂಸ್ಕಾರದಿಂದಲೋ ಪ್ರಕೃತಿ ದೇವಿಯ ನಿತ್ಯನಿಕಟ ಸಂಪರ್ಕದಿಂದಲೋ ಅವರ ಗಮನ ಬಾಲ್ಯದಲ್ಲಿಯೇ ಆತ್ಮಾನುಭೂತಿಯ ಕಡೆಗೆ ತಿರುಗಿತು. ಹೀಗಾಗಿ ಪ್ರಕೃತಿ ಅವರ ಕಾವ್ಯದ ಮೂಲ ಸೆಲೆಯಾಯಿತು; ಮೂಲ ಸ್ಫೂರ್ತಿಯಾಯಿತು. ಆದ್ದರಿಂದಲೇ ಕುವೆಂಪುರವರ ಬಹುಪಾಲು ಪ್ರಕೃತಿಗೀತೆಗಳ ಯಶಸ್ಸಿಗೆ ಅವರ ಬಾಲ್ಯದ ಪ್ರಕೃತಿಯೊಡನಾಟ ಹಾಗೂ ದಟ್ಟ ಅನುಭವ ಸಾಂದ್ರತೆಗಳೇ ಕಾರಣವೆಂಬುದರಲ್ಲಿ ಎರಡು ಮಾತಿಲ್ಲ. ಪ್ರಕೃತಿಯ ದಿನನಿತ್ಯದ ವಾಸ್ತವ ಘಟನೆಗಳು ಸೂಕ್ಷ್ಮ ಮನದ ಕವಿಗೆ ಉತ್ತಮ ಪ್ರಕೃತಿ ಭಾವಗೀತೆ ರಚಿಸಲು ಪ್ರೇರಕವಾಯಿತು. "ನನ್ನ ಎಲ್ಲ ಪ್ರಕೃತಿಗೀತೆಗಳಲ್ಲಿ ವಾಸ್ತವಾನುಭವದಿಂದಲೇ ಮೂರ್ತತ್ವ ಪಡೆದಿವೆ. ಬುದ್ಧಿಪೂರ್ವಕವಾಗಿ ಆಲೋಚಿಸಿ ಬರೆದುವಲ್ಲ ಅವು" ಎನ್ನುವ ಕವಿಮಾತುಗಳಲ್ಲಿ ನಿಸರ್ಗದ ನೇರ ಅನುಭವಗಳೇ ಇವರ ಕವಿಕೊಳ ದ್ರವ್ಯ ಎಂಬುದು ಮುಖ್ಯ ಸಂಗತಿಯಾಗುತ್ತದೆ. ಕುವೆಂಪುರವರನ್ನು "ರಸಋಷಿ ಕುವೆಂಪು", "ಅಭಿನವ ವಾಲ್ಮೀಕಿ" ಎಂತಲೂ ಕರೆಯುತ್ತೇವೆ. ಋಷಿಯು ನಿಸರ್ಗವಾಸಿ ನಿಜ ಆದರೆ ಆತ ಸಂಸಾರ ಬಂಧನವನ್ನೆಲ್ಲಾ ಕಳಚಿ ನಿರ್ಮೋಹಿಯಾಗಿ ಮುಕ್ತಿ ಮೋಕ್ಷದ ಚಿಂತನೆಯಲ್ಲೇ ತೊಡಗಿರುತ್ತಾನೆ. ಆದರೆ ಕುವೆಂಪು ರಸಋಷಿಯಾಗಿದ್ದಾರೆ. ಜೀವನ ರಸ ಮತ್ತು ಆಧ್ಯಾತ್ಮರಸ ಎರಡೂ ಸಮವಾಗಿ ಸ್ವೀಕರಿಸಿದ ಕುವೆಂಪು 'ರಸಋಷಿ'ಯಾಗಿರುತ್ತಾರೆ ಹಾಗೂ ನಿಸರ್ಗ ಪ್ರಿಯನಾಗಿರುತ್ತಾರೆ. "ಪ್ರಕೃತಿ ಕುವೆಂಪು ಅವರ ಆರಾಧ್ಯದೇವತೆ, ಮಲೆನಾಡಿಗೆ ತಾಯಿಮನೆ

ಕಾಡು ದೇವರ ಬೀಡು, ಗಿರಿಯಮುಡಿ ಶಿವನಗುಡಿ" ಎಂಬ ಮಾತುಗಳು ಕುವೆಂಪು ವ್ಯಕ್ತಿತ್ವದ ಸಂಕೇತ, ಅವರ ಅಂತರಂಗಕ್ಕೆ ಹಿಡಿದ ಕನ್ನಡಿ."[೧೮]

"ಲಾಂಗ್ ಫೆಲೊ, ಷೇಕ್ಸ್‌ಪಿಯರ್, ಚಾರ್ಲ್ಸ್‌ಕಿಂಗ್‌ಸ್ಲೀ, ಕಾರ್‌ಲೈಲ್ ಇತ್ಯಾದಿಯರು ಒಬ್ಬೊಬ್ಬರೆ 'ಪ್ರೇತ'ಗಳಂತೆ ಬರತೊಡಗಿದರು. ಲಾಂಗ್‌ಫೆಲೊ ತಾನೂ ಕಾಲರಿಜ್ ಮತ್ತು ಷೆಲ್ಲಿಯನ್ನು ಸಂಧಿಸಿದುದಾಗಿ ಹೇಳಿದನು; ಅಲ್ಲದೆ ಆ ಲೋಕದಲ್ಲಿಯೆ, ಷೇಕ್ಸ್‌ಪಿಯರ್ 'ನಾನು, ಬೆನ್‌ಜಾನ್‌ಸನ್ ಮತ್ತು ಇತರ ಅನೇಕರು ಒಟ್ಟಿಗೆ ಇದ್ದೇವೆ, ಎಂದೂ ಆದರೆ ಷೆಲ್ಲಿ, ಕಾಲರಿಜ್ ಮತ್ತು ಇತರರು ನನಗಿಂತಲೂ ಕೆಳಗಿನ ಲೋಕದಲ್ಲಿದ್ದಾರೆ ಎಂದೂ ರಾಬರ್ಟ್ ಸದೇ ವಿಷಯ ಕೇಳಿದ್ದೇನೆ."[೧೯] ಕುವೆಂಪುರವರು ಎಷ್ಟರ ಮಟ್ಟಿಗೆ ಇಂಗ್ಲಿಷ್ ಕವಿಗಳನ್ನು ಮತ್ತು ಅವರ ಕುರಿತು ಯೋಚಿಸುತ್ತಿದ್ದರೆನ್ನುವುದಕ್ಕೆ ಅವರ ಈ ಕನಸು ಸಾಕ್ಷಿಯಾಗಿದೆ.

ಕುವೆಂಪು ಅವರಿಗೆ ಇಂಗ್ಲಿಷ್ ಸಿನೆಮಾಗಳನ್ನು ವೀಕ್ಷಿಸುವುದರಲ್ಲಿ ಬಹಳ ಆಸಕ್ತಿ. ಒಂದು ದಿನ 'The Mysterious Pearls' ಎಂಬ ಸಿನಿಮಾಕ್ಕೆ ಹೋಗಿ ಬಂದು ಆ ಸಿನಿಮಾದಿಂದ ಪ್ರೇರಿತರಾಗಿ ಆ ದಿನ 'The Wreck of Titanic' ಎಂಬ ಲಾವಣಿಯಲ್ಲಿ ಕೆಲವು ಪದ್ಯಗಳನ್ನು ರಚಿಸಿದ್ದರು. ಅದು ಬ್ರಿಟೀಷ್ ಆಳ್ವಿಕೆಯ ಕಾಲ, ಆಗ ಇಂಗ್ಲಿಷ್ ಸಿನಿಮಾ ಅಥವಾ ಅವರ ಕವಿಗಳು ರಚಿಸಿರುವ ಕಥೆಗಳನಾಧರಿಸಿ ಹಲವಾರು ಸೀರಿಯಲ್‌ಗಳು ಪ್ರದರ್ಶನಗೊಳ್ಳುತ್ತಿದ್ದವು ಉದಾಹರಣೆಗೆ ರಾಬಿನ್‌ಸನ್ ಕ್ರೂಸೋ ಕಥೆ ಆಗಿನ ಕಾಲದಲ್ಲಿ ಮಾತಿಲ್ಲದ ಮೂಕರೀತಿಯಲ್ಲಿ ಸೀರಿಯಲ್ ಅಗಿ ಹದಿನೈದು ದಿನಗಳ ಕಾಲ ಪ್ರದರ್ಶನಗೊಂಡಿತ್ತು.

ಟಾಲ್‌ಸ್ಟಾಯ್‌ನನ್ನು ಕೂಡ ಕುವೆಂಪು ಅತ್ಯಂತ ಗೌರವದಿಂದ ಕಂಡರು. ಅವನನ್ನು ಹಾಗೂ ಅವನ ತತ್ವದೃಷ್ಟಿಯನ್ನು ಕುರಿತು ವಿಮರ್ಶೆ ಬರೆಯಬೇಕೆಂಬ ಅಪೇಕ್ಷೆ ಅವರಲ್ಲಿದ್ದಿತು. ಆದರೆ ಅದು ಕೈಗೂಡಿದಂತಿಲ್ಲ. ಆದರೆ, ೧೯೭೫ರಲ್ಲಿ ಬರೆದ ಕವಿತೆಯೊಂದರಲ್ಲಿ ಅವನ ಹಿರಿಮೆಗೆ ಅವರು ಈ ಕವನದ ಮೂಲಕ ಗೌರವ ಸಲ್ಲಿಸಿದರು.

"....ಕ್ರಾಂತಿಕಾರನೆ ಮಾತ್ರ
ನೀನಲ್ತು; ಕಾವ್ಯರಸನಂದನ ಕೃಷಿಕನಾದೆ.
ಮನುಜ ಜೀವನ ರಂಗಭೂಮಿಯಲಿ ತವಪಾತ್ರ
ನೈಕಮುಖಿ. ಸಾಧಕವರೇಣ್ಯ, ಸತ್ಯದ ಬೋಧೆ
ನಿನ್ನಿಂದೆ ಮಿಂಚಾಯ್ತು..."[೨೦]

ಕುವೆಂಪು ಅವರ ಬೃಹತ್ಕಾದಂಬರಿಗಳಿಗೆ ಸ್ಫೂರ್ತಿ ಟಾಲ್‌ಸ್ಟಾಯ್‌ನ ರಿಸರಕ್ಶನ್ ಹಾಗೂ 'ವಾರ್ ಅಂಡ್ ಪೀಸ್'ದಂಥ ಕಾದಂಬರಿಗಳಿಂದಲೇ ದೊರಕಿತೆನ್ನುವುದನ್ನು ಎಲ್ಲರೂ ಬಲ್ಲರು.

ಪುಟ್ಟಪ್ಪನವರು ತಮ್ಮ ಓದುವ ಕಾಲದಲ್ಲಿ ತಮಗೆ ಬರುವ ಸ್ಕಾಲರ್‌ಶಿಪ್ ಹಣದಲ್ಲಿ ಪುಸ್ತಕಗಳನ್ನು ಕೊಂಡು ಓದುವ ಅಭ್ಯಾಸವನ್ನು ಬೆಳೆಸಿಕೊಂಡಿದ್ದರು. ಅದರಲ್ಲಿ ಇಂಗ್ಲಿಷ್ ಪುಸ್ತಕದ ಪಾಲೆ

ಹೆಚ್ಚು. ಉದಾಹರಣೆಗೆ Francis Turner Palgrave ಕವಿಯ The Golden Treasury ಎಂಬ ಇಂಗ್ಲಿಷ್ ಕವನಗಳ ಸುಪ್ರಸಿದ್ಧ ಸಂಕಲನವನ್ನು ಕೊಂಡು ಓದುತ್ತಿದ್ದರು. ಅದರಲ್ಲಿ ಅವರಿಗೆ ಬಲು ಪ್ರಿಯವಾದ ಕವನಗಳೆಂದರೆ Milton's On His blindness, Happy Life, Solitude, Licidas. ಲ್ಯಾಂಬ್ ಮತ್ತು ಹ್ಯಾಜಿಲೆಟ್ ಪ್ರಬಂಧಗಳನ್ನೂ ಜಾರ್ಜ್ ಈಲಿಯಟ್‌ಳ The Mill on the Floss ಕಾದಂಬರಿಗಳನ್ನು, Milton and his Poetry, Introduction to English literature' by Henry Hudson (ಇಂಗ್ಲಿಷ್ ಸಾಹಿತ್ಯಕ್ಕೆ ಪರಿಚಯ ಪ್ರವೇಶ ಹೆನ್ರಿ ಹಡ್ಸನ್), ಥಾಮಸ್ ಗ್ರೇ ಕವಿಯ 'ಎಲಿಜಿ', ಅಮೆರಿಕನ್ ಕವಿ ವ್ಹಿಟ್ಟಿಯರ್‌ನನ್ನು ಕುರಿತು ಒಂದು ಪ್ರಶಂಸೆಯ ಲೇಖನ, ಬ್ರಿಟನ್ ಸಾಮ್ರಾಜ್ಯದ ಚರಿತ್ರೆ ಮತ್ತು ಟೆನಿಸನ್ ಓದಿ, Tumultuous Dream ಎಂಬ ಕವನ ರಚನೆಯನ್ನು ಮಾಡಿದ್ದರು, ಬೈರನ್ ಕವಿಯ There's not a joy the world can give like that it takes away ಎಂದು ಪ್ರಾರಂಭವಾಗುವ ಕವನದ ಸ್ವತಂತ್ರಾನುವಾದವಾಗಿದೆ. ಟಾಲ್‌ಸ್ಟಾಯ್: 'ಅನ್ನಾ ಕೆರೆನಾ' ಮತ್ತು 'ಅಲೆಗ್ಸಾಂಡರ್ ಸೆಲ್‌ಕಿರ್ಕ್'ದ ಭಾಷಾಂತರ ಮೂಲಕ್ಕೆ ಅಕ್ಷರಶಃ ಹತ್ತಿರ ಇರಬೇಕೆಂಬ ಪ್ರಯತ್ನದಲ್ಲಿ ಭಾಷೆಯ ಶಯ್ಯೆರೂಕ್ಷವಾಗಿ ಬಿಟ್ಟಿದೆ. ಎಲಿಯಟ್ ವಿಮರ್ಶೆಯಲ್ಲಿ ಕುವೆಂಪು ಅವರಿಗಿದ್ದ ಆಸಕ್ತಿ ಬೇರೆ ಬೇರೆ ಆಕರಗಳಿಂದ ವಿಚಾರಗಳನ್ನು ತಂದು ಭಾರತೀಯ ಕಾವ್ಯಮೀಮಾಂಸೆಯನ್ನು ಬಲಗೊಳಿಸುವುದಾಗಿತ್ತು.

* * * * * *

**ಕೊನೆ ಟಿಪ್ಪಣಿ:**

೧. ದೇಜಗೌ ; ರಾಷ್ಟ್ರಕವಿ ಕುವೆಂಪು ; ಪು.೫೭ ; ಪುಸ್ತಕ ಪ್ರಕಾಶನ ; ಮೈಸೂರು, ಮೊದಲ ಮುದ್ರಣ, ೧೯೬೭

೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ–೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೪೨೭, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೩. ಅದೇ, ಪುಟ ೧.

೪. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೧೨೦, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೫. ದೇಜಗೌ ; ರಾಷ್ಟ್ರಕವಿ ಸಂದರ್ಶನ ; ಪು.೨೯ ; ಮೊದಲ ಮುದ್ರಣ ೧೯೮೪, ಸಹ್ಯಾದ್ರಿ ಪ್ರಕಾಶನ, ಮೈಸೂರು.

೬. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೧೬೦, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೭. ಅದೇ, ಪುಟ ೧೫೭.

೮. ಅದೇ, ಪುಟ ೭೭೨. .

೯. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೪೮೭, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೦. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೧೭೩, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೮೭೨, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೨. ಅದೇ, ಪುಟ ೬೬೭.

೧೩. Wordsworth ; Lines written a few lines above “Tintern Abbey” ; Page 1, Shmoop University Inc, 2010.

೧೪. ಅದೇ ಪುಟ ೧.

೧೫. ಕುವೆಂಪು: ನೆನಪಿನ ದೋಣಿಯಲ್ಲಿ: ಪುಟ ೩೧೨, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೬. ಕುವೆಂಪು; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೮೭, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೭. ಅದೇ, ಪುಟ ೯೮೭.

೧೮. ಜೆ. ಆಂ. ನಂಜುಂಡೇಗೌಡ, 'ಕುವೆಂಪು ಸಾರಸ್ವತ ಲೋಕ', ಪು. ೩

೧೯. ಕುವೆಂಪು: ನೆನಪಿನ ದೋಣಿಯಲ್ಲಿ: ಪುಟ ೨೪೧, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೦. ಕುವೆಂಪು; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೫೦೫, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

* * * * * *

# ಅಧ್ಯಾಯ – ೪

## ಕುವೆಂಪು ಅವರ ಇಂಗ್ಲಿಷ್ ಕವಿತೆ, ಆಶಯ, ಅಭಿವ್ಯಕ್ತಿ

೪.೧. ನಿಸರ್ಗ ಕುರಿತ ವಿಚಾರಗಳು

೪.೨. ದೈವ ಪರಿಕಲ್ಪನೆ

೪.೩. ಆಧ್ಯಾತ್ಮಿಕದ ಪರಿಕಲ್ಪನೆ

# ಕುವೆಂಪು ಅವರ ಇಂಗ್ಲಿಷ್ ಕವಿತೆ, ಆಶಯ, ಅಭಿವ್ಯಕ್ತಿ

ಕುವೆಂಪು ಅವರಿಗೆ ಪ್ರಕೃತಿ ಸೌಂದರ್ಯದ ಆಸ್ವಾದನೆ ಎನ್ನುವುದು ಪ್ರಮುಖ ಹಾಗೂ ಪ್ರಾಥಮಿಕ ಹಂತದ್ದು. ಆದರೆ ಇದು ಇಷ್ಟಕ್ಕೆ ನಿಲ್ಲದೆ, ವಿವಿಧ ಆಯಾಮಗಳನ್ನು, ದೈವೀಕರಿಸುವ ದೃಷ್ಟಿಕೋನಗಳನ್ನು ಪಡೆದುಕೊಳ್ಳುತ್ತದೆ. ಅದರಲ್ಲಿ ಪ್ರಮುಖವಾದದ್ದು ಸಾಂಸ್ಥಿಕ ಧರ್ಮದ ನಿರಾಕರಣೆ. ಸೃಷ್ಟಿಶಕ್ತಿಯ ಪ್ರಕೃತಿ ದರ್ಶನದಲ್ಲಿಯೇ ದೇವರನ್ನು ಕಾಣುವ ಪೂರ್ಣದೃಷ್ಟಿಯಲ್ಲಿ ಸಾಂಸ್ಥಿಕ ಧರ್ಮದ ದೇವರು, ನಂಬಿಕೆಗಳ ನಿರಾಕರಣೆ ಇರುವುದು ಇಲ್ಲಿನ ಕವಿತೆಗಳಲ್ಲಿ ಕಾಣಬಹುದಾಗಿದೆ. ನಿಸರ್ಗದಲ್ಲಿ ಸಂಪೂರ್ಣವಾಗಿ ಒಂದಾಗಿಬಿಡುವ ಅನುಭಾವವೇ ದೈವವಾಗಿ ಇಲ್ಲಿ ಕಂಡುಬಂದಿದೆ. ದೇವರ ನಂಬಿಕೆಯಿಂದಲೆ ಆಧ್ಯಾತ್ಮ ಎಂಬ ತತ್ವದಿಂದ ಹೊರಟ ಕುವೆಂಪು, ಆಚರಣೆ ಆಧ್ಯಾತ್ಮವಲ್ಲ, ವಿಚಾರವೇ ಆಧ್ಯಾತ್ಮ ಎಂಬ ವೈಚಾರಿಕತೆಯನ್ನು ಪ್ರತಿಪಾದಿಸಿದ್ದಾರೆ.

## ೪.೧. ನಿಸರ್ಗ ಕುರಿತ ವಿಚಾರಗಳು

ಕುವೆಂಪು ಪ್ರಕೃತಿಯ ಕವಿ, 'ಮೃಣ್ಮಯದ ಹೃದಯದಲ್ಲಿ ಚಿನ್ಮಯವ' ಕಂಡ ಕವಿಯೆಂದರೆ ಕುವೆಂಪು. ನವೋದಯ ಕವನಗಳಲ್ಲಿ ಪ್ರಮುಖವಾಗಿ ಕಾಣುವ ಅಂಶವೆಂದರೆ ಅವರ ತನ್ಮಯತೆ ಮತ್ತು ತಾದಾತ್ಮ್ಯತೆ. ಪ್ರಕೃತಿಯಲ್ಲಿ ಏಕಾಂಗಿ ಎಂಬುದು ಇಲ್ಲವೇ ಇಲ್ಲ, ಒಂದಕ್ಕೊಂದು ಪೂರಕವಾಗಿಯೇ ಪರಿಸರ ಸೃಷ್ಟಿಯಾಗಿರುತ್ತದೆ. ಪ್ರಕೃತಿ ಕುವೆಂಪು ಅವರಿಗೆ ಆನಂದದ, ಅನುಭಾವದ, ರಸಾನುಭಾವದ ನೆಲೆಯಾಗಿದ್ದಂತೆ ಮನುಷ್ಯನನ್ನು, ವಿಶೇಷತಃ ತನ್ನನ್ನು ಅರಿತುಕೊಳ್ಳುವ ಸಾಧನವೂ ಆಗಿದ್ದಿತು. ಅವರ ಕೃತಿಗಳಲ್ಲೆಲ್ಲ ನಿಸರ್ಗ ಸೌಂದರ್ಯದ ಹಾಗೂ ಮಲೆನಾಡ ಬದುಕಿನ ಸೂಕ್ಷ್ಮ ವಿವರಗಳು ತುಂಬಿವೆ. ಆದರೆ ಅದು ಕೇವಲ ಸೌಂದರ್ಯಾರಾಧನೆಯಲ್ಲ. "ಅವರ ವ್ಯಕ್ತಿತ್ವದ ಬೇರು ಬುಡದಂತೆ ಅವರನ್ನು ವ್ಯಾಪಿಸಿದ ನಿಸರ್ಗ ಪ್ರೀತಿ ಕೇವಲ ಸೌಂದರ್ಯ ನಿಷ್ಠವಾದುದಲ್ಲ, ಅದನ್ನೂ ಮೀರಿದ ಒಂದು ಆಧ್ಯಾತ್ಮಿಕ ಅನ್ವೇಷಣೆಯ ಹಾಗೂ ಸಾಕ್ಷಾತ್ಕಾರದ ಅನುಭವ ಕೂಡ" ಎಂದು ಹೇಳಿದ್ದಾರೆ. ಅವರು ಸಂಸ್ಕೃತಿಯಲ್ಲಿ ಮಾತ್ರವಲ್ಲ, ಪ್ರಕೃತಿಯಲ್ಲಿಯೂ ಮೌಲ್ಯಗಳನ್ನು ಕಂಡರು. ಇದನ್ನು 'ರೋನಲ್ಡ್ ಡ್ವಾರ್ಕಿನ್' Religious Attitude (ಪೂಜೆ, ಮತ ಅಥವಾ ವಿಮೋಚನೆಗೆ ಸ್ಥಳವಿಲ್ಲ) ಎಂದು ಕರೆದಿದ್ದಾನೆ. ಈ ದೃಷ್ಟಿಗೆ ಎರಡು ಮುಖಗಳಿವೆ. ಒಂದು ಮಾನವನ ಜೀವನಕ್ಕೆ, ನಮ್ಮ ನಂಬಿಕೆಗಳಿಗೆ ಹೊರತಾಗಿಯೂ, ತನ್ನದೇ ಆದ ಅರ್ಥ ಮತ್ತು ಮಹತ್ವಗಳಿವೆ. ಎರಡು, ನಾವು 'ಪ್ರಕೃತಿ' ಎಂದು ಗುರುತಿಸುವ ವಸ್ತು ಕೇವಲ ಒಂದು

ವಾಸ್ತವವಾಗಿರದೆ, ಭವ್ಯತೆಯನ್ನು ಹೊಂದಿದೆ. ಅದಕ್ಕೆ ನಿರಾವಲಂಬಿಯಾದ –ಅಂದರೆ ದೇವರ ಸೃಷ್ಟಿ ಇತ್ಯಾದಿ ನಂಬಿಕೆಗಳಿಲ್ಲದೆಯೂ ಅದ್ವೈತವಾದ ಮೌಲ್ಯವಿದೆ. ಕುವೆಂಪು ಅವರು ಆಸ್ತಿಕರಾಗಿದ್ದರು, ಸೂರ್ಯೋದಯ ಚಂದ್ರೋದಯಗಳಲ್ಲಿಯೂ 'ದೇವರ ರುಜು'ವನ್ನು ಕಾಣುವ ದರ್ಶನ ಅವರಲ್ಲಿದ್ದಿತು. ಹಾಗಾಗಿ, ಸಹಜವಾಗಿಯೆ ಅವರಿಗೆ ಮಾನವ ಜೀವನದ ಹಾಗೂ ಪ್ರಕೃತಿಯ ಭವ್ಯತೆ ಹಾಗೂ ಮೌಲ್ಯಗಳಲ್ಲಿ ನಂಬಿಕೆಯಿದ್ದಿತು. ಸಂಸ್ಕೃತಿ ಹಾಗೂ ನಿಸರ್ಗಪ್ರೇಮಗಳಲ್ಲಿ ಅವರು ಅಂತರವನ್ನು ಕಾಣಲಿಲ್ಲ. ತಮ್ಮನ್ನು ಆಧ್ಯಾತ್ಮ ಜೀವಿ ಎಂದು ಗುರುತಿಸಿಕೊಂಡಂತೆ ಕಾಡಿನ ಪ್ರೇಮಿಯೆಂದೂ ಗುರುತಿಸಿಕೊಂಡರು.

ನಿಸರ್ಗಪ್ರಿಯರಾದ ಕುವೆಂಪು ಅವರು ಪ್ರಕೃತಿಯಲ್ಲಿ ಪರಮಾತ್ಮನನ್ನು ಕಂಡವರು. ಕವಿ ಮನಸ್ಸಿಗೆ ಪ್ರಕೃತಿಯಾರಾಧನೆಯು ಪರಮಾತ್ಮನ ಆರಾಧನೆಯಾಗಿರುತ್ತದೆ ಎಂಬುದಕ್ಕೆ ಅವರ 'ಆನಂದಮಯ ಈ ಜಗಹೃದಯ' ಕವನದ ಸಾಲುಗಳು ಸಾಕ್ಷಿ.

"ಶಿವಕಾಣದ ಕವಿ ಕುರುಡನೊ
ಶಿವ ಕಾವ್ಯದ ಕಣ್ಣೊ
ರವಿವದನವೆ
ಬರಿಕಣ್ಣದು ಮಣ್ಣೊ
ಶಿವನಲ್ಲದೆ ಸೌಂದರ್ಯವೆ
ಶಿವ ಮುಖದ ಕಣ್ಣೊ"[೧]

ಕುವೆಂಪು ಹುಟ್ಟಿದ್ದೇ ನಿಸರ್ಗದ ಮಡಿಲಲ್ಲಿ. ಅವರ ಉಸಿರೇ ಹಸಿರು ಮತ್ತು ಪ್ರಕೃತಿ. ಮಲೆನಾಡಿನ ಹಸಿರನ್ನು,

"ಹಸುರಾಗದ, ಹಸಿರು ಮುಗಿಲು;
ಹಸುರು ಗದ್ದೆಯೀ ಬಯಲು;
ಹಸುರಿನ ಮಲೆ; ಹಸಿರು ಕಣಿವೆ;
ಹಸುರು ಸಂಜೆ ಈ ಬಿಸಿಲು"[೨]

ಕುವೆಂಪುರವರು ಕವಿಶೈಲದ ರಮಣೀಯ ಪ್ರಕೃತಿ ಸೊಬಗನ್ನು ಹೀಗೆ ಕಂಡಿದ್ದಾರೆ:

"ಹಸುರತ್ತಲ್! ಹಸುರಿತ್ತಲ್!
ಹಸುರೆತ್ತಲ್ ಕಡಲಿನಲಿ
ಹಸುರ್ಗಟ್ಟಿತೋ ಕವಿಯಾತ್ಮಂ
ಹಸುರು ನೆತ್ತರ್"[೩]

ಕುವೆಂಪು ಅವರ ಅನುಭವದ ತೀವ್ರತೆ ಎಷ್ಟರ ಮಟ್ಟಿಗಿತ್ತೆನ್ನುವುದಕ್ಕೆ ಈ ಕವನ ಒಂದು ಒಳ್ಳೆಯ ನಿದರ್ಶನವಾಗಿದೆ. ಕುವೆಂಪು ಅವರು ಹುಟ್ಟಿದ ಜಾಗದ ಮಣ್ಣಿನ ವಾಸನೆಗೆ ಮತ್ತು ಪರಿಸರದ ಕಪಿಶೈಲಕ್ಕೆ ಮಾರು ಹೋಗಿದ್ದರು. ಅವರ ಆಹಾರ, ಧ್ಯಾನ, ಉಸಿರು ಮುಂತಾದುವೆಲ್ಲವೂ

ಆ ಕವಿಶೈಲದ ಗಿರಿ ಪಂಕ್ತಿಗಳು. ಕುವೆಂಪು ತಮ್ಮ 'ಮಲೆನಾಡಿನ ಚಿತ್ರಗಳು' ಕೃತಿಯಲ್ಲಿ ಕವಿಶೈಲವನ್ನು 'ಕಣ್ಣಿಲ್ಲದವನಿಗೆ ಅದು ಒಂದು ಕಲ್ಲುಕಾಡು, ಕಲಾವಿದನಿಗೆ ಸಗ್ಗವೀಡು' ಎಂದು ಬಣ್ಣಿಸುತ್ತಾರೆ.

ಮುಂದೆ ಕವಿ ಈ ಉದಾಹರಣೆಗೆ ಹೀಗೆ ಸ್ಪಷ್ಟೀಕರಿಸಿದ್ದಾರೆ, 'ನಾನು ಮೈಸೂರಿನಲ್ಲಿದ್ದರೂ ಪ್ರತಿದಿನ ಪ್ರಾತಃಕಾಲ ಸಮಯದಲ್ಲಿ ಮಲೆನಾಡಿನ ನವಿಲುಕಲ್ಲಿನಲ್ಲೂ, ಪ್ರತಿಸಂಜೆ ಕವಿಶೈಲದಲ್ಲಿ ಕುಳಿತು ಧ್ಯಾನ ಮಾಡುತ್ತೇನೆ. ಅಲ್ಲಿನ ಪರ್ವತ ಶ್ರೇಣಿ, ಹಸುರು ಹೊದ್ದಿಕೆಯ ಅರಣ್ಯ, ಪಕ್ಷಿಗಳ ಕಲರವ, ಕಾನನದ ಗಂಭೀರ ಮೌನ, ಸಂಧ್ಯೆಯಲಿ ಮಿಳಿತವಾಗುವ ಕಿರಣಗಳ ಬಣ್ಣನೆ ಮುಂತಾದುವನ್ನು ನೆನೆದರೆ ತನುವಿನಲ್ಲಿ ಮಿಂಚಿನ ಹೊನಲು ಹರಿದು, ಹೃದಯ ಕಂಪಿಸಿ ಮನವು ಭಾವವೇಶದಲ್ಲಿ ಮೈಮರೆಯುತ್ತದೆ' ಎನ್ನುತ್ತಾರೆ.

'ಕವಿಶೈಲದಲ್ಲಿ ಸಂಧ್ಯೆ' ಕವನದಲ್ಲಿ ಕುವೆಂಪು ಬಣ್ಣಿಸುವುದು ಹೀಗೆ:

"ಪಶ್ಚಿಮ ಗಿರಿಶಿಖರದಲಿ ಸಂಧ್ಯೆಯ ರವಿ
ನಿರ್ಜನ ಕವಿಶೈಲದೊಳಗೊಬ್ಬನೆ ಕವಿ
ಮಲೆನಾಡಿನ ಬುವಿ ಮೇಲರುಣಚ್ಛವಿ
ವಸಂತ ಸಂಧ್ಯಾ ಸುವರ್ಣಕ್ರಾಂತಿ–
ಅನಂತ ಶಾಂತಿ"[೬]

ಅವರ 'ಪಕ್ಷಿಕಾಶಿ' ಕವಿತೆ ವಾಲ್ಮೀಕಿ ರಾಮಾಯಣದ ಕ್ರೌಂಚವಧೆಯನ್ನು ಕಂಡವನು ನುಡಿವಂತೆ ತೋರುತ್ತದೆ.

"ಇಲ್ಲಿ ಹುಗಲಿಲ್ಲ ನಿನಗೆ, ಓ ಬಿಯದ
ಇದು ಪಕ್ಷಿಕಾಶಿ

ಬಿಂಕದುಕುತಿಯನು ಕೊಂಕು
ಯುಕುತಿಯನು ಅಲ್ಲೆ ಬಿಟ್ಟು ಬಾ,
ಮೈಯ ತೊಳೆದು ಬಾ, ಕಯ್ಯ ಮುಗಿದು ಬಾ,
ಹಮ್ಮನುಳಿದು ಬಾ,

ಇಕ್ಷು ಮಧುರಮೆನೆ ಮೋಕ್ಷ ಪಕ್ಷಿಯಲಿ
ನಾಡಿ ನಾಡಿಯಲಿ ಹಾಡಿ ಹರಿದು
ನಲಿದಾಡಬಹುದು ಬಾ"[೭]

ಕುವೆಂಪು ಅವರು ನಿಸರ್ಗದ ಶಿಶು. ಪ್ರಕೃತಿಯ ಮಾಯೆ, ಭವ್ಯತೆ, ರುದ್ರ ರಮಣೀಯತೆ ಅವರನ್ನು ಕಾಡಿದ ಬಗೆ ಹಲವು. ಅವರ ಆಧ್ಯಾತ್ಮಿಕ ನಿಲುವು ನಿಸರ್ಗದಷ್ಟೇ ಸರಳ, ಸಂಕೀರ್ಣ

ಮತ್ತು ನಿಚ್ಚಳ, ಸಾಮಾನ್ಯ ತಾತ್ತ್ವಿಕರಿಗೆ ಪ್ರಕೃತಿ ಜಡವಾದುದಾಗಿ ಕಂಡರೆ, ಅದು ಕುವೆಂಪು ಅವರಿಗೆ 'ಜಡವೆಂಬುದಲ್ಲ ಚೇತನದ ನಟನೆಯ ಲೀಲೆ'ಯಾಗಿ ಕಾಣುತ್ತದೆ.

(ಶ್ರೀಪಾದ ಭಟ್, ನಿಲುಮೆ)

ಪ್ರಕೃತಿ ಒಂದು ವಿಸ್ಮಯ. "ಪ್ರಕೃತಿಯಾರಾಧನೆಯ ಪರಮನಾರಾಧನೆ. ಪ್ರಕೃತಿಯೊಲ್ಮೆಯೆ ಮುಕ್ತಿಯಾನಂದ ಸಾಧನೆ" ಎಂಬುದು ಅವರ ನಿಲುವು. "ಶರತ್ಕಾಲದ ಸೂರ್ಯೋದಯದಲಿ" ಎಂಬ ಕವನದಲ್ಲಿ

"ಕಲ್ಲಲಿ, ಮಣ್ಣಲಿ, ಹುಲ್ಲಲಿ, ಹುಡಿಯಲಿ
ನೀರಿನ ಹನಿಯಲಿ ಬೆಂಕಿಯ ಕಿಡಿಯಲಿ
ನನ್ನಲಿ? ಎಲ್ಲಿಯೂ ಚೈತನ್ಯ! ಅನ್ನುತ್ತಾರೆ"[೬]

ಕುವೆಂಪು ಅವರ ನಿಸರ್ಗದ ಆರಾಧನೆಯ ಕುರಿತು ಜಿಎಸ್ಎಸ್ ಹೀಗೆ ಹೇಳುತ್ತಾರೆ:

'ಕುವೆಂಪು ಪಂಪನ ಅನಂತರ, ಪಂಪನಿಗೂ ಒಂದು ಕೈ ಮಿಗಿಲಾಗಿಯೇ, ತಮ್ಮ ನಿಸರ್ಗ ಪ್ರೀತಿಯನ್ನು ಜನ್ಮಜಾತವಾಗಿಯೇ ಪಡೆದುಕೊಂಡು ಅಭಿವ್ಯಕ್ತಿಸಿದವರು. ಪಂಪ ದೂರದ ಆ ಬೋಧನದ ಅರಿಕೇಸರಿಯ ಆಸ್ಥಾನದೊಳಗಿದ್ದು 'ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂದು ಹಂಬಲಿಸಿದರೆ, ಕುವೆಂಪು ಮೈಸೂರಿನಲ್ಲಿ ನೆಲಸಬೇಕಾದ ಅನಿವಾರ್ಯತೆಯಲ್ಲಿ, ಪಂಪನ ಬನವಾಸಿಯನ್ನು ಒಳಗೊಂಡ ಸಹ್ಯಾದ್ರಿಯ ಅರಣ್ಯಶ್ರೇಣಿಯ ಪರಿಸರವನ್ನು ನೆನೆದು 'ಹೋಗುವೆನು ನಾ ಮಲೆನಾಡಿಗೆ, ನನ್ನ ಒಲುಮೆಯ ಗೂಡಿಗೆ'[೭] ಎಂದು ಹಂಬಲಿಸಿದವರು. ಶೈಲಿಯ ಗಾಂಭೀರ್ಯ ಮತ್ತು ವಿದ್ವತ್ತಿನ ಹಿನ್ನೆಲೆಯಲ್ಲಿ ಕೂಡ ಕುವೆಂಪು ಪಂಪನನ್ನು ನೆನಪಿಗೆ ತರುತ್ತಾರೆ.'

ಕುವೆಂಪು ಅವರ ಕೃತಿಗಳಲ್ಲಿ ಮಲೆನಾಡಿನ ಚಿತ್ರಗಳೂ ಒಂದು. ಮಲೆನಾಡಿನ ಸೌಂದರ್ಯವನ್ನು ಕಣ್ಣಿಗೆ ಕಟ್ಟುವಂತೆ, ಅಲ್ಲಿನ ಪ್ರಕೃತಿಯ ರಮ್ಯ ಮನೋಹರ ದೃಶ್ಯವನ್ನು ಮಾತಿನಲ್ಲಿ ಸೆರೆಹಿಡಿಯುವ ಅದ್ಭುತ ಶಕ್ತಿ ಕುವೆಂಪು ಅವರ ಬರಹಗಳದ್ದು. ಮಲೆನಾಡಿನ ಮಡಿಲಲ್ಲಿ ಹಾಯಾಗಿದ್ದ ಕುಪ್ಪಳಿ ಮನೆ, ಕವಿಶೈಲ, ಕುಪ್ಪಳಿ ಮನೆಯ ದಕ್ಷಿಣ ಭಾಗದಲ್ಲಿನ ಭೀಮಾಕಾರವಾದ ಪರ್ವತ ಶ್ರೇಣಿಗಳು, ಪಶ್ಚಿಮ ಭಾಗಗಳ ಬೆಟ್ಟಗಳು, ಪೂರ್ವಕ್ಕೆ ಹರಡಿಕೊಂಡ ಅಡಿಕೆ ತೋಟಗಳು ಮುಂತಾದವುಗಳ ವರ್ಣನೆಯನ್ನು ಓದುಗನ ಮನಪಟಲದಲ್ಲಿ ಹಾಗೆಯೇ ಚಿತ್ರಗಳಾಗುತ್ತಿರುವಂತೆ ಕಣ್ಣಿಗೆ ಕಟ್ಟುವ ಕುವೆಂಪು ನುಡಿಯಲ್ಲಿ ಪ್ರಕೃತಿ ಬರಿ ಅದೇ ಆಗಿ ಉಳಿಯುವುದಿಲ್ಲ. ಕವಿಶೈಲ ಪಶ್ಚಿಮ ದಿಕ್ಕಿಗೆ ಮುಖ ಹಾಕಿಕೊಂಡಿದೆ. ಪೂರ್ವದಿಕ್ಕಿನಲ್ಲಿ ಎತ್ತರವಾದ ಬೆಟ್ಟಗಾಡುಗಳು ಹಬ್ಬಿರುವುದರಿಂದ ಉಳಿದ ದಿಕ್ಕುಗಳಲ್ಲಿ ನಮಗೆ ಗೋಚರವಾಗುವಂತೆ ದೂರದೃಶ್ಯಗಳು ಕಾಣುವುದಿಲ್ಲ. ಆದ್ದರಿಂದ ಅಲ್ಲಿಗೆ ಸೂರ್ಯೋದಯಕ್ಕಿಂತಲೂ ಸೂರ್ಯಾಸ್ತವೇ ಸಹಸ್ರ ಪಾಲು ಅತಿಶಯವಾಗಿ ತೋರುತ್ತದೆ. ಕವಿಶೈಲವನ್ನು ನೆನೆದರೆ ನೂರಾರು ಮಧುರ ಚಿತ್ರಗಳು ಅನುಭವಗಳು, ವ್ಯಕ್ತಿಗಳು, ಸನ್ನಿವೇಶಗಳು, ಮನಸ್ಸಿಗೆ ಬಂದು ಅದನ್ನು ಇನ್ನೂ ಹೆಚ್ಚಾಗಿ ಪ್ರೀತಿ ಪಾತ್ರರಾಗುವಂತೆ ಮಾಡುತ್ತವೆ. ಒಂದೆರಡು ಫರ್ಲಾಂಗುಗಳಷ್ಟು ವಿಸ್ತಾರವಾಗಿ ಹಬ್ಬಿರುವ ಆ ಬಂಡೆಯಲ್ಲಿ ಒಂದು ಕಡೆ ದಪ್ಪ ಅಕ್ಷರಗಳಿಂದ

"ಕವಿಶೈಲ" ಎಂಬ ಹೆಸರು ಖಚಿತವಾಗಿದೆ. ಇನ್ನೊಂದು ಕಡೆ 'ಅನಿರ್ವಚನೀಯ ಮೂರ್ತಿ'ಎಂಬ ಚಿತ್ರವಿದೆ. ಮತ್ತೊಂದೆಡೆ ಏಸುಕ್ರಿಸ್ತನನ್ನು ಶಿಲುಬೆಗೆ ಹಾಕಿದ ರೀತಿಯ ಚಿತ್ರವಿದೆ. ಇಲ್ಲಿನ ಸಂಧ್ಯಾಕಾಲದಲ್ಲಿ ಎಂತವನೂ ಧ್ಯಾನಶೀಲನಾಗದೆ ಹಿಂತಿರುಗುವುದಿಲ್ಲ.[೮]

ಪ್ರಕೃತಿದರ್ಶನದಲ್ಲಿ ನಾವು ಹುಡುಕಬೇಕಾದದ್ದು ಹೊಸ ಮನುಷ್ಯನನ್ನು. ಪ್ರಕೃತಿದರ್ಶನದಲ್ಲಿ ಸಂಭವಿಸುವ ಸ್ಥಿತ್ಯಂತರಗಳು ನೋಡುವಿಕೆಯ ಕ್ರಮಗಳಲ್ಲಿ ಆಗುವ ಬದಲಾವಣೆಗೆ ಸಂಬಂಧಿಸಿದ್ದು. ಕುವೆಂಪು ಪ್ರಕೃತಿಗೀತೆಗಳಲ್ಲಿ ನಾವು ಕಾಣುವುದು ಪ್ರಾಥಮಿಕ ಮಟ್ಟದ ಸೌಂದರ್ಯಾರಾಧನೆಯನ್ನಲ್ಲ. ಅವುಗಳ ಹಿಂದೆ ಕನ್ನಡಕ್ಕೆ ಹೊಸದಾದ ಒಂದು ಬಗೆಯ ತಹತಹ ಇದೆ, ದೈನಂದಿನ ಲಯಗಳಲ್ಲಿ ಅಖಂಡತೆಯನ್ನು, ಏಕಾಗ್ರತೆಯನ್ನು ಪಡೆಯುವ ತವಕ ಇದೆ.

ಕುವೆಂಪು ಅವರ ಪ್ರಕೃತಿದರ್ಶನದಲ್ಲಿ ಕಾಣುವ ಈ ಹೊಸ ವ್ಯಕ್ತಿತ್ವವನ್ನೆ ಶಂಕರ ಮೊಕಾಶಿ ಪುಣೇಕರರು 'ಇಂಡುವಿಜುವೇಶನ್' ಎಂದು ಕರೆಯುತ್ತಾರೆ. ಈ ವ್ಯಕ್ತಿ ವಿಶಿಷ್ಟ ನಿಲುವೇ ಕುವೆಂಪು ಪ್ರಕೃತಿ ದರ್ಶನದ ನಿಯಂತ್ರಕ ನಿಲುವು. ಹಾಗೆಯೇ ನಿಸರ್ಗದ ಚಲನಶೀಲತೆಯನ್ನು, ಪರಿಪಕ್ವತೆಯ ಪರಿಕಲ್ಪನೆಗಳನ್ನು, ಸಾಹಸ ಮತ್ತು ಬೆರಗುಗೊಳಿಸುವ ಸಂದರ್ಭಗಳನ್ನು ಸಹ್ಯಾದ್ರಿ ತರಂಗಿತವಾದ ಮಲೆನಾಡು ಕವಿಗೆ ನೀಡಿತು. ಇದರಿಂದಾಗಿಯೇ ಕಾಡಿನ ಮೂಲೆ ಮೂಲೆಯನ್ನು ಅದ್ಭುತ ವಿಸ್ತಾರದೊಂದಿಗೆ ವಿನೂತನ ಶೈಲಿಯ ಕಾವ್ಯದಲ್ಲಿ ಕಟ್ಟಿಕೊಟ್ಟ ಪ್ರತಿಭೆ ಕುವೆಂಪು ಅವರದಾಗಿತ್ತು.

ಸಹ್ಯಾದ್ರಿಯ ನೈಸರ್ಗಿಕ ರಮಣೀಯತೆಯ ಕವಿ ಚೇತನ ಕಂಡು,

"ಹಸಿರಾಗಸ ಹಸಿರ ಮುಗಿಲು
ಹಸಿರ ಗದ್ದೆ, ಹಸಿರ ಕಣಿವೆ
.......ಹಸಿರತ್ತಲ್ ಹಸಿರಿತ್ತಲ್
ಒಡನೆ ಹಸಿರಾದುದು ಕವಿಯಾತ್ಮಂ"[೯]

ಮಲೆನಾಡ ಸಿರಿಯನ್ನು ಆಸ್ವಾದಿಸಿ ನಿಸರ್ಗದ ಕುರಿತು ತಮ್ಮಲ್ಲಿ ಮೂಡಿದ್ದ ಸೌಂದರ್ಯಾಭಿರುಚಿಯನ್ನು ಜೀವ ಪೌಷ್ಟಿಕ ಸಾಮಗ್ರಿಯನ್ನಾಗಿಸಿಕೊಂಡು ಆ ಸೌಂದರ್ಯದ ವಿಸ್ತಾರವನ್ನು ನಿರ್ಲಿಪ್ತವಾಗಿ ಚಿತ್ರಿಸಿದ ನೈಜ ಕಾವ್ಯದ ಸೃಷ್ಟಿಕರ್ತ ಕುವೆಂಪು. ಒಂದು ಪ್ರಾತಃಕಾಲದ ನಿಸರ್ಗದ ನಯನಮೋಹಕ ರಮಣೀಯತೆಯನ್ನು ಕವಿಯ ಮನ ಹೀಗೆ ಬಿಚ್ಚಿಡುತ್ತದೆ.

"ಇಂತಹ ಸುಂದರ ಪ್ರಾತಃಕಾಲದಿ
ಜೀವಿಸುವುದಕ್ಕಿಂತಲೂ ಬೇರೆಯ ಗುರಿ
ಜೀವಕೆ ಬೇಕಿಲ್ಲ:
ಇಂತಹ ದಿವ್ಯ ಪ್ರಭಾತ ಕಾಲದಿ
ಬದುಕುವುಕ್ಕಿಂತಲೂ ರಸಜೀವಿಗೆ
ಬೇರೆಯ ಗುರಿಯಿಲ್ಲ!"[೧೦]

ಇದೇ ಕವಿ ಚೇತನ ನಿಸರ್ಗದ ಇರುವಿಕೆಯ ಕುರಿತು ನಮ್ಮ ಅರಿವನ್ನು ಎಚ್ಚರಿಸಲು ಪ್ರಯತ್ನಿಸುತ್ತದೆ.

"ಓಡು ಹೊರಗೆ, ಓಡು ನೋಡು
ಶಿವ ಶಿವ ಕಣ್ದೆರೆದು
ಪ್ರಕೃತಿ ಸೌಂದರ್ಯಮಂ ಭಾವನೋಜ್ವಲವಾಗಿ
ನೋಡದಿಹ ಬಾಳೊಂದು ಬಾಳಲ್ಲ"[೧೧]

ಕವಿ ಮನ ನಿಸರ್ಗ ನೀಡುವ ರಸಾನಂದದ ತನ್ಮಯತೆಗೆ ಕಾಲವುಂಟೆ? ಎಂದು ಪ್ರಶ್ನಿಸುತ್ತದೆ.

"ಮಲೆಯ ಮೇದು ಹಣ್ಣ ತಿಂದು
ಮುದವು ಮೀರೆ ಚಿಮ್ಮುನೆಗೆವ
ಎರಳೆ ಸರಸವಾಡುವೆಡೆಯೊೋಳ್
ಉದಿಸಿ ಬರುವೆನು!"[೧೨]

ಎಂದು ತನ್ನ ನಿಸರ್ಗ ಪ್ರೀತಿಯನ್ನು ಬಹಳ ಮುಕ್ತವಾಗಿ ವ್ಯಕ್ತಪಡಿಸುತ್ತದೆ.

ಕುವೆಂಪು ಅವರ ಪ್ರಕೃತಿದರ್ಶನದ ಪ್ರಾಥಮಿಕ ನೆಲೆ ದೈವೀ ಪರಿವರ್ತನೆ. ಪ್ರಕೃತಿ ಎನ್ನುವುದು ಕುವೆಂಪುವಿಗೆ ಪರಮನಾರಾಧನೆ. ಪ್ರಕೃತಿಯ ಚೆಲುವೆಲ್ಲವೂ ದೈವದ ಸಾಕ್ಷಾತ್ಕಾರವೇ. ಅಂತಿಮ ಹಂತದಲ್ಲಿ ಪ್ರಕೃತಿ ಸೌಂದರ್ಯ ಮತ್ತು ದೈವಗಳೆರಡರ ನಡುವೆ ಭಿನ್ನತೆಯೇನೂ ಕಾಣುವುದಿಲ್ಲ ಎಂದಿದ್ದಾರೆ ಕುವೆಂಪು. ಅವರ ಎರಡೂ ಆಂಗ್ಲ ಕವಿತೆಗಳ ಸಂಕಲನದಲ್ಲಿ ನಿಸರ್ಗ ಪ್ರಜ್ಞೆ ಹೇಗೆ ಅಭಿವ್ಯಕ್ತಿಗೊಂಡಿದೆ ಎನ್ನುವುದನ್ನು ಈ ಕೆಳಗೆ ಪರಿಶೀಲಿಸಲಾಗಿದೆ. ಅದಕ್ಕಿಂತ ಮೊದಲು ಬರೆಯುವ ಮುನ್ನ ಅವರಿಗಿದ್ದ ತಲ್ಲಣ ಎಂತಹುದು ಮತ್ತು ಮುಂದುವರಿಯುತ್ತಾ ಅದು ಅವರ ಭರವಸೆಯ ಸಂಗತಿಯಾದದ್ದರ ಕುರಿತು ಪರಿಶೀಲಿಸಲಾಗಿದೆ.

**Prelude (ಪ್ರಿಲ್ಯೂಡ್)**

ವಿಲಿಯಂ ವರ್ಡ್ಸ್‌ವರ್ಥ್ ಕವಿಯ ಪ್ರಿಲ್ಯೂಡ್ ಎಂಬ ಕವಿತೆಯಿದೆ. ಬಿಗಿನರ್ಸ್ ಮ್ಯೂಸ್‌ನ ಮೊದಲ ಕವಿತೆಯ ಹೆಸರೂ ಪ್ರಿಲ್ಯೂಡ್. ಅದರ ಮೊದಲ ಕೆಲವು ಸಾಲುಗಳು ಹೀಗಿವೆ:

"Dishearten not, my friend, this bard unknown,
Who holds an alien harp and not his own;
And tries to string its mazy chords before
A crowd immense. His firstling tunes may pour"[13]

ಅಂತಃಸ್ಫೂರ್ತಿಯೆನ್ನುವುದು ಕವಿ ಮನಸ್ಸನ್ನು ಪೋಷಿಸಿ, ಸ್ಫೂರ್ತಿ ಬತ್ತದಂತೆ ಕಾಯ್ದು, ಬೆಳೆಯಿಸುವಂಥದ್ದು. ಕುವೆಂಪುವಿಗೂ ಈ ಪೋಷಣೆ ದೊರಕಿತ್ತೆನ್ನುವುದು ವಾಸ್ತವವಾದ ಸಂಗತಿ. ಅವರ ವಿದ್ಯಾರ್ಥಿ ದೆಸೆಯಲ್ಲಿ ಹಿರಿಯರು ಅವರಿಗೆ ಒದಗಿಸಿದ ಸ್ಫೂರ್ತಿ, ಬೆನ್ನು ತಟ್ಟಿದ ಬಗೆ

ಬಿಗಿನರ್ಸ್ ಮ್ಯೂಸ್‌ನ, ಏಲಿಯನ್ ಹಾರ್ಪ್‌ನ ಕವಿತೆಗಳನ್ನು ಆಂಗ್ಲ ಭಾಷೆಯಲ್ಲಿ ಬರೆಯಿಸಿತು ಎನ್ನಬಹುದು. ೧೯ ವರ್ಷ ವಯಸ್ಸಿನ ಮುಗ್ಧನಿಗೆ, ಆಗಷ್ಟೇ ಪ್ರಪಂಚಕ್ಕೆ ಕಣ್ಣು ತೆರೆಯುತ್ತಿರುವ ರೊಮ್ಯಾಂಟಿಕ್ ಮನೋಭಾವದ ಕಿಶೋರನಿಗೆ ತನ್ನಲ್ಲಿರುವ ಕಾವ್ಯಪ್ರತಿಭೆಯನ್ನು ಲೋಕಕ್ಕೆ ತೋರಿಸುವ ತವಕ. ಆದ್ದರಿಂದಲೇ ಅವರು ಬದುಕುತ್ತಿದ್ದುದು ಒಬ್ಬಗೆಯ ತಲ್ಲಣದ ಬದುಕು. ಅದರ ನಿವೇದನೆಗೆ ಬರೆದ ಕವಿತೆಯೇ ಈ ಪ್ರಿಲ್ಯೂಡ್.

"An unsonorous note, but not disdain
His coming tunes,"[14]

ಅವರಲ್ಲಿ ಒಂದು ನಂಬಿಕೆಯಿದೆ. ನಾನು ಬರೆಯಬಲ್ಲೆ ಎನ್ನುವುದು. ಮೊದಲ ನುಡಿಯು ವ್ಯರ್ಥವಾದರೆ ತಾನೆ ಏನು? ಆದರೆ ಆ ಭರವಸೆ, ನಂಬಿಕೆಗಳನ್ನು ಕೆಡಿಸುವ ಮಾತಾಡಬೇಡಿ ಎನ್ನುವ ಪ್ರಾರ್ಥನೆಯಿದೆ.

"tho' first is sung in vain;
His trembling hands may spoil his worthy style"[15]

ಎಲ್ಲ ಕವಿಗಳೂ ಆರಂಭಿಸುವುದು ಹೀಗೆಯೇ. ಎಲ್ಲರೂ ಹುಟ್ಟು ಕವಿಗಳಲ್ಲ. ಎಲ್ಲರು ಬರೆದುದೂ ಮಹಾಕಾವ್ಯವಾಗಲಾರದು. ಬರೆದು ಕುಶಲರಾದವರನೇಕ. ಒಂದೊಂದು ತಪ್ಪು ಹೆಜ್ಜೆಯೂ ಸರಿದಾರಿಯೆಡೆಗೆ ಮಾಡುತ್ತಿರುವ ಸುಯತ್ನ. ಇದು ಜಗವರಿತಿರುವ ಸಂಗತಿ. ಆದ್ದರಿಂದಲೇ ಕವಿಯು ನುಡಿಯುತ್ತಿದ್ದಾನೆ.

"And skillful better bards you might have hear'd
Whose singing tunes were each a golden word,"[16]

ಅವರು ಮುನ್ನಡಿಯಿರಿಸಿದ್ದು ತನ್ನಂತೆಯೇ. ಅಂತೆಯೇ ತನ್ನನ್ನೂ ಪರಿಭಾವಿಸಬೇಕಾದ ಅಗತ್ಯವುಂಟೆಂದು ನೆನಪಿಸುವ ಕವಿ ಕೇಳುವುದು ಹೀಗೆ:

"Whose faults are counted as a better style;
And yet repine not this, bat hear a while
This bard unknown to public fame and say
Him, wheather each a bad or worthy lay."[17]

ನನ್ನನ್ನೂ ಹೀಗೇ ಭಾವಿಸತಕ್ಕದ್ದು ಎಂದು ಕೇಳುವ ಆ ಕವಿ ನಡೆದ ಹಾದಿಯಂತೂ ಅಬ್ಬಾ ಎನ್ನಿಸುವಂಥದು.

ಇಲ್ಲಿನ ಏಳು ಕವಿತೆಗಳಲ್ಲಿ ಮೊದಲನೆಯದು 'ಅರಿಕೆ'ಯಂತಿರುವ Prelude. ಇದು Iambic pentameter (ಅಯಾಂಬಿಕ್ ಪೆಂಟಾಮೀಟರ್)ನಲ್ಲಿ ಅಂತ್ಯಪ್ರಾಸದ ದ್ವಿಪದಿಯಲ್ಲಿದೆ. ಕುವೆಂಪು ಅವರೇ ಹೇಳುವಂತೆ–'ಕವಿ ಇಲ್ಲಿ ತಾನಿನ್ನೂ ಅಂಬೆಗಾಲಿಕ್ಕುತ್ತಿರುವ ವಾಗ್ದೇವಿಯ ಶಿಶುವೆಂದೂ, ತಾನು ಹಿಡಿದಿರುವ ತಂತಿವಾದ್ಯ (ಹಾರ್ಪ್) ತನ್ನದಲ್ಲದ ವಿದೇಶೀಯ ವಾದ್ಯವೆಂದೂ

ನುಡಿದು, ಆಲಿಸುವವರ ಸಹಾನುಭೂತಿಯನ್ನು ಯಾಚಿಸುತ್ತಾನೆ. ತಾನು ಬರೆಯುತ್ತಿರುವುದು ತನ್ನ ತಾಯಿ ನುಡಿಯಲ್ಲ ಎಂಬುದರ ಅರಿವು ಕವಿಯಲ್ಲಿ ಎಚ್ಚೆತ್ತಿದೆ. ಅದಕ್ಕಾಗಿ ಕವಿ ಒಂದು ರೀತಿಯಲ್ಲಿ ಕ್ಷಮೆ ಬೇಡುತ್ತಿದ್ದಾರೆ. ಮೇಲಿನ ನುಡಿಗಳು ಅಪರಿಚಿತ ಕವಿ, ಎಂದರೆ ಇನ್ನೂ ಲೋಕ ಮಾನ್ಯ ಮಾಡಿರದ ಕವಿಯೊಬ್ಬನ ಅನುಮಾನ ಶಂಕೆಗಳನ್ನು ವ್ಯಕ್ತ ಪಡಿಸುತ್ತಿದೆ. ಮನೆಯ ಹೆಣ್ಣನ್ನು ಪರರ ಮನೆಗೊಪ್ಪಿಸುವ ಕಸಿವಿಸಿಯಂತೆಯೂ ತನ್ನ ಮೊದಲ ಬರಹವನ್ನು ಗುರುಗಳಿಗೆ ತೋರುವ ಮುನ್ನಿನ ತಳಮಳದಂತೆಯೂ ಅವರ ಪ್ರಾರ್ಥನೆಯಿದೆ. ಇದೊಂದು ಪ್ರಾರ್ಥನೆ. ಅಲ್ಲಿ ನೋವಿದೆ, ತಿರಸ್ಕಾರದ ಆತಂಕವಿದೆ, ಹೇಗಿದ್ದರೂ ಸ್ವೀಕರಿಸಿರೆನ್ನುವ ಆರ್ದ್ರ ಕೇಳ್ಕೆಯಿದೆ. ಇಲ್ಲಿಯೂ ಅಂಥದೇ ಮನಸ್ಸು ಕೆಲಸ ಮಾಡುತ್ತಿದೆ. ತನ್ನ ಸಾಮರ್ಥ್ಯವನ್ನು ಕುರಿತ ಶಂಕಾಪ್ರಾಬಲ್ಯವಿದೆ. ಅದಕ್ಕಿಂತ ಹೆಚ್ಚಿಗೆ ಇಲ್ಲಿ ಕಾಣುತ್ತಿರುವುದು ಒಂದು ಗಾಢವಾದ ಎಚ್ಚರ. ತಾನು ಹಿಡಿದಿರುವುದು 'ತನ್ನದಲ್ಲದ ಪರಕೀಯ ವಾದ್ಯವನು'. ಅದು ತಾನು ಬಿಡಿಸಬಲ್ಲ ಸಿಕ್ಕುಗಟ್ಟಿದ ತಂತಿಯದಲ್ಲ. ಬದಲಿಗೆ ತಾನು ಒಳಹೊರಗು ಅರಿಯದ ಗೋಜಲು ತಂತಿಗಳ ವಾದ್ಯ.

ಉಳಿದ ಆರು ಕವಿತೆಗಳಲ್ಲಿ The Urban Scenes ಮತ್ತು The Rural Scenes ಎಂಬೆರಡು ಕವಿತೆಗಳು ಮಿಲ್ಟನ್ ಕವಿಯ L'allaegro ಮತ್ತು Ilpenseroso ಕವನಗಳ ಅನುಕರಣೆಗಳು. 'Ode to the cuckoo' Awake My slumbering Heart' ಮತ್ತು We walk the verdant Earth with Blindfold eyes' ಎಂಬ ಈ ಮೂರು ಕವಿತೆಗಳು ವರ್ಡ್ಸ್ವರ್ತ್‌ನ ಅನುಕರಣೆಗಳು. ಇವುಗಳಲ್ಲಿ ಒಂದು ಓಡ್, ಮತ್ತೆರಡು ಸಾನೆಟ್‌ಗಳು. ಈ ಎರಡು ಸಾನೆಟ್‌ಗಳು ಪ್ರಕೃತಿ ಪ್ರೀತಿ ಹಾಗೂ ಸೌಂದರ್ಯ ಕುರಿತಂಥವು. Massacre of Delhi (ದೆಹಲಿಯ ಕಗ್ಗೊಲೆ) ಎಂಬ ಕವಿತೆ ತೈಮೂರನ ದಂಡ ಯಾತ್ರೆಯ ಸಮಯದಲ್ಲಿ ನಡೆದ ಸಾಮೂಹಿಕ ಕಗ್ಗೊಲೆಗೆ ಸಂಬಂಧಪಟ್ಟಿದೆ.

ಕುವೆಂಪು ಅವರ ಬದುಕಿನಲ್ಲಿ ಹಳ್ಳಿಗಾಡು ನಿರ್ವಹಿಸುವ ಬಗೆ ಸಂಘರ್ಷಾತ್ಮಕವಾದುದು. ಒಂದೆಡೆ ಅದು ಸ್ವಚ್ಛ, ನಿರ್ಮಲ, ಮುಗ್ಧ, ಅಕಳಂಕಿತ. ಇನ್ನೊಂದೆಡೆ ಅದು ಮೌಢ್ಯಭರಿತ. ಅನಕ್ಷರರಿಂದ ತುಂಬಿದ ಕಾಡು ಬಯಲು. ಅಲ್ಲಿಂದ ಬಂದ ಈ ಕವಿ ತನ್ನ ತಾ ಹಿಡಿಯುವ ಮೊದಲು ಗೋಜಲು ಪರಕೀಯ ವಾದ್ಯವನ್ನು ಹಿಡಿದಿದ್ದಾನೆ. ಇದು ಅಳುಕಿನ ಅಂತೆಯೇ ಮಹತ್ವಾಕಾಂಕ್ಷೆಯ ಕೆಲಸ. ಇಂಥ ಕಾರ್ಯಕ್ಕೆಳೆಸಿದರಿಂದಲೇ ಅವನ ಅಹವಾಲು:

> "Ye learned people hear a country bard
> To judge his alien lyre, say, whether hard
> Or smooth his flowing tunes."[18]

ಕನ್ನಡವೆಂಬುದು ಮಧುರವಾಣಿ. ಆದರೆ ಕವಿಯು ಮೋಹಿತನಾಗಿರುವುದು ಅದರ ಕುರಿತಲ್ಲ. ಕನ್ನಡದ ಕಿವಿಗಳಿಗೆ ತೋರಬಹುದು ಪರಕೀಯ ದನಿಯು ಕಠೋರವೆಂದು. ಆದರೆ ಅವು ಚೆಂದವಾಗುವ ಗುಣಲಕ್ಷಣಗಳನ್ನು ಹೊಂದಿವೆಯೆಂದು,

"But never deem,

The tunes are bad and theme a poorer theme;

For tho' the tunes are bad and themes are poor,

Yet; will be better,"[19]

ತನ್ನ ಕಾವ್ಯ ಪ್ರಸ್ತುತಿಯು ಹೊಸದಾಗಿರುವುದೆಂದು ಅವನಲ್ಲಿ ನಂಬಿಕೆಯುಂಟು. ಅದರಿಂದಲೇ ಅವನು ಹೇಳುತ್ತಾನೆ:

"Its useful themes enrich'd tho' they be high

When it is young. Ye friends and learned men

Courage his youthful lyre to sing again

With nobler notes and nobler themes, inspired"[20]

ಕುವೆಂಪು ಅವರ ಇಂಗ್ಲಿಷ್ ಕವಿತೆಗಳನ್ನು ಅಭ್ಯಸಿಸುವವರಿಗೆ ಮೊದಲು ಅರಿವಿಗೆ ಬರುವುದು ಅವರು ಆಯ್ದುಕೊಳ್ಳುವ ಪ್ರತಿಮೆಗಳು, ಅವುಗಳ ಭವ್ಯತೆ, ಅವುಗಳ ಕಲ್ಪನಾ ಶ್ರೀಮಂತಿಕೆ ಮುಂತಾದುವು. ಹಾಗೆ ಆಗಿರುವುದರಿಂದಲೇ *ಅವರ ಭಾಷೆಯು ಉದ್ದೇಶ ಪೂರ್ವಕವಾಗಿಯೇ ಗ್ರೀಕ್ ಪುರಾಣಗಳಿಂದ, ಐರೋಪ್ಯ ಕಥನಗಳಿಂದ ಪ್ರತಿಮೆಗಳನ್ನು ಆಯ್ದುಕೊಳ್ಳುತ್ತದೆ.* ಇದರಿಂದ ತನ್ನ ಕಾವ್ಯ ಕೆಲವರಿಗೆ ಕಗ್ಗಂಟಾಗುವುದೆಂಬ ವಿವೇಕವೂ ಅವರಲ್ಲಿದ್ದರೂ ಅದರಿಂದ ಹೊರಬರಲಾಗದ ಮನೋಧರ್ಮವಿಲ್ಲಿ ಎದ್ದು ಕಾಣುತ್ತದೆ.

"Its useful themes enrich'd tho' they be high

When it is young."[21] - ಈ ಮಾತುಗಳು ಮೇಲಿನ ವಿವರಣೆಗೆ ಪುಷ್ಟಿಯನ್ನು ಒದಗಿಸುತ್ತವೆ.

ಕುವೆಂಪು ಅವರ ಕಾವ್ಯ ಮಾದರಿಯು ಒಂದು ಬಗೆಯಲ್ಲಿ ಇಂಗ್ಲಿಷ್‌ನಿಂದ ತಂದ ಸಿದ್ಧಮಾದರಿಯಂತೆ ತೋರುವುದು ಅಸಹಜವಲ್ಲ. ಅವರ ನೆಚ್ಚಿನ ಭಾವ ಭಾಷೆಗಳೆರಡೂ ಇಂಗ್ಲಿಷ್ ನವೋದಯದ್ದು. ಅವರಿಗೆ ಅಡಿಗರನ್ನು ಕಾಡಿದ ಹಾಗೆ ಅನ್ಯರೊರೆದುದನೆ ಬರೆದುದನೆ ಬರೆಬರೆದು ಎಂಬ ಯೋಚನೆಗಳು ತಾಕಲಿಲ್ಲ. ಬೇರೆ ಕನ್ನಡ ಕವಿಗಳು ಅಂತು ರಂಗಪ್ರವೇಶವನ್ನು ಬಯಸಿದ್ದೂ ಇಲ್ಲ.

ಅವರು ಇಂಗ್ಲಿಷ್‌ನಲ್ಲಿ ಬರೆದ ಕಾವ್ಯ ಇಂಗ್ಲಿಷ್ ರಮ್ಯಕಾವ್ಯ ಹಾಗೂ Pre-Raphaelite ಕಾವ್ಯದ ವಿಚಿತ್ರ ಅನುಕರಣೆಗಳಾಗಿರುವುದನ್ನು ರಾಜೇಂದ್ರ ಚೆನ್ನಿ ಗಮನಿಸಿದ್ದಾರೆ. ಆದರೆ ಅವರ ನೆನಪಿನ ದೋಣಿಯಲ್ಲಿ ಕೃತಿಯನ್ನು ಓದುವಾಗ ಅಚ್ಚರಿಯೆನಿಸುವುದೇನೆಂದರೆ ಕುವೆಂಪು ಇಂಗ್ಲಿಷ್ ಸಾಹಿತ್ಯ ಹಾಗು 'ಸಂಸ್ಕೃತಿ'ಗಳ ಹಿಂದಿನ ರಾಜಕೀಯದ ಬಗ್ಗೆ ಮುಗ್ಧರಾಗಿರುವುದು – ಎಂಬ ಮಾತುಗಳು ಅನಗತ್ಯವಾಗಿ ಬಂದಂತೆ ಅನ್ನಿಸುತ್ತದೆ. ಕುವೆಂಪು ವಿಶ್ವರಾಜಕಾರಣದ ಬಗ್ಗೆ ಅವಜ್ಞೆ ಹೊಂದಿದ್ದವರಲ್ಲ. ಅವರ ಆಂಗ್ಲ ಕವಿತೆಗಳು ರಾಜಕಾರಣವನ್ನು ಜನಜೀವನವನ್ನು, ಮಾನವನ ಎಚ್ಚರವನ್ನು ಕುರಿತು ನೋಡಲೆಳಸುವ ಬಗೆ ಪ್ರಮುಖವಾಗಿ ಭಾವಪ್ರಧಾನವಾದದ್ದು.

ಈಗ ಅವರ ಮುಂದಿದ್ದ ವಸ್ತುವಿಗೆ ಮರಳೋಣ. ಕಾವ್ಯ ಜನರ ನಡುವೆ ಅರಳಬೇಕು. ಅವರ ಮನ ಸೂರೆಗೊಳ್ಳಬೇಕು. ಅವರಿಂದ ಬರುವ ಉತ್ತೇಜನವು ಮತ್ತಷ್ಟು ಹಾಡನ್ನು ಹಾಡಲು ಅನುವು ಮಾಡಿಕೊಡುತ್ತದೆ. ಆದ್ದರಿಂದಲೇ ಬಹುಜನರಿಗೆ ಅದರಲ್ಲೂ ಕೋವಿದರಿಗೆ, ಗೆಳೆಯರಿಗೆ ತನ್ನ ಕಾವ್ಯವನ್ನು ತಲುಪಿಸುವ ಇರಾದೆ ಈ ಯುವಕವಿಯಲ್ಲಿ ಕಂಡುಬರುತ್ತದೆ. ಇಲ್ಲಿ ಬರುವ ಪ್ರೇರಣೆಗೊಂಡು ಹಿರಿಯ ಚೇತನಗಳಿಂದ ಎಂಬ ಮಾತೂ ಗಮನಾರ್ಹವಾದದ್ದು.

"Ye friends and learned men
Courage his youthful lyre to sing again
With nobler notes and nobler themes, inspired"[22]

ಇಲ್ಲಿಂದ ಮುಂದೆ ಕವಿತೆ ಪಡೆದುಕೊಳ್ಳುವ ತಿರುವು ಕುತೂಹಲಕಾರಿಯಾಗಿದೆ. ಇಲ್ಲಿ ಕವಿ ನಿವೃತ್ತಿ ಸಾಧಿಸಿ ತನಗಿಂತ ಮುಂದಕ್ಕೆ ತನ್ನ ಕವಿತೆಯನ್ನು ಬಿಟ್ಟು ಅದರ ಬೆಂಬಲಕ್ಕೆ ನಿಂತಿದ್ದಾನೆ. ಅಲ್ಲದೆ ಕಾವ್ಯ ರಸಿಕರ ಮೇಲೆ ಜವಾಬ್ದಾರಿಯನ್ನು ಬಿಟ್ಟು ತಾನೆಂತಿರಬೇಕೆಂದು ಕವಿತೆಗೆ ಆದೇಶಿಸುತ್ತಾನೆ.

"But ah! my begging lyre,
Crave not, it is unworthy of thy sire."[23]

ಕವಿಯಲ್ಲಿ ಒಂದು ವಿಶ್ವಾಸವಿದೆ. ಏನು ಎಂತಿದ್ದರೆ ಎಂತಾಗುವುದೆಂಬ ನಂಬಿಕೆಯದು.

"If noble are their minds and grand thy theme,"[24]

ಎಂಬ ಮಾತುಗಳು ಸಮತೋಲನ ಭಾವ ಸಂಪನ್ನವಾಗಿವೆ, ಗುಣಪಕ್ಷಪಾತಿಯೂ ಆಗಿವೆ, ಅಪೇಕ್ಷಣೀಯವೂ ಆಗಿವೆ. ಆ ವಿಶ್ವಾಸದ ಫಲಶ್ರುತಿಯಂತಿವೆ ಈ ಸಾಲುಗಳು:

"Like rose attracts the bee at morning beam,
Thy noble tunes attract each noble heart
And makes it hard from thee to part."[25]

ಪೀಠಿಕೆಯ ಮಾತಿಗೆ ಮರಳುವುದೆಂದರೆ ಮೈಸೂರಿನ ವೆಸ್ಲಿಯನ್ ಮಿಷನ್ ಹೈಸ್ಕೂಲಿನ ಎಸ್.ಎಸ್.ಎಲ್.ಸಿ. ತರಗತಿಯ ವಿದ್ಯಾರ್ಥಿಯಾಗಿರುವಾಗಲೆ, ಅಂದರೆ ತಮ್ಮ ೧೮ನೇ ವಯಸ್ಸಿನಲ್ಲಿಯೆ ಕುವೆಂಪು ಈ ಸಂಕಲನವನ್ನು ಪ್ರಕಟಿಸಿದ್ದು. ಸಂಕಲನದ ಈ ಮೊದಲ ಕವಿತೆ ತನ್ನದಲ್ಲದ ಭಾಷೆಯಲ್ಲಿ ಕವನವನ್ನು ಬರೆಯಲಾಶಿಸುವ ಸೂಕ್ಷ್ಮ ಸಂವೇದನಾ ಶೀಲನಾದ ಕವಿಯೊಬ್ಬ ಎದುರಿಸುತ್ತಿರುವ ಎದುರಿಸಿಕೊಂಡು ಹೋಗಿ ನಿವಾರಿಸಿಕೊಳ್ಳಬೇಕಾದ ಬಿಕ್ಕಟ್ಟುಗಳನ್ನು ಪ್ರಕಟಿಸುತ್ತದೆ. ಕವಿತೆಯ ಮೊದಲ ಪಂಕ್ತಿಗಳು ಮೊಟ್ಟಮೊದಲು ರಂಗಪ್ರವೇಶ ಮಾಡಿದ ಸೂತ್ರಧಾರನ ಮಾತುಗಳಂತಿವೆ. ಈ ಕವಿತೆಯ ಹಾಡುಗಾರನ ಪ್ರತೀಕ, ಅದರ ಉಕ್ತಿ ಕ್ರಮ ಅಸ್ಖಲಿತವಾದ ಕಾವ್ಯಪ್ರತಿಭೆಯ ಸಹಜಾಭಿವ್ಯಕ್ತಿಗೆ ಸಾಕ್ಷಿಯಾದರೂ, ಈ ತರುಣ ಕವಿಗೆ ಗೊತ್ತಿತ್ತು ಹಾಡಲೆಳಸುವ ತಾನು ತನ್ನ ಕೈಯಲ್ಲಿ ಹಿಡಿದಿರುವುದು, ತನ್ನದಲ್ಲದ – ಪರಕೀಯವಾದ ಗೋಜಲಿನ, ಸಿಕ್ಕು

ಸಿಕ್ಕಾದ ತಂತೀವಾದ್ಯ ಎಂಬ ಸತ್ಯ. ಆದ್ದರಿಂದಲೇ ಈ ಅಜ್ಞಾತನೆಂದು ಹೇಳಿಕೊಳ್ಳುವ ಕವಿ ತಾನೇ ಕಂಡುಕೊಂಡ ತನ್ನ ಅಧೈರ್ಯವನ್ನು, ತನ್ನ ತಾನು ಸಮಾಧಾನ ಪಡಿಸಿಕೊಳ್ಳುವುದನ್ನು ಕುರಿತು ಮಾತನಾಡುತ್ತಾನೆ. ಹಾಗಾದರೆ ತನ್ನದೆ ಆದ ಅಭಿವ್ಯಕ್ತಿಯನ್ನು ಯಾಕೆ ಕಂಡುಕೊಳ್ಳಲಾಗದೆ, ಪರಕೀಯವಾದ ವಾದ್ಯವೊಂದನ್ನು ಹಿಡಿದು ನಿಲ್ಲುವಂತಾಯಿತು? ಪರಕೀಯ ತಂತೀವಾದ್ಯವನ್ನು ಹಿಡಿದು, ಆ ಕಿರಿಯ ವಯಸ್ಸಿಗೆ 'ಕವಿ' ಎಂದು ಹೆಸರು ಮಾಡಿದ ಪುಟ್ಟಪ್ಪನವರಿಗೆ, ತಾವು ಹಿಡಿದ ಅಭಿವ್ಯಕ್ತಿಯ ದಾರಿ, ನಿಜವಾಗಿಯೂ ತನ್ನದಲ್ಲದ್ದು ಮಾತ್ರವಲ್ಲ, ತನಗೆ ಸಲ್ಲದ್ದು ಕೂಡ ಎಂಬ ಸಂಗತಿಯನ್ನು ಖಚಿತಗೊಳಿಸಿದವರು, ಜೆ.ಎಚ್.ಕಸಿನ್ಸ್ ಅವರು.

ಕಸಿನ್ಸ್‌ರ ಮಾತಂತಿರಲಿ, ನಿಜಕ್ಕೂ ಪ್ರಿಲ್ಯೂಡ್ ಕವಿತೆ ಅಭಿಜಾತ ಕವಿಯೊಬ್ಬ ಮಾತ್ರವೇ ಬರೆಯಬಹುದಾಗಿದ್ದು. ಮೊದಲ ಹೆಜ್ಜೆಯಲ್ಲಿ ತನ್ನ ಮೌಲ್ಯಮಾಪನ ಮಾಡಿಕೊಂಡ, ಬಯಕೆಗಳನ್ನು ಹೇಳಿಕೊಂಡ, ಜನಮನಕ್ಕೆ ಸಂದೇಶವೊಂದನ್ನು ರವಾನಿಸಿದ ಕುವೆಂಪು ಅಥವಾ ಕೆ.ವಿ. ಪುಟ್ಟಪ್ಪ ಮುಂದೆ ರಸ ಋಷಿಯಾಗುವ ಕುರುಹುಗಳನ್ನಲ್ಲಿ ಸ್ಥಾಪಿಸಿದ್ದರು.

ಕುವೆಂಪು ನಿಸರ್ಗವನ್ನು ಪರಿಭಾವಿಸುವ ರೀತಿಯನ್ನು ಕುರಿತು ಅವರ ಕಾವ್ಯವನ್ನು ಕುರಿತು ಮಲೆನಾಡಿನ ಅಪ್ರತಿಷ್ಠಿತ ಸಾಮಾಜಿಕ ನೆಲೆಯಿಂದ ಹುಟ್ಟಿಬಂದ, ಆ ಮಲೆನಾಡಿನ ಪರ್ವತಾರುಣ್ಯ ಚೈತನ್ಯದ ಮೊದಲ ಪ್ರತಿನಿಧಿ ಎಂಬಂತೆ ತೋರುವದೆಂದು ಹೇಳಿರುವ ಮಾತುಗಳನ್ನು ಗಮನಿಸಬಹುದು. ನಿಸರ್ಗದ ಕಡೆಗಿನ ಅವರ ತುಡಿತಗಳು ಅಸಾಮಾನ್ಯವಾದವು. ಅಲ್ಲಿ ಕವಿಗಾಗುವ ದರ್ಶನವೇ ಬೇರೆ ಬಗೆಯದು. ಕನ್ನಡ ಕಾವ್ಯದಲ್ಲಿ ನಿಸರ್ಗದ ಒಡನಾಟದ, ಅಲ್ಲಿನ ಕಾಣ್ಕೆಯ ವರ್ಣನೆಗಳು ಭಿನ್ನ ಭಿನ್ನ ಬಗೆಯಲ್ಲಿ ಕಾಲದೇಶಾನುಸಾರಿಯಾಗಿ ಪ್ರಕಟಗೊಂಡಿವೆ. ಈ ಕಾವ್ಯೋದ್ಯಾನದಲ್ಲಿ ಕೋಗಿಲೆಗಳಂತಿರಲಿ ಮಲೆನಾಡಿನ ಬಗೆಬಗೆಯ ಹಕ್ಕಿಗಳಿಗೆ, ಪ್ರಾಣಿಗಳಿಗೆ, ಹೂ ಹಣ್ಣುಗಳಿಗೆ, ಮರ, ಗಿಡ ತೊರೆ ನದಿಗಳಿಗೆ ಅಪಾರ ಎಡೆಯಿದೆ. ಇವು ತಮ್ಮ ಬಾಹ್ಯ ರೂಪದಲ್ಲಿ ಕಾಣಿಸಿಕೊಳ್ಳುವುದಕ್ಕಿಂತ ಚೈತನ್ಯದ ಸಂಕೇತವಾಗಿ ಒಡಮೂಡುವುದೇ ಮುಖ್ಯವಾದ ಸಂಗತಿ.

ಕುವೆಂಪು ನಿಸರ್ಗ ಕುರಿತ ತಮ್ಮ ಕಾವ್ಯ ರಚನೆಯ ಮೊದಲಿಗೆ ಅಂಥ ಕನ್ನಡ ಕವಿತೆಗಳ ಕುರಿತು ಅಪನಂಬಿಕೆಯೊಂದನ್ನು ಪೋಷಿರುವುದು ನಮ್ಮ ಗಮನಕ್ಕೆ ಬಂದಿದೆಯಷ್ಟೆ. ಅವರು ಹೇಳುವುದಿದು:

ಕನ್ನಡ ಸಾಹಿತ್ಯವು ಪ್ರಕೃತಿಯನ್ನು ಅದರ ಸೌಂದರ್ಯಕ್ಕಾಗಿ ಮಾತ್ರ ಪುರಾಣ ಕಾವ್ಯಗಳ ಕೆಲವು ಪದ್ಯಗಳಲ್ಲಿ ವರ್ಣಿಸುತ್ತದೆಯೆ ಹೊರತು ಅದಕ್ಕಿಂತ ಮೇಲುಮಟ್ಟದ ಸ್ಥಾನವನ್ನು ಎಂದೂ ಕೊಟ್ಟಿಲ್ಲ. ನಿಸರ್ಗವನ್ನು ಇಂಗ್ಲಿಷ್ ಕವಿಗಳು ಉಪಯೋಗಿಸುವ ರೀತಿಯಲ್ಲಿ ಬಳಸಬೇಕೆಂಬುದೆ ನನ್ನ ಮಹಾದಾಶೆ.[೨೬]

ತಮ್ಮ ಕೋಗಿಲೆಗೊಂದು ಹಾಡಿನಲ್ಲಿ ಅವರೆನ್ನುತ್ತಾರೆ–

"Many a book of many a lore
May contain not thy soul."[27]

ಆದರೆ ಇಲ್ಲಿ ಕುವೆಂಪು ಅವರು ತಮ್ಮ ಸಮಕಾಲೀನ ಕನ್ನಡ ನವೋದಯದ ಕಾವ್ಯವನ್ನು ಕುರಿತು ಮಾತನಾಡುತ್ತಿದ್ದಾರೆ ಎಂಬುದು ಗಮನಾರ್ಹ. ಅಂಥದೇ ಇನ್ನೊಂದು ಹೊಳಹು ಎಂದರೆ ಎಲ್ಲಕ್ಕಿಂತ ಆಂಗ್ಲ ಕವಿಗಳ ವರ್ಣನೆಯ ವಿಧಾನವೇ ಶ್ರೇಷ್ಠ ಎಂಬ ನಂಬಿಕೆಯೊಂದು ಹಿನ್ನೆಲೆಯಲ್ಲಿ ಕೆಲಸ ಮಾಡುತ್ತಿರುವುದನ್ನು ಗಮನಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಅವಲೋಕನಾರ್ಹ ಕವಿತೆ ಎಂದರೆ ಅವರ ಕೋಗಿಲೆಯ ಹಾಡು ಕವಿತೆ. ಅದರ ಕನ್ನಡಾನುವಾದ ಇಂತಿದೆ:

"O Bird of Spring, demure, divine,
Descended from the heaven,
Upon this earth for e'er remain ;
Thou art to mortals given.

The winters turn to blithesome springs,
By those alluring notes;
And years shall glide upon thy wings,
And woe, with sorrow floats."[28]

ಇಡೀ ಕವಿತೆಯಲ್ಲಿ ಗಾಢ ವಿಷಾದವೊಂದಿದೆ. ಪ್ರಕೃತಿಯಾರಾಧನೆ ಎಂದರೆ ಬರಿಯ ನೋಟದಲ್ಲಿ ಸಂಭ್ರಮಿಸುವುದಲ್ಲ, ಬದುಕು ಬೇಸರಗೊಂಡಾಗ ನಿಸರ್ಗದಲ್ಲಿ ಶಾಂತಿಯನರಸುವುದು ಕವಿಯ ಜೀವ. ನಿಸರ್ಗವನ್ನು ಸಂತಸದಿಂದಿರಲು ಬಿಡುವುದು ಸಹ ಕವಿಗೆ ಮುಖ್ಯ.

"The wood-land hills, and flowery dales,
The dewy morning's show,
Without thy songs of mystic tales,
Begin to duller grow."[29]

ಅದರೆಲ್ಲ ರೂಪದಲ್ಲಿ ಬೇಸರಾಗಿದೆ ಮನಕೆ ಎನ್ನಿಸಿದಾಗಲೆಲ್ಲ ಅಂತಿಮವಾಗಿ ಮೊರೆ ಹೋಗುವುದು ನಿಸರ್ಗಕ್ಕೆ. ಬೇಸರವೆಂಬುದು ಕವಿಮನದ ಸ್ಥಾಯಿಭಾವ. ಕುವೆಂಪು ಅವರಿಗೆ ನಿಸರ್ಗವೆಂಬುದು ದಣಿವಿರದ ದೇಗುಲ. ಅವರಿಗದು ಎನಿಗ್ಮಾ ಎಂಬಂತೆ ಕಂಡಿದ್ದಲ್ಲ, ಬದಲಿಗೆ ಅದು ಸಾಂತ್ವನವೀಯುವ ಕರಗುವ ಹೃದಯ. ಕಾವ್ಯದಲ್ಲಿ ತನ್ನನ್ನೂ ಕೇಂದ್ರೀಕರಿಸುವ ಕುವೆಂಪು ಅವರಿಗೆ ಕವಿತೆಯಷ್ಟೇ ಮುಖ್ಯವಲ್ಲ, ಅಲ್ಲಿರುವ ತಾನೂ. ಏಕೆಂದರೆ ಅದೆಲ್ಲವನ್ನೂ ಮಾರಿಕೊಳ್ಳುವ ಮಾನವನೇ ಈ ಕವಿ.

"And when I tread with heavy heart,
Across the flowery dale,
My sorrows all from me depart,
My heart turns to thy tale."[30]

ಆದರೆ ಅವರಿಗೆ ಗೊತ್ತು, ಮಾನವನ ರಸಹೃದಯವಿಲ್ಲದಿರೆ ನಿಸರ್ಗದ ಸೌಂದರ್ಯವು ವ್ಯರ್ಥವೆಂದು. ಜೊತೆಗೆ ಅವರ ಹೃದಯ ಬಯಸುವುದು ನಿರಂತರ ನವೀಕರಣಗೊಳ್ಳುವ ಅನಿವಾರ್ಯತೆಯುಳ್ಳ ಪ್ರಕೃತಿ ಸದಾ ಅದರತ್ತ ಕಾರ್ಯ ಮಗ್ನವಾಗಿರಬೇಕೆಂಬುದು.

"Are naught without thee, Flowery – Queen!
Or Bard of Mystic Tales!"[31]

ಆ ಸಂತಸವೇ ನಾನೆಲ್ಲರಿಗೂ ಮಾರಿಕೊಂಬುವುದು – ಎಂಬ ಮಾತಿನಲ್ಲಿ ಎಲ್ಲ ಕವಿಗಳೂ ಆದ್ಯಂತಿಕವಾಗಿ ತಮ್ಮ ಸರಕನ್ನು ಬಿಕರಿಗಿಟ್ಟವರೇ ಆಗಿದ್ದಾರೆ ಎನ್ನುವುದನ್ನು ಕವಿ ಸಮರ್ಥಿಸುತ್ತಿದ್ದಾರೆ. ಆದರೆ ಕವಿ ಕವಿತೆಯ ಮೂಲಕ ಮಾರುವುದು ಸಂತಸವಾಗಬೇಕೆಂಬುದು ಕಡಿಮೆ ಮೌಲ್ಯದ ಆಶಯವೇನಲ್ಲ.

ಇಂಥ ಮನೋಭಾವವನ್ನು ಎಳವೆಯಲ್ಲೇ ರೂಢಿಸಿಕೊಂಡಿದ್ದ ಕವಿ ಮತ್ತು ಅವರ ನಿಸರ್ಗಧ್ಯಾನ, ನಿಸರ್ಗಾರಾಧನೆಗಳು ಎಂದೂ ಒಂದನ್ನೊಂದು ಅಗಲಲಿಲ್ಲ. ಮುಂದೆ ನೆನಪಿನ ದೋಣಿಯಲ್ಲಿ ಬರೆದ ಕೆಳಗಿನ ಸಾಲುಗಳನ್ನು ಓದಿದಾಗ ಹೇಗವರ ಮನಸ್ಸು ಪಕೃತಿಯನ್ನು ಒಂದು ಅನುಭಾವವಾಗಿ ಸ್ವೀಕರಿಸಿಬಿಟ್ಟಿತ್ತು ಎನ್ನುವುದನ್ನು ಸ್ಪಷ್ಟೀಕರಿಸುತ್ತದೆ.

"ಕೆಲವು ವರ್ಷಗಳ ಹಿಂದೆ ಶೃಂಗೇರಿಗೆ ಎತ್ತಿನಗಾಡಿಯಲ್ಲಿ ಹೋಗಿ ನನಗಿದ್ದ ಆಜನ್ಮ ಸಹಜ ಪ್ರಕೃತಿ ಪ್ರೇಮವು ಈಗ ವರ್ಡ್ಸ್‌ವರ್ತ್ ಮೊದಲಾದ ಪಾಶ್ಚಾತ್ಯ ಕವಿವರ್ಯರ ಕೃತಿ ಪರಿಚಯದಿಂದಲೂ ಉಪನಿಷತ್ತಿನ ಋಷಿಗಳಾದ ರವೀಂದ್ರರು, ವಿವೇಕಾನಂದರು ಮೊದಲಾದವರ ಪ್ರಾಚೀನ ಮತ್ತು ಅರ್ವಾಚೀನ ಕೃತಿಗಳ ಅಧ್ಯಯದಿಂದಲೂ ಸೌಂದರ್ಯಾನುಭೂತಿಯ ಮತ್ತು ಆಧ್ಯಾತ್ಮಿಕ ಪ್ರಜ್ಞೆಯ ದಾರ್ಶನಿಕ ಭೂಮಿಕೆಗೆ ಏರಿದ್ದುದರಿಂದ ಪ್ರಯಾಣದ ದಾರಿಯ ಅನುಭವವು ಅದರ ಗುರಿಯಿಂದ ಒದಗಬಹುದಾಗಿದ್ದ ಅನುಭವಕ್ಕೆ ಮೀರಿ, 'ಅನುಭಾವ'ವೆ ಅಗಿತ್ತು."[೩೨]

ಕುವೆಂಪು ಅವರ ಈ ಮಾತುಗಳನ್ನು ಗಮನಿಸಿದಾಗ, ಏಕಕಾಲಕ್ಕೆ ಎಲ್ಲವನ್ನೂ ಅವರು ಪ್ರದತ್ತವಾಗಿಸಿ–ಕೊಂಡಿದ್ದಲ್ಲವೆಂಬುದು ತಿಳಿದು ಬರುತ್ತದೆ. ಹಂತಹಂತವಾಗಿ ಅವರ ಅನುಭವ ವಿಸ್ತಾರಗೊಂಡಂತೆಲ್ಲಾ, ಭಾವ ಸ್ಪಂದನ ಶಕ್ತಿ ಸಶಕ್ತವಾಗುತ್ತಾ ಹೋಗಿರುವುದನ್ನು ಕಾಣುತ್ತೇವೆ. ತಮ್ಮೊಳಗೆ ಮಾತ್ರ ವಿಕಸಿಸುವಂತಹ ಪ್ರಕೃತಿ ಪ್ರೇಮಾನಂದವನ್ನು, ಆನಂದಕ್ಕೆ ಮಾರಿಕೊಂಬುವಂತೆ ಬಳಸಿಕೊಳ್ಳಬೇಕೆಂಬ ಅದಮ್ಯ ಉತ್ಸಾಹವನ್ನು ಕುವೆಂಪು ತೋರುವುದರಿಂದಲೇ ಅವರ ಕಾವ್ಯಯಾನದುದ್ದಕ್ಕೂ ಆ ಭಾವವನ್ನವರು ಕೈಬಿಡಲಿಲ್ಲ.

ನಿಸರ್ಗವನ್ನು ಇಂಗ್ಲೀಷ್ ಕವಿತೆಗಳು ಉಪಯೋಗಿಸುವ ರೀತಿಯಲ್ಲಿ ಬಳಸಬೇಕೆಂಬುದೆ ನನ್ನ ಮಹಾದಾಶೆ ಎಂದವರು ಹೇಳಿದ್ದನ್ನು ಹಿಂದೆ ಉಲ್ಲೇಖಿಸಲಾಗಿದೆ. ಅದವರ ಕಾವ್ಯದರ್ಶನವೂ ಆಯಿತು. ಅವರ ಈ ಮಹಾದರ್ಶಕ್ಕೆ ಇಂಬುಕೊಡುವಂತೆ, ಜನ್ಮಜಾತವಾಗಿದ್ದ ಪ್ರಕೃತಿ ಮೇಲಿನ ಮೋಹ, ಆರಾಧಕತನ, ವರ್ಡ್ಸ್‌ವರ್ಥ್, ಶೆಲ್ಲಿ, ಕೀಟ್ಸ್ ಮೊದಲಾದ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಓದಿನಿಂದ ಆದರ್ಶ ಮನೋಭಾವವೊಂದು ಅವರಲ್ಲಿ ಮೈಗೂಡಿಕೊಂಡಿತ್ತು. ಹಾಗಾಗಿ ಕೋಗಿಲೆ ಕವಿತೆ ಬರೆಯುವಾಗ ವರ್ಡ್ಸ್‌ವರ್ಥ್ ಅವರ ಹೃದಯದಲ್ಲಿದ್ದ. ಸಾದೃಶ್ಯಗಳಿಗಾಗಿ ನಾವವನ ಕವಿತೆಯನ್ನಿಲ್ಲಿ ನೋಡಬಹುದು–

To the Cuckoo

BY WILLIAM WORDSWORTH

O blithe New-comer! I have heard,
I hear thee and rejoice.
O Cuckoo! shall I call thee Bird,
Or but a wandering Voice?

While I am lying on the grass
Thy twofold shout I hear;
From hill to hill it seems to pass,
At once far off, and near.

Though babbling only to the Vale
Of sunshine and of flowers,
Thou bringest unto me a tale
Of visionary hours.

Thrice welcome, darling of the Spring!
Even yet thou art to me
No bird, but an invisible thing,
A voice, a mystery;

The same whom in my school-boy days
I listened to; that Cry
Which made me look a thousand ways
In bush, and tree, and sky.

ಕಿರಿಗಸ್ನದ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ,ಹಂಪಿ.

To seek thee did I often rove
Through woods and on the green;
And thou wert still a hope, a love;
Still longed for, never seen.

And I can listen to thee yet;
Can lie upon the plain
And listen, till I do beget
That golden time again.

141648

O blessèd Bird! the earth we pace
Again appears to be
An unsubstantial, faery place;
That is fit home for Thee![33]

'ಟು ದಿ ಕುಕೂ' ವರ್ಡ್ಸ್‌ವರ್ಥ್ ಕವಿಯ ಕಾವ್ಯ ಶೈಲಿಗೊಂದು ಒಳ್ಳೆಯ ಉದಾಹರಣೆ. ಈ ಕವಿತೆಯನ್ನು ಕೋಗಿಲೆಯನ್ನುದ್ದೇಶಿಸಿ ಹಾಡಲಾಗಿದೆ. ಕುವೆಂಪು ಅವರ ಕವಿತೆಯ ಕೇಂದ್ರದಲ್ಲಿ ಅವರೂ ಇದ್ದಾರೆ, ಕೋಗಿಲೆಯೂ ಇದೆ, ನಿಸರ್ಗದ ಮಹೋನ್ನತ್ವವೂ ಇದೆ. ಇವೆಲ್ಲದರ ಮೇಲೆ ಕವಿತೆ ಬೆಳೆಯುತ್ತದೆ. ಆದರೆ ವರ್ಡ್ಸ್‌ವರ್ಥ್ ಕವಿಯ **'ಟು ದಿ ಕುಕೂ'** ಜೀವ ಚೈತನ್ಯ ಪಡೆದ ಕವಿತೆ. ಅದು ನವನಿರ್ಮಾಣದ ಎಲ್ಲಕ್ಕಿಂತ ಸ್ವಾತಂತ್ರ್ಯದ ಬದುಕು ಮುಖ್ಯವೆಂಬ ನೆಲೆಯಿಂದ ಹೊರಡುತ್ತದೆ. ಇಲ್ಲಿ ಕೋಗಿಲೆಯಿಲ್ಲ ಅದರ ಮಧುರಸ್ವನವಿದೆ. ಅದು ಅಲೆಯುತ್ತಿರುವ ಧ್ವನಿ. ಹುಲ್ಲಿನ ಮೇಲೆ ಮಲಗಿದ ಕವಿಯ ಸುತ್ತ ಆ ಮಧುರ ಧ್ವನಿ ಅಲೆಯುತ್ತದೆ. ಈ ಕಲ್ಪನೆಯೇ ಬಹುಶಃ ಕುವೆಂಪು ಅವರನ್ನು ಕೊಂಚ ಅಧೀರಗೊಳಿಸಿತ್ತೆನ್ನಬಹುದು. ಕೋಗಿಲೆ ಒಂದು ವಿಸ್ಮಯ. ಅದರ ದನಿ ಗಿರಿ ಕಣಿವೆಗಳಲ್ಲಿ ಅಲೆದು ಕವಿಯನ್ನು ಅವನ ಬಾಲ್ಯಕ್ಕೆ ಕರೆದೊಯ್ಯುವ ನಾಸ್ಟಾಲ್ಜಿಯಾ. ಈ ಸಂತೋಷದ ಮೂಲವನ್ನು ಹುಡುಕುವುದು ಕವಿಯ ಆದ್ಯತೆಯಾಗುತ್ತದೆ ಎಂಬುದು ಕವಿತೆಯನ್ನು ಗಾಢವಾಗಿಸುತ್ತದೆ. ಇಲ್ಲಿನ ಕೋಗಿಲೆ is an arranged image of innocence, gaiety, purity and boyhood ಎಂಬ ಮಾತಿದೆ. ಏನೇ ತಿಳಿದರೂ ವರ್ಡ್ಸ್‌ವರ್ಥ್ ಕಾವ್ಯ ಮಾಂತ್ರಿಕತೆಯನ್ನು ತೊರೆಯುವುದಿಲ್ಲ. ಅದಕ್ಕೆ ಕಾರಣ ಅವನು ಅಶಾಶ್ವತ ಸಂಕೇತಗಳನ್ನು ಬಳಸುವುದಿಲ್ಲ. ಅವನಿಗೆ ಸೌಂದರ್ಯವೆಂಬುದು ಶಾಶ್ವತವಲ್ಲ. ಆದರದು ಮತ್ತೆ ಮರಳುವಂಥಾದ್ದು. ವಿಸ್ಮಯವಲ್ಲ. ಕೀಟ್ಸನ 'Ode to a nightingale' ಎಂಬ ಕವನವನ್ನೂ ಪರಿಶೀಲಿಸಬಹುದು. ಓಡ್ ಟು ನೈಟಿಂಗೇಲ್ ಕವಿತೆಯಲ್ಲಿ ಕೀಟ್ಸ್ ಕವಿಗೆ ನೈಟಿಂಗೇಲ್ ಹಕ್ಕಿ ಸಂತೋಷದ ಮಹದಾಸೆಗೆ ಪ್ರತಿನಿಧಿಯೆಂಬಂತೆ ಕಾಣುತ್ತದೆ. ಹಕ್ಕಿಯ ಸಂತಸದಿಂದ ಅವನಿಗೂ ಸಂತಸ ಒದಗಿದೆ. ಹೊಸ ವಸಂತದ ಹರಿಕಾರನಾಗಿ, ಹೊಸ ಬದುಕಿನ ಅವಕಾಶವಾಗಿ ಅವನಿಗೆ ಹಕ್ಕಿ ತೋರುತ್ತದೆ.

ಕುವೆಂಪು ಅವರ ಪ್ರಕೃತಿ ದರ್ಶನದ ತಾತ್ವಿಕ ಹಿನ್ನೆಲೆಗೆ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಪ್ರಕೃತಿ ದೃಷ್ಟಿಕೋನವು ಸೇರಿದಂತೆ ಭಾರತದ ನವೋದಯ ಸಂದರ್ಭದಲ್ಲಿ ಹುಟ್ಟಿಕೊಂಡಿದ್ದ ಆಧ್ಯಾತ್ಮಿಕ ತತ್ವಗಳು ಪೂರಕವಾಗಿವೆ. ಇದು ಅವರ ಪ್ರಕೃತಿ ಸಂಬಂಧಿತ ದೃಷ್ಟಿಕೋನವನ್ನು ವಿಸ್ತರಿಸುವಲ್ಲಿ ಸಹಾಯಕವಾಗಿತ್ತು. ಅವರಿಗೆ ಪ್ರಕೃತಿ ಎಂದರೆ ಸೌಂದರ್ಯದ ಪ್ರತೀಕವಷ್ಟೇ ಅಲ್ಲ, ಅದೊಂದು ದೈವೀ ಪರಿಕಲ್ಪನೆಯು ಆಗಿ ಪರಿಣಮಿಸಿತ್ತು. ಪ್ರಕೃತಿಯನ್ನು ದೈವೀಕರಿಸುವ ಈ ದೃಷ್ಟಿಕೋನ, ೧೯ನೆಯ ಶತಮಾನದ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ದೃಷ್ಟಿಕೋನಕ್ಕೆ ಹತ್ತಿರವಾದದ್ದು. ಇದರಲ್ಲಿ ಯಾವ ಅನುಮಾನವಿಲ್ಲ ಎಂದಿದ್ದಾರೆ ಡಿ.ಆರ್. ನಾಗರಾಜ್ ಇವರು ಗುರುತಿಸಿರುವಂತೆ ಈ ದೃಷ್ಟಿಕೋನ ನವೋದಯದ ಎಲ್ಲಾ ಪ್ರಾತಿನಿಧಿಕ ಕವಿಗಳಲ್ಲಿ ಕಂಡುಬರುತ್ತದಾದರೂ ಕುವೆಂಪು ಅವರಲ್ಲಿ ವಿಶೇಷವಾಗಿದೆ. ಈ ವಿಶೇಷ ಅನುಭವ ಅವರಿಗೆ ದಕ್ಕುವುದು ಶ್ರೀ ರಾಮಕೃಷ್ಣಾಶ್ರಮದ ಒಡನಾಟ, ವಿಭೂತಿ ಪುರುಷರ ಜೀವನ ಚರಿತ್ರೆಗಳ ಅಧ್ಯಯನದ ಫಲವಾಗಿ. ಅದನ್ನವರು ಸಂತೋಷಕ್ಕೆ ಹಂಚಿದರು. ಹೀಗೆ ಪ್ರಕೃತಿಯನ್ನು ಆಧ್ಯಾತ್ಮಿಕ ನೆಲೆಯಲ್ಲಿ ಪರಿಭಾವಿಸುವ ಕ್ರಮ ಕುವೆಂಪು ಅವರದ್ದಾಗಿದೆ.

ಕುಪ್ಪಳ್ಳಿ ಮನೆಯ ಉಪ್ಪರಿಗೆಯಲ್ಲಿ ಮಳೆ ಸುರಿಯುತ್ತಿದ್ದಾಗ ಬರೆದ ಕವನ 'ಕಾಜಾಣ'. ಕೋಗಿಲೆಯನ್ನು ಹೀಯಾಳಿಸಿ ಕಾಜಾಣವನ್ನು ಹೊಗಳಿರುವ ಕವನವಿದು. ೭.೧೨.೧೯೨೪ರಲ್ಲಿ ರಚಿಸಿದ್ದು. ಕೋಗಿಲೆಯನ್ನು ಖಂಡಿಸಿ ಬರೆದ ಕವನ ಮುಗಿಯುತ್ತಿದ್ದಂತೆಯೇ, ಕವಿಯನ್ನೇ ಬೆಚ್ಚು ಬೀಳಿಸುವಂತೆ ಮಾಡಿ, ಆ ಕಗ್ಗತ್ತಲ ರಾತ್ರಿಯಲ್ಲಿ, ಭೋರ್ಗರೆಯುವ ಮಳೆಯಲ್ಲಿ, ಹಗಲಲ್ಲೆ ಅಪರೂಪವಾಗಿದ್ದ ಕೋಗಿಲೆಯೊಂದು ಎರಡು ಬಾರಿ ಕೂಗಿ ಕೂಗುವುದನ್ನು ನಿಲ್ಲಿಸುತ್ತದೆ. ಕೋಗಿಲೆಯ ಮನದ ಇಂಗಿತವನ್ನು ಅರಿತವರಂತೆ ಕವಿ, ಕೂಡಲೆ ಕಾಜಾಣವನ್ನು ಹೊಗಳಿ ಬರೆಯುತ್ತಿರುವುದಕ್ಕೆ ಮತ್ಸರವೇಕೆ? ಕೋಗಿಲೆ ಅದು ನಿನಗೆ ತಕ್ಕುದ್ದಲ್ಲವೆಂದು, ಕವನ ಮಧ್ಯೆ ಬರೆದು ಮತ್ತೆ ಕಾಜಾಣದ ಪ್ರಶಂಸೆಯನ್ನು ಮುಂದುವರಿಸುತ್ತಾರೆ. ಇದು, ಎರಡು ಹಕ್ಕಿಗಳ ನಡುವೆ ವ್ಯತ್ಯಾಸವನ್ನು ಹೇಳುತ್ತ, ಕುವೆಂಪು ಅವರ ಒಲವಿನ ಹಕ್ಕಿಯನ್ನೇ ಕುರಿತು ಹಾಡಿದ ಕವನ.

"ಕೋಗಿಲೆಯಂದದಿ ಹೆರವರ ಮನೆಯಲಿ
ಹುಟ್ಟಿದ ತಬ್ಬಲಿ ನೀನಲ್ಲ!
ಕೋಗಿಲೆಯಂದದಿ ಹೊಲಸನು ತಿನ್ನುವ
ಕಾಗೆಗೆ ನೀ ಋಣಿಯಾಗಿಲ್ಲ!
ಶೂದ್ರನೆ ಹುಟ್ಟಿಸಿ, ಶೂದ್ರನೆ ಬೆಳೆಯಿಸಿ,
ಶೂದ್ರನು ಕೊಟ್ಟಾಹಾರವ ತಿಂದಿಹ
ಕೋಗಿಲೆಯಲ್ಲಿಯ ದ್ವಿಜತನವು?"[೩೪]

ಕುವೆಂಪು ಆಗ್ಗೇ ತಳೆದಿದ್ದ ಜಾತಿ ತಾರತಮ್ಯವನ್ನು ಕುರಿತ ವಿರೋಧೀ ದೃಷ್ಟಿಕೋನದ ಎಳೆಗಳು ಇಲ್ಲಿವೆ.

ಇಲ್ಲಿ ಇನ್ನೊಂದು ಕವಿತೆ `TO A BULBUL' ಎಂಬ ಕವನವು ಆ ಕಾಲದ ಕವಿ ಮನಸ್ಸಿಗೆ ಸಾಕ್ಷಿಯನ್ನೊದಗಿಸುತ್ತದೆ. `TO A BULBUL' ಈ ಕವನ ೭.೧೨.೧೯೨೪ರಲ್ಲಿ ರಚಿಸಿದ್ದು.

"Sweet poet of the forest,
So cheerful and bright,
Fairest spirit of heaven,
Angel upon earth,

Emblem of divinity,
Thy tunes like a chain
Of flowers sublime do sweetly link my heart with thine!
O Bird, to me thou art all
And OM is thy voice,
For thou art celestial
With celestial joys
And in thee I behold the Bring divine and rejoice!"[35]

ಭೂಮವಾದ ಚಿತ್ತ ತಪಸ್ಸಿನಿಂದ ತುಂಬಿ ತುಳುಕಿ ಮಿಡಿಯುತ್ತಿರುವ ಕವಿಚೇತನದ ಸಿಡಿಮದ್ದಿನ ರಾಶಿಯಂತಿರುವ ಪ್ರತಿಭೆಗೆ ಯಾವ ಅಲ್ಪ ವಸ್ತುವಾದರೂ ಒಂದು ಕಿಡಿಯಾಗಿ ಪ್ರಚಂಡ ಶಕ್ತಿ ಜ್ಯೋತಿಯ ಆಸ್ಫೋಟನೆಗೆ ನಿಮಿತ್ತವಾಗಬಹುದು. ಮೇಲ್ನೋಟಕ್ಕೆ TO A BULBUL ಕವನದ ಚಿಂತನಾಂಶ, ಭಾವಾಂಶ, ಕಲ್ಪನಾಂಶ, ರೂಪಾಂಶಗಳು ಅತ್ಯತಿ ಉತ್ಪ್ರೇಕ್ಷೆಯ ಅತಿಶಯೋಕ್ತಿಗಳಾಗಿ ತೋರಬಹುದಾದರೂ ತತ್ಸಾಮಯಿಕ ಕವಿಚೇತನದ ರಸಾಗ್ನಿ ಗರ್ಭ ಪ್ರವೇಶ ಮಾಡಲು ಸಮರ್ಥವಾದ ಸಹೃದಯ ಚಿದಾನುಭವಕ್ಕೆ ಸ್ವಭಾವೋಕ್ತಿಯಾಗಿಯೆ ಅನುಭವಗಮ್ಯವಾಗುವುದರಲ್ಲಿ ಸಂದೇಹವಿಲ್ಲ.

ಹೀಗೆ, ಪ್ರಕೃತಿಯ ವಿವಿಧ ನೆಲೆಗಳು ವಿಕಾಸ ಹೊಂದುತ್ತಿರುವ ಕವಿಚೇತನದಲ್ಲಿ ವಿಶಿಷ್ಟ ರೂಪವನ್ನು ಪಡೆದುಕೊಳ್ಳುತ್ತವೆ. ಅದು ಪ್ರಾಥಮಿಕ ನೆಲೆಯಾದ ಸೌಂದರ್ಯದ ಆಸ್ವಾದನೆಯಿಂದ ಹಿಡಿದು ರಾಜಕೀಯ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುತ್ತ ಆಧ್ಯಾತ್ಮದ ತುದಿಯನ್ನು ಒಳಗೊಂಡ ಅಸಾಮಾನ್ಯ ನಿಧಿಯಂತೆ ಕುವೆಂಪು ಅವರಲ್ಲಿ ಕಾಣಸಿಗುತ್ತದೆ.

O leave the poets' leaf or painters' flowers; for they can sing and picture well, but can they show? The Nature's charm? Or-heavenly fragrance give?

ತೊರೆದು ಹೋಗು ಕವಿಯ ಹಾಳೆಯನ್ನು, ಚಿತ್ರಕಾರನ ಹೂವನ್ನು–ಹಾಡಲು ಬಲ್ಲವು, ಚಿತ್ರವನು ಬಿಡಿಸಲೂ; ಬಲ್ಲವೇ ಶೋಭೆಯನು ಬಿಡಿಸಿ ತೋರುವುದನ್ನು, ಕೊಟ್ಟಾವೇ ಸ್ವರ್ಗೀಯ ಗಮವನ್ನು – ಎನ್ನುವ ಕವಿ ಹೇಳುತ್ತಿರುವುದೇನನ್ನು? ಕುವೆಂಪು ಅವರ **ಏಳೆಚ್ಚರಗೊಳ್ಳೆನ್ನ ನಿದ್ರಿಸುವ ಹೃದಯವೇ** ಎಂಬ ಕವಿತೆಯಲ್ಲಿ ಈ ಸಾಲುಗಳು ಬರುತ್ತವೆ. ತರುಣ ಕುವೆಂಪು ಅವರಲ್ಲಿ ನಿಸರ್ಗದ ಆನಂದ ಅಮೂರ್ತವಾದುದಲ್ಲ. ಅದು ಇಂದ್ರಿಯಗಮ್ಯ. ಆನಂದವನ್ನು ಅನುಭವಿಸುವ ಉನ್ಮತ್ತತೆ. ಪ್ರಕೃತಿಯಲ್ಲಿನ ಸೂಕ್ಷ್ಮ ಬದಲಾವಣೆಗಳನ್ನು ನೋಡುವ ಕಣ್ಣು, ಆನಂದಿಸುವ ಮನಸ್ಸಿನಿಂದಷ್ಟೇ ಅಲ್ಲ, ಪಂಚೇಂದ್ರಿಯಗಳ ಮೂಲಕವೂ ಮೊಗೆದು ಕುಡಿಯಲು ಕವಿ ಪ್ರಯತ್ನಿಸಿದ್ದಾರೆ. ನಿದರ್ಶನಕ್ಕೆ ಈ ಕವನಗಳನ್ನು ಗಮನಿಸಬಹುದು.

Awake My Slumbering Heart ಮತ್ತು We Walk the Verdant Earth with Blindfold Eyes ಈ ಎರಡು ಕವಿತೆಗಳು ಪ್ರಕೃತಿ ಪ್ರೇಮ ಮತ್ತು ಸೌಂದರ್ಯಗಳನ್ನು ಕುರಿತದ್ದಾಗಿವೆ.

"Awake my slumbering heart ! the breezy morn
Displays its glorious scenes : the rosy east,
Adorned by aurora, who nobly drest,
With bright-some Lucifer, smiles on the lorn

And misty land; the fragrant flowers adorn
The lonely dale and wave their dewy crest."[36]

ಮತ್ತು

"We walk the verdant earth with blind-fold eyes;
With deafen'd ears we hear. The scented rose
Perfumes the breeze, but not allures the nose!
The angels fair descend their heavenly skies,
To share the bliss of his creations nice,
Tho' share they not the sting of humans woes;"[37]

ಕುವೆಂಪು ನಿಸರ್ಗದ ಆನಂದ ಅಮೂರ್ತವಾದುದಲ್ಲ. ಅದು ಇಂದ್ರಿಯಗಮ್ಯ ಆನಂದವನ್ನು ಅನುಭವಿಸುವ ಉನ್ಮತ್ತತೆ ಎಂದು ಕಾಣಲಾಗಿದೆಯಷ್ಟೆ. ಇಂಥ ಪ್ರಕೃತಿ ಸೌಂದರ್ಯದ ಆಸ್ವಾದನೆಯಿಂದ ವಂಚಿತರಾಗುವುದನ್ನು ಕುರಿತು ರಚಿಸಿದ ಕವಿತೆಗಳಿವೆ. ಇಂಥದೇ ಕವನ 'ಸೊಬಗನಾಸ್ವಾದಿಸಲು ಸಮಯವೆಮಗಿಲ್ಲ' ೧೯೨೬ರಲ್ಲಿ ರಚಿತವಾದದ್ದು.

"ನಭನೀಲವನು ನೋಡಿ ಬೆರಗಾಪರಲ್ಲ!
ದಿನದಿನವು ಇನನುದಯವಾಗುವಂ, ಪೋಗುವಂ;

ದಿನದಿನವು ಹಿಮಕರಂ ಮೂಡುವಂ;
ದಿನದಿನವು ಮಾರುತಂ ಆಡುವಂ, ಓಡುವಂ
ಮನಮಾತ್ರ ಕೊರಗುತಿದೆ ಜಡವಾಗಿ, ಬಡವಾಗಿ!"[೩೮]

ತರುಣ ಕುವೆಂಪು ಅವರ ಮಾಗುತ್ತಿದ್ದ ಪ್ರತಿಭೆಯು ಪ್ರಕೃತಿ ಸೌಂದರ್ಯದ ಬಗೆಗೆಂತೊ, ಸೃಷ್ಟಿ ರಹಸ್ಯದ ಬಗೆಗೂ ಅಂತೆಯೇ ಗಹನವಾದ ವಿಚಾರಗಳ ಮಂಥನ ನಡೆಸುತ್ತಿತ್ತು. ಪ್ರಕೃತಿ ಬಗೆಗಿನ ಅಂತರ್ಮುಖಿ ಚಿಂತನೆ ಅವರಲ್ಲಿ ಉಂಟಾಗುತ್ತಿತ್ತು. ಪ್ರಕೃತಿಯನ್ನು ಪರಿಭಾವಿಸುವಲ್ಲಿ ಅವರ ಭಾವಸಂವೇದನೆ ವಿಭಿನ್ನ ಆಯಾಮವನ್ನು ಪಡೆಯುತ್ತಿತ್ತು. ಕುವೆಂಪು ವಿಭೂತಿಪುರುಷರ ಜೀವನಚರಿತ್ರೆಯನ್ನು ಓದಿದ ಬಳಿಕ ಹಾಗೂ ಶ್ರೀ ರಾಮಕೃಷ್ಣಾಶ್ರಮ ನಿವಾಸಿಯಾದ ಬಳಿಕ ಅವರ ನೋಟಗಳಲ್ಲಿ ಬದಲಾವಣೆಗಳಾದವು. ಆದರೂ ಪ್ರಕೃತಿ ಚಿಂತನೆ ಅವರನ್ನು ತೊರೆದು ಹೋಗಲಿಲ್ಲ. ಬದಲಿಗೆ ಅಲ್ಲಿನ ಸಣ್ಣ ಸಣ್ಣ ವಿಸ್ಮಯಗಳಿಗೆ ತೆರೆದುಕೊಳ್ಳುವ ಗುಣ ಬೆಳೆಯತೊಡಗಿತು. ದೈವ ಸಾನ್ನಿಧ್ಯವನ್ನು ಪ್ರಕೃತಿಯಲ್ಲಿ ಅವರು ಕಾಣತೊಡಗಿದರು. ಅದೆಂತು ಎಂಬುದನ್ನು ಅವರು ಹೀಗೆ ಹೇಳಿಕೊಂಡಿದ್ದಾರೆ.

"೧೯೨೧-೧೯೨೨ರಲ್ಲಿ ನಾನು ದಸರಾ, ಕ್ರಿಸ್‌ಮಸ್ ಮತ್ತು ಬೇಸಿಗೆ ರಜೆಗಳಲ್ಲಿ ತಪ್ಪದೆ ಮನೆಗೆ ಹೋಗಿ ಹುಟ್ಟೂರಿನ ಬದುಕನ್ನು ಸವಿಯುತ್ತಿದ್ದೆ. ಹಳ್ಳಿಗರ ಗ್ರಾಮೀಣವಾದರೂ ನನಗೆ ಅತ್ಯಂತ ಸ್ವಾರಸ್ಯಕರವಾಗಿದ್ದ ಜೀವನ ವ್ಯಾಪಾರಗಳಲ್ಲಿ ಭಾಗಿಯಾಗುತ್ತಿದ್ದೆ. ಆ ವ್ಯಾಪಾರಗಳಲ್ಲಿ ಭೇಟೆಯೇ ಅದರ ನಾನಾ ಪ್ರಕಾರಗಳಲ್ಲಿ ಪ್ರಮುಖ ಸ್ಥಾನ ಪಡೆದಿತ್ತು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದರೆ ನನ್ನ ಪ್ರಜ್ಞೆಯಲ್ಲಿ ಒಂದು ಪರಿವರ್ತನೆ ನಡೆದಿತ್ತು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದರೆ ನನ್ನ ಪ್ರಜ್ಞೆಯಲ್ಲಿ ಒಂದು ಪರಿವರ್ತನೆ ನೆಡೆದಿತ್ತು. ಹಿಂದೆ ಶಿಕಾರಿ ಅದರ ಸಾಹಸಾಂಶಕ್ಕಾಗಿ ಮೋಹಕವಾಗಿದ್ದರೆ ಈಗ ಪ್ರಕೃತಿ ಸೌಂದರ್ಯದ ಆಸ್ವಾದನೆಯ ಅಂಶವೂ ಸೇರಿ ಅದನ್ನು ಹೆಚ್ಚು ಪ್ರಿಯಕರವನ್ನಾಗಿ ಮಾಡಿತ್ತು. ಬುದ್ಧಿ ಹೆಚ್ಚು ಹೆಚ್ಚು ಚಿಂತನಾಶೀಲವಾಗಿ... ನಿಸರ್ಗ ವ್ಯಾಪಾರಚೇಷ್ಟಿತ ಭಗವತ್ಪರವಾದ ಭಾವನೆಗಳಿಗೆ ಪ್ರಚೋದಕವಾಗಿ ಅವೆಲ್ಲ ಯಾವುದೋ ದಿವ್ಯ ರಹಸ್ಯದ ಲೀಲಾವಸ್ತುಗಳಾಗಿ ತೋರತೊಡಗಿದ್ದವು. ಅವುಗಳ ಸೌಂದರ್ಯವನ್ನು ಸವಿಯುವುದರ ಜೊತೆಗೆ ಆ ಸವಿಯ ಧ್ಯಾನಶೀಲತೆ ಹೃದಯರಸನೆಗೆ ಪ್ರಾಪ್ತವಾಗಿತ್ತು."[೩೯]

ಹೀಗೆ ಅವರಲ್ಲಿ ಪ್ರತಿ ರಜೆಯ ಹಳ್ಳಿಯ ಭೇಟಿಯ ಸಮಯದಲ್ಲೂ ಪ್ರಕೃತಿಯ, ಸೃಷ್ಟಿ ರಹಸ್ಯದ ಬಗೆಗೆ ಆರಾಧನಾ ಭಾವ ಬೆಳೆಯತೊಡಗುತ್ತದೆ. ಅದು ಮೊದಲಿಗೆ ಪ್ರಕೃತಿ ಎಂದರೆ ಕೇವಲ ಸೌಂದರ್ಯಸ್ವಾದನೆಯಾಗಿದ್ದು, ಕ್ರಮೇಣ ಧ್ಯಾನಸ್ಥ ಸ್ಥಿತಿಯಲ್ಲಿ ಪ್ರಕೃತಿಯನ್ನು ಪರಿಭಾವಿಸುವ ಹಂತಕ್ಕೆ ಏರುತ್ತದೆ. ಇಲ್ಲೇ ಒಂದು ಬಗೆಯ ಅನುಭಾವವುಂಟಾಗುತ್ತದೆ. ನಿಸರ್ಗ ವ್ಯಾಪಾರಚೇಷ್ಟಿತ ಭಗವತ್ಪರವಾದ ಭಾವನೆಗಳಿಗೆ ಪ್ರಚೋದಕವಾಗಿ ಅವೆಲ್ಲ ಯಾವುದೋ ದಿವ್ಯ ರಹಸ್ಯದ ಲೀಲಾವಸ್ತುಗಳಾಗಿ ತೋರತೊಡಗಿದ್ದವು. ಅವುಗಳನ್ನು ಕೇವಲ ಬೌದ್ಧಿಕ, ಭಾವನಾತ್ಮಕವಾಗಲ್ಲ, ಆಧ್ಯಾತ್ಮಿಕವಾಗಿಯೂ ಪ್ರಕೃತಿಯ ಬೆಡಗನ್ನು ಹೆಚ್ಚು ಹೆಚ್ಚು ಗ್ರಹಿಸಲು ಅವರು ಯತ್ನಿಸಿದರು.

ಕುವೆಂಪು ತಾವು ವಿದ್ಯಾರ್ಥಿ ದೆಸೆಯಲ್ಲಿ ಬೇಸಿಗೆ ರಜೆ ಬಂದಾಗಲೆಲ್ಲ ಊರಿಗೆ ಹೋಗುತ್ತಿದ್ದುದುಂಟು ಎಂದು ಹೇಳಿಕೊಂಡಿದ್ದಾರಷ್ಟೆ. ಆ ಸಮಯದಲ್ಲಿ ತಾವು ಪ್ರಕೃತಿ ಆಸ್ವಾದನೆಯಲ್ಲೇ ಮೈಮರೆಯುತ್ತಿದ್ದರು ಎಂಬುದನ್ನೂ. ಅಂಥ ಸಂದರ್ಭದಲ್ಲಿ ರಚಿತಗೊಂಡ ಕವನ **ಹಳ್ಳಿಯ ಸಂಜೆ**. ೬.೬.೧೯೨೫ರಲ್ಲಿ ರಚಿಸಿದ್ದು. ನಿಸರ್ಗ ಸೌಂದರ್ಯವನ್ನು ಮನಸಾರೆ ಸವಿದು ಆನಂದವನ್ನು ಅನುಭವಿಸುತ್ತಿರುವ ಉನ್ಮತ್ತ ಕವಿ ಮನಸ್ಸಿನ ಚಿತ್ರಣ ಇದರಲ್ಲಿದೆ.

"ನಾನಾ ವರ್ಣವಿಲಾಸದಿ ನಲಿಯುವ
ಅಡವಿಯ ಅವಿರಳ ತಳನಿರೊಳು
ಮರ್ಮರ ನಾಡವ ಮಾಡುತ ನಲವಿಂ
ಮುಂಗಾರನಿಲ ಸುಳಿಯುವನು"[೪೦]

ಇಲ್ಲಿ ಬಲುವಾಗಿ ನಮ್ಮನ್ನು ಆಕರ್ಷಿಸುವುದು ಸೌಂದರ್ಯವ ಲಕ್ಷಿಪರಾರು? ಎಂಬ ಮಾತು. ಅದೊಂದು ಬಗೆಯಲ್ಲಿ ಮುಗಿದು ಹೋಗುವ ದಾಸ್ತಾನೆಂಬುವಷ್ಟು ಉಂಬುವ ಕಾತುರದ ಮನಸ್ಸು ತರುಣ ಕುವೆಂಪು ಅವರದು. ಇದು ಸಾವಧಾನದ ನೋಟವಲ್ಲ.

"ನಾನು ಸೊಬಗನು ಲಕ್ಷಿಸರೆಂಬುವ
ಕವಿತೆಯ ರಚಿಸುವೆ ಮನದೊಳಗೆ;"[೪೧]

ಎಂಬ ಮಾತುಗಳನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಬಹುದಾಗಿದೆ. ಪ್ರಕೃತಿಯಲ್ಲಿನ ಸೊಬಗನ್ನು ಕಾಣದೆ, ಅದರ ಸವಿಯಿಂದ ದೂರಾಗುತ್ತಿದ್ದಾರಲ್ಲ ಎಂದು ಇಲ್ಲಿನ ಸಾಲುಗಳು ಅಳಲುತ್ತವೆ. ೧೯೨೪ರಲ್ಲಿ ಕಾಲೇಜಿನಿಂದ ಕ್ರಿಸ್‌ಮಸ್ ರಜೆಗೆ ಊರಿಗೆ ಬಂದಾಗ ಬರೆದದ್ದು ಈ ಕವನ.

ಅವರ ಆರಂಭದ ಕವನಗಳು ಹೆಚ್ಚಾಗಿ ಪ್ರಕೃತಿ ಸೌಂದರ್ಯವನ್ನೇ ಕುರಿತಾಗಿದ್ದವು. ಅವುಗಳಿಗೆ ಆಧ್ಯಾತ್ಮಿಕತೆಯ ಅನುಭಾವವಿನ್ನೂ ದೊರೆತಿರಲಿಲ್ಲ. ಅವರ ಇಂಗ್ಲಿಷ್ ಕವಿತೆಗಳಲ್ಲಿನ ಪ್ರಕೃತಿ ವರ್ಣನೆ ಬೆರಗುಗೊಳಿಸುಂಥಹುದು, ಆಧ್ಯಾತ್ಮಿಕ ಬೆಡಗಿನದಲ್ಲ. ಉದಾಹರಣೆಗೆ ವಸಂತಾಗಮನದ ಸೊಬಗಿನ ಸೌಂದರ್ಯವನ್ನು ಸವಿಯಲು ಕರೆಕೊಡುವ, Song of the Spring Time ಎಂಬ ಈ ಕವನವನ್ನು ಗಮನಿಸಬಹುದು. ೩.೧೨.೧೯೨೩ರಲ್ಲಿ ರಚಿತಗೊಂಡ ಕವನವಿದು.

"Come away, children, come away,
The Spring-Time is awaiting us
With Champak flowers and jasmine bowers,
With fragrant breeze and vagrant bees,
Away from home where nymphs do roam,
And where the maidens gather flowers"[42]

ಮೇಲಿನ ಈ ಕವನವು ವಸಂತ ಋತುವಿನ ಸೌಂದರ್ಯಾಸ್ವಾದನೆಗೆ ಮೀಸಲಾಗಿದೆ, ಅದೇ ೬.೭.೧೯೨೬ರಲ್ಲಿ ರಚಿಸಿದ **ವಸಂತ ಕುಸುಮ** ಎಂಬ ಕವನ ಅವರು ಪ್ರಕೃತಿಯನ್ನು ಕಾಣುವ

ಬಗೆಯಲ್ಲಿ ಉಂಟಾಗಿದ್ದ ಸ್ವಯಂ ವಿಶಿಷ್ಟ ಬೆಳವಣಿಗೆಯನ್ನು ಸಾದರಪಡಿಸುತ್ತದೆ. ಇದರಲ್ಲಿ ಪ್ರಾಥಮಿಕ ಹಂತದ ಸೌಂದರ್ಯಾಸ್ವಾದನೆಯನ್ನು ಮೀರಿದ ತಾತ್ವಿಕ ದರ್ಶನದ ಹುಡುಕಾಟವಿದೆ. ಇದ್ದರೂ ಅದು ಅಚ್ಚರಿಯ ಭಾವವನ್ನು ಮೀರಲಾರದೆ ಬಳಲುತ್ತದೆ. ಇಲ್ಲಿನ ಬ್ರಹ್ಮ ಆಧ್ಯಾತ್ಮದ ಬ್ರಹ್ಮವಲ್ಲ, ಸೃಷ್ಟಿಯೊಳಗಿದ್ದ ಅಪಾರ ಶಕ್ತಿ.

"ಎಲೆ ವಸಂತ ಕುಸುಮವೆ,
ಆವ ಪರಮ ಜನನಿಯುದರದಿಂದ ನೀನು ಬಂದಿಹೆ?
ಇನಿತು ಕಾಲವಾವ ಹರುಷ ನಿನ್ನೊಳಿದು ಸಲಹಿತು?

ಕಾಲ ದೇಶಗಳನು ಮೀರಿ ನೀನು ನಲಿಯುವೆ!
ಕಾರ್ಯ ಕಾರಣಾತೀತನಾಗಿಹೆ!
ಬ್ರಹ್ಮರೆಲ್ಲ ನಿನ್ನೊಳಿಹರು ನೀನೆ ಪರಬ್ರಹ್ಮವು..."[೪೩]

ಪ್ರಕೃತಿಯ ಸಾನ್ನಿಧ್ಯ ವಿದ್ಯಾರ್ಥಿ ಕವಿಗೆ ಎಂಥ ಅನುಭವ ಕೊಡುತ್ತಿತ್ತು ಎಂಬುದನ್ನು ಇಲ್ಲಿ ಕಾಣಬಹುದು. ಪ್ರಕೃತಿಯ ರಮಣೀಯತೆ, ಅದರ ಜೊತೆ ಕಳೆವ ರಮ್ಯ ಕ್ಷಣವನ್ನು ಅದು ನೀಡುವ ಸಹಜ ಶಿಕ್ಷಣವನ್ನು, ತೆರೆವ ವಿಚಾರದ ಲೋಕವನ್ನು ಶುಷ್ಕ ಕಾಲೇಜು ತರಗತಿಯ ಪಾಠ ಪ್ರವಚನದೊಂದಿಗೆ ಹೋಲಿಸುತ್ತಾ ಅವರು ನುಡಿಯುವುದು.

"Calm and swift this crystal stream
Glides thro' the stilly woods !
Woodland of a happy dream
Where flow the dreamy floods !

Chequered by shade it glides along
Murmuring songs of Earth ;
It dances, leaps and smiles among
The verdant strands of mirth !"[44] ಎಂದು.

ಲೌಕಿಕ ಸೌಂದರ್ಯವನ್ನು ಸವಿಯಬಲ್ಲ ಚೇತನ, ಅಲೌಕಿಕ ರಸಾನುಭವವನ್ನು ಹೊಂದುತಿತ್ತು ಎಂಬುದರ ಸೂಚನೆ Written On An August Evening ಎಂಬ ಈ ಇಂಗ್ಲಿಷ್ ಸಾನೆಟ್ನಲ್ಲಿದೆ. ೧೯.೮.೧೯೨೩ಲ್ಲಿ ರಚಿಸಿದ ಕವನವಿದು.

"Sweet lulling murmurs fill the silent air
And the lone cuckoo's solitary voice
Elates the pensive mind with thrilling joys,
While wearied work men to their sheds repair.

The toil-worn bosoms scenes of splendor share,
And the high thoughtful minds this scene rejoice,
For thoughts that lie too deep to worldly choice
Inspire their souls to leave the world of care."[45]

ಸಂಜೆಯ ಈ ರಸಾನುಭವವೇ ನಂತರದ ದಿನಗಳಲ್ಲಿ ರಚಿಸಿದ ಅನೇಕ ಕವನಗಳಲ್ಲೂ ವ್ಯಕ್ತವಾಗುತ್ತದೆ. ೧೭.೫.೧೯೩೩ರಲ್ಲಿ ರಚಿಸಿದ ಕವನ **ಕವಿಶೈಲದಲ್ಲಿ ಸಂಧ್ಯೆ.**

"ದೃಷ್ಟಿದಿಗಂತದ ಮೇರೆಯ ದಾಟಿ
ಗಗನನದ ಮೇಘ ವಿತಾನವ ಮೀಟಿ
ದೂರಕೆ ದೂರಕೆ ಸುದೂರ ದೂರಕೆ
ಹಬ್ಬಿದ ಪರ್ವತ ದಿಗಂತ ಶೈಲಿ, ಮೈಲಿ, ಮೈಲೀ"[೪೬]

ಹಾಗೂ ೨೨.೧೧.೧೯೪೧ರಲ್ಲಿ ರಚಿಸಿದ ಕವನ **ಸಂಧ್ಯಾ ಯಕ್ಷಿಣಿ.**

"ಸಂಧ್ಯಾಶಿಲ್ಪಿಯ ಸುವರ್ಣಯಕ್ಷಿಣಿ
ಮೇಘ ಲೋಕಕೆ ಓಕುಳಿಯೆರಚಿದ
ವಿಧವಿಧರೂಪದ ವಿಧವಿಧ ವರ್ಣದ
ಚಿತ್ರ ರಥೋತ್ಸವಕೆ,
ಭಾವ ಸಮಾಧಿಯಿನಂಕಿಸ್ಸಾರನ್
ಧ್ಯಾನ ಪ್ರಲಯಿತ ಕವಿ ತಾನಾದನ್
ಬೈಗಿನ ಬಾನ್!"[೪೭]

ಮುಂದೆ, ೧೯೪೬ರಲ್ಲಿ ರಚಿಸಿದ ವಚನ ಕವನಗಳಲ್ಲಿ ಇದೇ ಅನುಭವವನ್ನು ಹಂಚಿಕೊಳ್ಳುತ್ತಾರೆ. 'ಸಂಜೆಯ ದಿಬ್ಬಣ,' 'ಸಂಧ್ಯಾ ಚಿಂತನೆ,' 'ಬೈಗು' ಮುಂತಾದ ಕವನಗಳು ಇದಕ್ಕೆ ಸಾಕ್ಷಿಯಾಗಿದೆ. ನಂತರದಲ್ಲಿ, ವಯೋಸಹಜದ ರಸಿಕ ಭಾವ ಸಂಜೆಯನ್ನು ಅನುಭವಿಸುವಲ್ಲಿದೆ. ಕವಿಗೆ 'ಈ ಸುಂದರ ಸಂಜೆ ಬರಿ ಬಂಜೆ'ಯಾಗಿ ಕಾಣುತ್ತದೆ. ವಿರಹತಪ್ತ ಕವಿಗೆ ಪ್ರಕೃತಿ ಚೆಲುವೇ ನೀರಸವಾಗಿರುತ್ತದೆ.

ಕುವೆಂಪು ಅವರಿಗೆ ಪ್ರಕೃತಿ ಸೌಂದರ್ಯದ ಆಸ್ವಾದನೆ ಎನ್ನುವುದು ಪ್ರಮುಖ ಹಾಗೂ ಪ್ರಾಥಮಿಕ ಹಂತದ್ದು ಎಂಬುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಆದರೆ ಇದು ಇಷ್ಟಕ್ಕೇ ನಿಲ್ಲದೆ, ವಿವಿಧ ಆಯಾಮಗಳನ್ನು, ದೃಷ್ಟಿಕೋನಗಳನ್ನು ಪಡೆದುಕೊಳ್ಳುತ್ತದೆ. ಅದರಲ್ಲಿ ಪ್ರಮುಖವಾದುದನ್ನು 'ಸಾಂಸ್ಥಿಕ ಧರ್ಮದ' ನಿರಾಕರಣೆ ಎಂದು ಕರೆಯುತ್ತಾರೆ.

ಉನ್ಮತ್ತತೆ ಮತ್ತು ತನ್ಮಯತೆಗಳ ನಡುವೆ ಸಂಮೃದ್ಧವಾಗಿ ಬೆಳೆಯುವ ನಿಸರ್ಗಾನುಭವದ ಅಂತಿಮ ಗುರಿ ಸಾಂಸ್ಥಿಕ ಧರ್ಮದ ನಿರಾಕರಣೆ. ಈ ಸಾಂಸ್ಥಿಕ ಧರ್ಮದ ನಿರಾಕರಣೆ

ಕುವೆಂಪು ಅವರ ಅತ್ಯಂತ ಮುಖ್ಯ ವೈಚಾರಿಕ ನಿಲುವುಗಳಲ್ಲಿ ಒಂದು. ನಿಸರ್ಗಾನುಭವ ಎಂದೂ ಸಾಂಸ್ಥಿಕ ಧರ್ಮದ ಶ್ರೇಣೀಕರಣಗಳಿಗೆ, ಗುಡಿಗೆ, ಮಠಕ್ಕೆ, ನಿತ್ಯಾಚಾರದ ನೀರಸ ಪ್ರಕ್ರಿಯೆಗಳಿಗೆ ಬೆಲೆ ಕೊಡುವುದಿಲ್ಲ. ಎಲ್ಲಾ ಅನುಭವವೂ ಅಂತಿಮವಾಗಿ ಸಾಂಸ್ಥಿಕ ಧರ್ಮದ ವಿರೋಧಿಯಾಗಿರುವುದರಿಂದ, ಕುವೆಂಪು ನಿಸರ್ಗಾನುಭವದ ಒಂದು ಮುಖ್ಯ ತಾತ್ವಿಕ ಬೆಳವಣಿಗೆಯಾಗಿ ಮೂಡುವ ಮತ ವಿರೋಧಿ ನಿಲುವು ಕೂಡ ಸಹಜ ವೈಚಾರಿಕ ಬೆಳವಣಿಗೆಯಾಗುತ್ತದೆ.[೪೮] ಎನ್ನುವ ಡಿ.ಆರ್.ನಾಗರಾಜ್ ಅವರ ಮಾತಿಗೆ ಪೂರಕವಾಗಿದೆ.

ಈ ಮುಂದಿನ ಕವನ. ೨೩.೩.೧೯೩೪ರಲ್ಲಿ ರಚಿಸಿದ್ದು, **ಪ್ರಕೃತಿ ಉಪಾಸನೆ.**

"ಬೆಟ್ಟದುದಿಯಲಿ ಗುಡಿಯ ಗೋಪುರಂ ನಿಂತಂತೆ
ನಿಂತೆ ನಾಂ ನೀರ್ಮನೆಯ ದಿಬ್ಬಣದಲಿ, ದೃಷ್ಟಿಯಿಂ
ಸೃಷ್ಟಿಯಿಂ ತಬ್ಬಿ, ಮೇನಾತ್ಮಭಾವದಿ ಹಬ್ಬಿ
ಭೂವ್ಯೋಮಮೆಲ್ಲಮಂ, ತಂಗಾಳಿ ಚಳಿಯಾಗಿ
ಬೀಸಿದುದು, ತೇಲಿದುವು ವಾಯುಮಂಡಲದಲ್ಲಿ
ವಿವಿಧ ಪಕ್ಷಿಗಳುಲಿಗಳಿಂಪಾಗಿ...
.....ಯಾವ ಗುಡಿ
ಮಿಗಿಲು ಈ ಭುವನ ದೇವಾಲಯಕೆ? ಮೇಣಾವ
ವಿಗ್ರಹಂ ಮೀರಿರುವುದೀ ಚೈತ್ರ ಪಂಚಮಿಯ."[೪೯]

ಪ್ರಕೃತಿಯ ಸೊಬಗಿನ ಸವಿಯೊಂದಿಗೆ, ಒಪ್ಪಿತವಾದ ಸಾಂಸ್ಥಿಕ ಮೌಲ್ಯಗಳನ್ನು ನಿರಾಕರಿಸುವ ಕವಿಚೇತನವನ್ನು ಈ ಮೇಲಿನ ಕವನದಲ್ಲಿ ಕಂಡರೆ,

"ದೇವರು ರುಜು ಮಾಡಿದನು;
ರಸವಶನಾಗುವ ಕವಿ ಅದ ನೋಡಿದನು!"[೫೦]

ಎಂದು ಬೆಳ್ಳಕ್ಕಿಯ ಹಂತಿಯನ್ನೆ ದೇವರ ರುಜುವೆಂದು, ಸೌಂದರ್ಯದಲ್ಲಿ ದೈವೀರೂಪವನ್ನು ಕಾಣುವ ಪರಿಯಿದು. ಮತ್ತೊಮ್ಮೆ ಕುವೆಂಪು ತಮ್ಮದೇ ನೆಲೆಯನ್ನು ದೇವರನ್ನು ದರ್ಶಿಸುವ ಮೂಲಕ ಎಲ್ಲಾ ಸಾಂಸ್ಥಿಕ ಮತ್ತು ಆಸ್ತಿಕ ಧರ್ಮವನ್ನು ನಿರಾಕರಿಸುವುದು ವ್ಯಕ್ತವಾಗುತ್ತದೆ. ಅಷ್ಟೆ ಅಲ್ಲ ಅವರಿಗೆ ಸೂರ್ಯೋದಯ, ಚಂದ್ರೋದಯ ಅನ್ನುವುದು ಪ್ರಕೃತಿ ವ್ಯಾಪಾರವಲ್ಲ, ಅದು ದೇವರ ದಯೆ.

ಅಂಥ ಸಮಯದ ರಸಾನುಭವ ಮಾತಿಗೂ ನಿಲುಕದ್ದು. ಪ್ರಕೃತಿಯು ಆಧ್ಯಾತ್ಮ ಸಾಧನೆಯ ಸಾಧನವಾಗುತ್ತಿರುವಾದಂತೆಯೆ, ಅದರ ದಿವ್ಯ ತತ್ವವನ್ನು ಕುರಿತು ಆಲೋಚಿಸಲು ಪ್ರಯತ್ನಿಸುವರು. ಪ್ರಕೃತಿಯ ಬಾಹ್ಯ ಸೌಂದರ್ಯ ಹೊರಗಣ್ಣಿಗೆ ಗೋಚರವಾದಂತೆ ಆತ್ಮಕ್ಕೆ ಆಧ್ಯಾತ್ಮ ಅನುಭವವಾಗುತ್ತದೆ. ಇದನ್ನು ಅವರ ಮಾತುಗಳಲ್ಲೆ ಕೇಳಬೇಕು.

...ಹಿಂದಿನ ದಿನದ ಮಳೆಯಿಂದ ಕಾಡುಮಲೆ ನೆಲಗಳು ಮಿಂದು ಮಡಿಯಾಗಿದ್ದವು. ಇಂದು ಬೆಳಿಗ್ಗೆ ನಮಗೆ ದೊರಕಿದ ದೃಶ್ಯವು, ನಮ್ಮ ಪುಣ್ಯಕ್ಕೆ ಎಣೆಯಿಲ್ಲದಂಥದು. ಕಣಿವೆಗಳನ್ನು ತುಂಬಿದ್ದ ಮಂಜಿನ ಪರದೆಯು ಮೇಲೇಳತೊಡಗಿ, ಸಲಸಲಕ್ಕೂ ಎದೆಹಾರಿಸುವಂತಹ ದೃಶ್ಯಗಳು ಗೋಚರಿಸಿದವು. ಇಂದು ನನ್ನ ಜೀವನದಲ್ಲಿ ಮತ್ತೊಂದು ಮಹಾದಿನವಾಯ್ತು. ಪ್ರಕೃತಿ ಕೃಪೆಯಿಂದ, ಕಣ್ಣು ನೀರು ತುಂಬಿ ಕಂಠವು ಗದ್ಗದವಾಗಿ ಚೆನ್ನಾಗಿ ಅಳುತ್ತಾ ಕುಣಿದಾಡ ಬೇಕೆನಿಸಿತು.[೫೧]

ಇದು ಅವರು ಪ್ರಕೃತಿಯನ್ನು ಅತಿಯಾಗಿ ಒಳಗು ಮಾಡಿಕೊಂಡ ತೀವ್ರವಾದ ಭಾವಸಂವೇದನೆಯನ್ನು ಸೂಚಿಸುತ್ತದೆ. ಬಯಲುಸೀಮೆ ಸ್ನೇಹಿತರು ಕುಪ್ಪಳಿಗೆ ಬಂದರೆ, ಅವರನ್ನು ತಪ್ಪದೆ 'ನವಿಲುಕಲ್ಲು ಗುಡ್ಡ', 'ಕವಿಶೈಲದ ಸೂರ್ಯೋದಯ ಸೂರ್ಯಾಸ್ತವನ್ನು' ತೋರಿಸಿ ಅವರೊಂದಿಗೆ ತಾವೂ ಆನಂದಪಡುವುದರಲ್ಲಿ ಇನ್ನೆಲ್ಲಿಲ್ಲದ ಉತ್ಸಾಹ. ಅಲ್ಲಿಗೆ ಹೋಗುವ ಮುಂಜಾನೆ ಹೀಗಿತ್ತು–

ಬೆಳಗ್ಗೆ ೫ ಗಂಟೆಗೆ ಮೊದಲೆ ಎಲ್ಲರನ್ನು ಎಬ್ಬಿಸಿ...'ನವಿಲುಕಲ್ಲು' ಗುಡ್ಡದ ಬುಡದವರೆಗೆ ಕರೆದೊಯ್ದವು. ಅಂದು ಉಷಃಕಾಲದಿಂದ ಹಿಡಿದು ಸೂರ್ಯೋದಯದವರೆಗೂ ನಾವು ಕಂಡ ದೃಶ್ಯ ಪರಂಪರೆಯ ಅದ್ಭುತ ಸೌಂದರ್ಯಾನುಭೂತಿಯನ್ನು ಇಲ್ಲಿ ನಾನು ವರ್ಣಿಸುವುದಿಲ್ಲ ನನ್ನ ಗದ್ಯ ಪದ್ಯಗಳ ಸೃಜನ ಸಾಹಿತ್ಯದಲ್ಲಿ ಆ ಅನುಭವ ನಾನಾಸ್ತರಗಳಲ್ಲಿ ವರ್ಣಿತವಾಗಿದೆ.... ಪಂಕ್ತಿಯ ಹಿಂದೆ ಪಂಕ್ತಿಯಂತೆ ಮೇಲು ಮೇಲಕ್ಕೆದ್ದು ಪೂರ್ವದಿಗಂತದಲ್ಲಿ ವಿಶ್ರಾಂತವಾಗಿದ್ದ ಪರ್ವತಶ್ರೇಣಿಗಳತ್ತ ಬಿಡುಗಣ್ಣಾಗಿ ಮಾತಿಲ್ಲದೆ ಸುಮಾರು ಒಂದು ಒಂದೂವರೆ ಗಂಟೆಯವರಗೂ ನಿಷ್ಪಂದರೆಂಬಂತೆ ಎಚ್ಚೆತ್ತು ನಿಟ್ಟುಸಿರು ಬಿಡುತ್ತಿದ್ದಂತೆ, ಧ್ಯಾಲೀನ ಸ್ನಿಗ್ಧ ಮಂದಸ್ಮಿತರಾಗಿದ್ದ ಪ್ರೊ. ವೆಂಕಣ್ಣಯ್ಯನವರು... "ಪುಟ್ಟಪ್ಪ, ಇದನ್ನು ಹಿಡಿದಿಟ್ಟುಕೊ!" ಎಂದು ಮತ್ತೆ ಆ ದಿವ್ಯ ದೃಶ್ಯದತ್ತ ಕಣ್ಣಾಗಿ ಮುಂದೆ ಮಾತನಾಡಲಾರದವರಂತೆ ಮೌನಿಯಾದರು.[೫೨]

ಕುವೆಂಪು ಅವರು ಭೌತಿಕ ಪ್ರಪಂಚದ ವ್ಯಾಪಾರವನ್ನು ಮೀರಿ ಪ್ರಕೃತಿಯನ್ನು ಸವಿಯುತ್ತಾರೆ. ನಿಸರ್ಗದೊಂದಿಗಿನ ತಾದ್ಯಾತ್ಮ್ಯವನ್ನು ಅನುಭವಿಸಬೇಕಾದರೆ ಬಾಹ್ಯ ಪ್ರಪಂಚವನ್ನು ಮರೆಯಬೇಕು. ಹಾಗಾಗಿ ಕುವೆಂಪು ಪೂರ್ಣ ಪ್ರಮಾಣದಲ್ಲಿ ಪಡೆದುಕೊಂಡ ಆನಂದವನ್ನು ಕಾವ್ಯವಾಗಿಸುತ್ತಾರೆ. ಈ ಮಾತು ಅವರ ಎಲ್ಲಾ ಪ್ರಕೃತಿ ಗೀತೆಗಳಿಗೂ ಅನ್ವಯಿಸುವುದಿಲ್ಲ. ಬಹುತೇಕ ಗೀತೆಗಳು ಆನಂದದ ನೆಲೆಯಲ್ಲೆ ಪರ್ಯಾವಸಾನಗೊಂಡರೂ ಅದರ ಆಚೆಗಿನ ವಸ್ತು ಸಂಗತಿಗಳಿಗೂ ಅಲ್ಲಿ ಜಾಗವಿದೆ. ಅರುಣೋದಯ ಸೂರ್ಯೋದಯಗಳ ಸಮಯದಲ್ಲಿ ಮೂಡುತ್ತಿದ್ದ ಶಾಂತಿರಸವನ್ನು ವರ್ಣಿಸುವ ಕವನ 'The May Dawn'. ೧೩.೭.೧೯೨೫ರಲ್ಲಿ ರಚಿಸಿದ್ದು.

"The dawn was clear and sheen !
Cool breezes lisped among the silent trees ;
The very stillness chanted "Om Peace, Peace !"

And the blue heaven was serene.
Nor speck nor fleecy cloud
The rosy dawn did shroud ;
Flower, tree, brush and bower, and grassy height
Were gaily trimm'd with pearl-like dew-drops bright.
The splendid dawn was sheen !"[53]

ಇಂಥ ಅನುಭವವನ್ನೇ ವ್ಯಕ್ತಪಡಿಸುವ ಮತ್ತೊಂದು ಕನ್ನಡ ಕವನ 'ಸೂರ್ಯೋದಯ' ೧೯೨೫ರಲ್ಲಿ ರಚಿಸಿದ್ದು.

"ತಿಮಿರ ಬೆದರಿತು; ಮಬ್ಬು ಮಸುಳಿತು;
ಮಂಜು ಮೇಲಿಂದಿಳಿದು ಕವಿಯಿತು,
ಧರೆಯು ವಿಶ್ವವ ಕಂಡು ಕಾಣದ ಮಾಯೆಯಂತಾಯ್ತು"[೫೪]

ಈ ಸನ್ನಿವೇಶಗಳ ರಸಾನುಭವವನ್ನೆ ಮುಂದಿನ ಅನೇಕ ಸೂರ್ಯೋದಯ, ಅರುಣೋದಯಗಳ ಕವನಗಳಲ್ಲಿ ಕಾಣುತ್ತೇವೆ. ಶರತ್ಕಾಲದ ಸೂರ್ಯೋದಯದಲ್ಲಿ; (೨.೧೧.೧೯೩೩), ಭಾದ್ರಪದದ ಸುಪ್ರಭಾತ (೧೨.೯.೧೯೩೮), 'ಇಂತಹ ಸುಂದರ ಪ್ರಾತಃಕಾಲದಿ' (೮.೯.೧೯೩೪), ಬಾ, ಫಾಲ್ಗುಣ ರವಿದರ್ಶನಕೆ (೪.೩.೧೯೩೭), ಇಂದ್ರ ದಿಗಂತದಿ (೧೪.೧೦.೧೯೩೫), ನವಿಲುಕಲ್ಲಿನಲ್ಲಿ ಸೂರ್ಯೋದಯ (೨೫.೫.೧೯೨೫)... ಈ ಕವನಗಳಲ್ಲಿ ಎಲ್ಲೂ ರಸ ಮುಕ್ಕಾಗದ, ಅಷ್ಟೇ ಭಾವೋದ್ವೇಗದಿಂದ ಸವಿಯುವ ಕವಿ ಮನಸ್ಸನ್ನು ಕಾಣಬಹುದು.

ಬೇಲೂರು ಮಠದಲ್ಲಿ ದೀಕ್ಷೆ ಪಡೆದುಕೊಂಡ ನಂತರ ಕವಿ ಚೇತನಕ್ಕೆ ಪ್ರಕೃತಿ ಸೌಂದರ್ಯವನ್ನು ಕೇವಲ ಸೌಂದರ್ಯ ಮಾತ್ರವಾಗಿ ಸವಿಯುವಲ್ಲಿ ದ್ವಂದ್ವ ಕಾಡುತ್ತದೆ. ಅಲ್ಲದೆ ಅಂದಿನ ಸ್ವಾತಂತ್ರ ಹೋರಾಟದ ಕಾವು ಸೇರಿ, ಸೌಂದರ್ಯದೇವಿಯನ್ನು ಹೊಗಳಿದರೆ, ಸ್ವಾತಂತ್ರ್ಯದೇವಿಗೆಲ್ಲಿ ಕೋಪಬರುವುದೋ ಎಂಬ ಸಮಕಾಲೀನ ಒತ್ತಡವೂ ಸೇರಿಕೊಳ್ಳುತ್ತದೆ. ಬಾಹ್ಯ – ಆಂತರಿಕ; ವ್ಯಷ್ಟಿ – ಸಮಷ್ಟಿಯ ಭಾವ ಸಮಸ್ಯೆಗಳಿಗೆ ಒಳಗಾಗುವ ತಾಕಾಲಾಟಗಳನ್ನು ಅನುಭವಿಸುವ ಕುವೆಂಪು ಅವರಿಗೆ ಆಶ್ರಮದ ಸಾಧುಸಂಗವೆ ಕವಿಚೇತನಕ್ಕೆ ಋಷಿತ್ವದ ದಿವ್ಯಾಗ್ನಿ ಸಂಸ್ಕಾರ ನೀಡುವ ತಪಶ್ಚರ್ಯೆಯಾಗಿತ್ತು. "ಎರಡು ದೃಷ್ಟಿಗಳು ನನ್ನನ್ನು ಸೆಳೆಯುತ್ತಿವೆ. ಒಂದು ಶುಷ್ಕ ಸತ್ಯ. ಮತ್ತೊಂದು ಸರಸ ಸೌಂದರ್ಯ! ಒಂದು ಮಹತ್ತಾದುದು; ಮತ್ತೊಂದು ಆನಂದವಾದುದು. ಶ್ರೀ ಗುರುವೇ ನನ್ನನ್ನು ಉದ್ಧರಿಸಬೇಕು. ನನಗೆ ಎರಡೂ ಸರಿಯೆ! ಸೊಬಗಿಗೆ ಒಂದು ಸಾರಿ ಸೆರೆಯಾಳಾನು! ನನ್ನಿಗೊಂದು ಸಾರಿ ಅಡಿಯಾಳಾನು!"

"ಸೊಬಗೆ ನನ್ನಿ ಒಂದು ಸಾರಿ
ನನ್ನಿಯೆ ಸೊಬಗೆಂದು ತಿರೆಗೆ ಬೀರಿ
ಒಲ್ಮೆ ಸೊಬಗು ಸೊಗದಲಿ
ಪರಮಪುರುಷನಮಲ ಹರುಷ –
ವಿಹುದ ಸಾರಿ ಜಗದಲಿ!"[೫೫]

Truth is beauty, Beauty is truth ಎಂಬ ಕೀಟ್ಸ್ ಕವಿಯ ಸಾಲುಗಳನ್ನು ಇಲ್ಲಿ ನೆನೆಯಬಹುದು.

ಕೊನೆಗೊಮ್ಮೆ ದ್ವಂದ್ವದ ತಾಕಲಾಟವನ್ನು ಅನುಭವಿಸುತ್ತಾ, ಈ ಎರಡೂ ಅನುಭವಗಳು ತನಗೆ ಬೇಕೆಂಬ ಸ್ಪಷ್ಟ ನಿಲುವನ್ನು ಹೊಂದುತ್ತಾರೆ.

ನಾನು ಒಂದನ್ನು ಬಿಟ್ಟು ಇನ್ನೊಂದನ್ನು ಹಿಡಿಯಲಾರೆ. ಆ ಎರಡರ ಸಮನ್ವಯವೇ ನಿಜವಾದ ಯೋಗ! ತ್ಯಾಗ ಭೋಗಗಳ ಸಮನ್ವಯವೇ ಯೋಗ! ಜಯ ಗುರುದೇವ! ಜಯ ಸ್ವಾಮೀಜಿ! ಜಯ ಮಹಾಮಾತೆ! ಜಯ ಭವತಾರಿಣಿ! Lead me kindly light! ಸೌಂದರ್ಯ ಮಧುರಾಗ್ನಿಯಲಿ ಬಿದ್ದು ಬೇಯುತಿಹೆ![೫೬]

ಸಂನ್ಯಾಸ ಜೀವನವನ್ನು ಸ್ವೀಕರಿಸಬೇಕೋ ಅಥವಾ ಸಂಸಾರಿಯಾಗಬೇಕೊ ಎಂಬ ದ್ವಂದ್ವ ಮನಸ್ಥಿತಿಯು ಈ ಮೇಲಿನ ಕವನಗಳಲ್ಲಿ ವ್ಯಕ್ತವಾಗಿದ್ದು, ಕೊನೆಗೆ ಅವರು ಖಚಿತ ನಿಲುವನ್ನು ತಳೆಯುವರು.

ಇಂತಹುದೇ ದ್ವಂದ್ವಕ್ಕೆ ಕಾರಣವಾದ ಮತ್ತೊಂದು ವಸ್ತು ಸ್ವಾತಂತ್ರ್ಯ ಹೋರಾಟ.

"ಸೌಂದರ್ಯ ದೇವತೆಯ ಪೂಜೆಯನು ಮಾಡಿದರೆ
ಸ್ವಾತಂತ್ರ್ಯ ದೇವತೆಗೆ ಮುನಿಸು ಬಹುದು;
ಸ್ವಾತಂತ್ರ್ಯ ದೇವತೆಯ ಪೂಜೆಯ ಮಾಡಿದರೆ
ಸೌದರ್ಯ ದೇವತೆಯು ಎದೆಯಿರಿವಳು.

ಒಂದು ನನ್ನಿಯ ಮುಕ್ತಿ,
ಒಂದು ಸೊಬಗಿನ ಭಕ್ತಿ,
ಎರಡು ಬೇಕು!
ಬಗೆಗೆ ಸತ್ಯವು ಬೇಕು,
ಎದೆಗೆ ಸೌಂದರ್ಯ ಬೇಕು
ನನಗೆರಡು ಬೇಕು!"[೫೭]

ಇಂಥ ಮನಸ್ಥಿತಿಯಲ್ಲಿರುವಾಗಲೇ ಪ್ರಕೃತಿ ಸೌಂದರ್ಯದೊಂದಿಗೆ ಜೀವ –ದೇವರ ಸಂಬಂಧದ ಅಬೇಧ ಕಲ್ಪನೆಯಲ್ಲಿ ಮೂಡುವ ಕವಿತೆ On the Way to Chamundi HillS ೧೯.೭.೧೯೨೫ರಲ್ಲಿ

ರಚಿಸಿದ್ದು. ನಿತ್ಯದೊಂದಿಗೆ ಅನಿತ್ಯವನ್ನು ಪಡೆಯುವ ಮನಸ್ಸು ಕವಿಗೆ ಇರುವುದನ್ನು ಸೂಚಿಸುವ ಕವನ.

"Climb, climb, beloved friend ;
The means is not the end.
Yet, and yet! few steps more
And in Her abode we are !
Not that, not this, not e'en Her kiss,
But Mother is all our bliss !

Up! up! beloved brother.
See! the clouds of glory gather !
Climb till the Oneness is seen
For Mother's bliss serene.
And climbing chant "Om Peace !
Mother's all and nothing is !"[58]

ಹಗಲು ಬೆಟ್ಟವೇರುವ ಸೋಪಾನ ಪಂಕ್ತಿಯನ್ನು ಜೀವ ದೇವನೆಡೆಗೇರುವ ಸಾಹಸಕ್ಕೆ ಪ್ರತಿಮೆಯನ್ನಾಗಿಸಿದೆ ಈ ಕವನ. ಇದೇ ಮನಸ್ಥಿತಿ ಕವಿಗೆ, ಅಲ್ಪ ಎನ್ನಬಹುದಾದ ವಸ್ತುವಿನಲ್ಲೂ ಭೂಮವನ್ನು ಕಾಣುವ ಶಕ್ತಿಯನ್ನು ತಂದು ಕೊಡುತ್ತದೆ.

ಕವಿ ಕುವೆಂಪು ಅವರು ಈ ಕೆಳಗಿನ ಕವನವನ್ನು ೧೦.೭.೧೯೨೫ರಲ್ಲಿ, To The River Tunga ಎಂಬ ಶೀರ್ಷಿಕೆಯಲ್ಲಿ ಪ್ರಸ್ತುತ ಕವನವನ್ನು ರಚಿಸಿದ್ದಾರೆ.

"Arise, Tunga, arise from thy bed of sweet flowers
And put on the bright blanket of green !
Sweet River-Nymph of disheveled locks trailing from bowers
On the hills where the shade is serene,
With thy foot light and flowery, glide down to the glade
And playfully embrace the delicate green blade....."[59]

ಕವಿತೆಯೊಂದು ತನ್ನಲ್ಲಿ ಅರ್ಥವನ್ನು ಇರಿಸಿಕೊಂಡಿರಬೇಕೇ? ಇಲ್ಲಿ ಕೆ.ವಿ. ನಾರಾಯಣ ಅವರ ಮಾತೊಂದು ನೆನಪಿಗೆ ಬರುತ್ತದೆ: ಕವಿತೆಗಳು ಇರುತ್ತವೆ ಅಷ್ಟೇ ಎಂಬ ಮಾತದು. ಒಂದು ಬಗೆಯಲ್ಲಿ ಪೊಯೆಟ್ರಿ ಮೇಕ್ಸ್ ನಥಿಂಗ್ ಎಂಬಂತೆ. ಹಾಗೆಂದು ಅದು ವ್ಯರ್ಥಾಲಾಪವೆಂದು ಭಾವಿಸಬೇಕಿಲ್ಲ. ಕುವೆಂಪು ಅವರ ಕಾವ್ಯವಷ್ಟೇ ಅಲ್ಲ, ಹಲವು ಕವಿಗಳನ್ನು ಈ ಅರ್ಥದ ವಿಚಾರ ಕಾಡಿದೆಯಷ್ಟೇ ಅಲ್ಲ ಅದರ ಮೀಮಾಂಸೆ ಕೂಡಾ ಕನ್ನಡ ಕಾವ್ಯದಲ್ಲಿ ನಡೆದಿದೆ.

ಸ್ವಯಂ ಕವಿಗಳೇ ಈ ಮೀಮಾಂಸಕರಾಗಿಯು ಇದ್ದಾರೆ. ಉದಾಹರಣೆಗೆ ಬೇಂದ್ರೆಯವರ ಭೃಂಗದ ಬೆನ್ನೇರಿ... ಕವಿತೆಯನ್ನು ನೋಡಬಹುದು.

**"ಭೃಂಗದ ಬೆನ್ನೇರಿ...**

ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ
ಮಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸ ॥

ಏನು ಏನು? ಜೇನು ಜೇನು? ಏನೇ ಗುಂಗುಂ ನಾನಾ
ಓಂಕಾರದ ಶಂಖನಾದಕ್ಕಿಂತ ಕಿಂಚಿದೂನಾ
ಕವಿಯ ಏಕತಾನ ಕವನದಂತೆ ನಾದಲೀನಾ ॥

ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ
ಮಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ ॥"[೬೦]

**– ಅಂಬಿಕಾತನಯದತ್ತ**

ಈ ಕವಿತೆಯ ವಿಶ್ಲೇಷಣೆಗೆ ನಾನಿಲ್ಲಿ ತೊಡಗುವುದಿಲ್ಲ. ಆದರೂ ಇಡೀ ಕವಿತೆ ನಾದ–ಭಾವಗಳ ಲಾಸ್ಯವನ್ನು ವರ್ಣಿಸುತ್ತಲೇ ತಲುಪುವ ನೆಲೆಯನ್ನು ಇಲ್ಲಿ ಗಮನಿಸಬಹುದು.

"ಮಾತು ಮಾತು ಮಥಿಸಿ ಬಂದ ನಾದದ ನವನೀತಾ
ಹಿಗ್ಗ ಬೀರಿ ಬಿಗ್ಗಲಿತ್ತು ತನ್ನ ತಾನೇ ಪ್ರೀತಾ
ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ ॥"[೬೧]

ನಾದಕ್ಕೆ, ಸೌಂದರ್ಯಕ್ಕೆ, ಹೂವಿನ ಅಂದ ಸುಗಂಧಗಳಿಗೆ, ನದಿಯ ಕಲರವಕ್ಕೆ, ನೀಲಿ ಮುಗಿಲಲ್ಲಿ ಹಾಯುವ ಶರಧೃತುವಿನ ಬೆಳ್ಮುಗಿಲಿಗೆ, ಕುಣಿವ ನವಿಲಿಗೆ, ಹಾಡುವ ಹಕ್ಕಿಗೆ ಅರ್ಥವಿಲ್ಲ, ಸ್ವಾರ್ಥವಿಲ್ಲ ಆದ್ದರಿಂದಲೇ ಅದು ಬರಿಯ ಭಾವಗೀತಾ. ಮಿಂಚಿ ಮಾಯವಾಗುವ ಒಂದು ಮಂದಹಾಸ. ಇಂತಹ ಮಹದ್ಕೃತಿಗಳನ್ನು ಕನ್ನಡದ ಕವಿಗಳು ಕಾವ್ಯಕ್ಕೆ ಎರೆದು ಕೊಟ್ಟಿದ್ದಾರೆ.

ಕುವೆಂಪು ಅವರ To The River Tunga ಸಹ ಇಂಥದೇ ಅನುಭಾವದಲ್ಲಿ ಹುಟ್ಟಿರುವಂಥದ್ದು. Arise, Tunga, arise from thy bed of sweet flowers, And put on the bright blanket of green! ಎಂಬ ಸಾಲಿನಲ್ಲಿ ಒಂದು ಜೀವವು ಹರಿವ ನದಿಯನ್ನು ಕೂಡ ತನ್ನಂಥದೇ ಜೀವವೆಂದು ಪರಿಭಾವಿಸಿ ಮಾತುಕತೆಗೆ ತೊಡಗುವುದನ್ನು ಕಾಣುತ್ತೇವೆ. ಇದೊಂದು ವಿಭಿನ್ನ ಸ್ಥಿತಿ. ಈ ಸ್ಥಿತಿ ಹೂಗಳ ಕುರಿತು ಬರೆದ ಕವಿತೆಗಳಲ್ಲೂ ವ್ಯಕ್ತವಾಗಿದೆ. ಇಡೀ ಸೃಷ್ಟಿಯನ್ನು ಕುವೆಂಪು ತನ್ನಿಂದ ಹೊರಗೆಂದು ಭಾವಿಸುವುದಿಲ್ಲ. ಕುರುಳು ಹೆರಳಿಂದ ಸರಿದಂತೆ ಸ್ನಿಗ್ಧ

ನೆರಳಿಳಿದ ಗಿರಿಯ ನೆತ್ತಿಯಲಿಂದ ಬಂಡೆಯಾಧರಿಸಿ ಇಳಿಯುತಿಹ ನದೀದೇವತೆಯನ್ನು ಕುರಿತು ಅವರು ಹೇಳುವ ಮಾತು ನದಿಯನ್ನೂ, ಅದರ ಪಾತ್ರದ ಸಮಸ್ತ ಹಸಿರನ್ನು ದೈವಿಕ ನೆಲೆಯಿಂದಲೇ ಗ್ರಹಿಸುತ್ತಾರೆ. ಆದ್ದರಿಂದಲೇ ಮುಂದಿನ ಸಾಲು ಬಂದಿದೆ: With thy foot light and flowery, glide down to the glade, And playfully embrace the delicate green blade. ಈ ಸಾಲಿನಲ್ಲಿ ಅಭೇದವಿದ್ದರೂ ಅವಲಂಬಿತ ಬದುಕುಗಳ ಕುರಿತೂ ಕವಿಯ ಆಲೋಚನೆಯಿದೆ. ಈ ಸಮಾಜ ಕೇಂದ್ರಿತ ಆಲೋಚನೆ ಭಿನ್ನ ನೆಲೆಗಳಲ್ಲಿ ಕುವೆಂಪು ಸಮಗ್ರ ಸಾಹಿತ್ಯದ ಉದ್ದಕ್ಕೂ ಕಾಣುತ್ತದೆ. ಬೇಂದ್ರೆ ಹೇಳುವಂತೆ ಇದು ಒಡಲ ನೂಲಿನಿಂದ ಜೇಡ ಜಾಲ ನೇಯುವಂತೆ ನೇಯ್ದ ವಿಶ್ವವಿಶಾಲ ವಸ್ತ್ರ.

ಈ ಕವಿತೆ ಕುವೆಂಪು ಅವರ ಬಾಲ್ಯದ ಕವಿತೆ. ನಿಸರ್ಗವನ್ನು ಕುರಿತಂತೆ, ಇಡೀ ವಿಶ್ವವನ್ನು ಕುರಿತಂತೆ ಬಾಲ ಕವಿಯು ತಳೆದಿದ್ದ ಆರೋಗ್ಯಕರ ನಿಲವು ಅವರ ಮುಂದಿನ ಎಲ್ಲ ಕಾವ್ಯ, ಮಹಾಕಾವ್ಯ, ಕತೆ, ಪ್ರಬಂಧಗಳಲ್ಲೂ ಧ್ವನಿ ಪಡೆಯುತ್ತದೆ. ಹಾಗಾಗಿ ಬಾಲ ಕವಿ ಕುವೆಂಪು ಕಾವ್ಯರಚನೆಯಲ್ಲಿ ತಮ್ಮ ವಯಸ್ಸಿಗಿಂತ ಬಹಳ ಮುಂದಿದ್ದರೆಂಬುವುದು ವೇದ್ಯವಾಗುತ್ತದೆ.

ತುಂಗೆ ಕನ್ನಡದ ಕವನವಾಗಿ ಮತ್ತೊಮ್ಮೆ ಕುವೆಂಪು ಅವರಲ್ಲಿ ಮೈದಳೆಯುತ್ತಾಳೆ. ೧೯.೦೭.೧೯೩೨ರಲ್ಲಿ ಬರೆದ ತುಂಗೆ ಕವಿತೆ ಭಾಷಾ ಪ್ರಯೋಗದಲ್ಲಿ, ಕಾವ್ಯಾತ್ಮಕತೆಯಲ್ಲಿ ಇಂಗ್ಲಿಷ್ ತುಂಗೆಗಿಂತ ಬಹಳ ಭಿನ್ನವಾಗಿದ್ದಾಳೆ. ಅಲ್ಲಿನ ಕಿಶೋರತೆ ಇಲ್ಲಿ ವಿಕಸನಗೊಳ್ಳುತ್ತ ಹೋಗಿದೆ. ಇನ್ನೊಮ್ಮೆ ಇಂದು/ ಮರಳಿಹನು ಹೊಳೆಕರೆಗೆ ಯುವಕನ್ಯೆತಂದು. ಆದರೆ ತುಂಗೆಯಂತಹ ಚಿರಂತನ ದಾಹದ ನದಿಯ ತುಲನೆಯಲ್ಲಿ ಕವಿ ಯುವಕನಲ್ಲ. ಅವನು ನಿನ್ನೆದೆಯ ತೊಟ್ಟಿಲಲಿ ನಾನು ಬರಿ ಹಸುಳೆ. ಅಲ್ಲಿನ ದುಗ್ಗೋಚರವಾದ ಅನುಭವವು ಅನುಭಾವದತ್ತ ಇಲ್ಲಿ ತಿರುಗಿದೆ. ಎಲ್ಲವೂ ನನ್ನ ದೃಷ್ಟಿಗೆ ಆತ್ಮದಾವೇಶ ಭಾವಗಳು! ಜಡವಲ್ಲ: ಸ್ಥೂಲ ವಸ್ತುಗಳಲ್ಲ! .... ಈಶ್ವರ ಶರೀರದಲಿ ಚಿನ್ಮಯ ಮಹಾಂಗಗಳು/... ಪ್ರಕೃತಿಯನು ಬ್ರಹ್ಮಮಯಿ ಎಂದರಿತು ಒಲಿದವಗೆ. ಕವಿತೆಯ ಕೊನೆಯ ಸಾಲುಗಳಂತೂ ಕುವೆಂಪು ಕಾವ್ಯದ ಭವಿಷ್ಯದ ವಿನ್ಯಾಸವೊಂದನ್ನು ಪ್ರಾರಂಭಿಸಿದಂತೆ ಇವೆ. ಕುವೆಂಪು ಕಾವ್ಯದ ಮುಖ್ಯ ಲಕ್ಷಣಗಳೆಂದು ಗುರುತಿಸಲ್ಪಟ್ಟ ನಿಸರ್ಗ ಮತ್ತು ದೈವಶ್ರದ್ಧೆ ಇವು ಅವರ ಕಾವ್ಯ ಬದುಕಿನ ತುಂಬಾ ಶೈಶವದಲ್ಲೆ ಹೊರಬರಲು ತವಕಿಸುತ್ತಿದ್ದವು. ಬಿಟ್ಟುಬಿಡಿ ಪ್ರಿಯ ಸಖರೆ ನಾ ಸಾಗಬೇಕೇಕಾಂಗಿ/ಆ ದೈವೀಕಾನಂದದ ಸಂತಸದ ನಾಡಿಗೆ/ ಎಲ್ಲಿ ಎಲ್ಲೆಯಲಿರುವುದೋ ಅನಂತತೆಯು ಅಲ್ಲಿಗೆ ಎಂಬಂಥ ಸಾಲುಗಳು ಸ್ಫೂರ್ತಿಯ ಸಮಯ ಎಂಬ ಕವನದಲ್ಲಿ ಓದಲು ಸಿಗುತ್ತವೆ. ಆಸಕ್ತಿಯ ವಿಚಾರವೆಂದರೆ ಜಿ.ಎಸ್.ಎಸ್ ಹೇಳುವಂತೆ ಕುಮಾರವ್ಯಾಸ, ಲಕ್ಷ್ಮೀಶರ ಕಾವ್ಯದ ಪ್ರಭಾವ ಅಮಲನ ಕತೆ ಬರೆಯುವ ಹೊತ್ತಿಗಾಗಲೇ ಕುವೆಂಪು ಅವರ ಮೇಲೆ ಆಗಿತ್ತು. ಕುವೆಂಪು ಅವರ ದೈವಶ್ರದ್ಧೆ ಎಂದೂ ಅಂಧಾನುಕರಣೆಯ ಆವರಣದಲ್ಲಿ ನಿಲ್ಲಲಿಲ್ಲ. ಅವರದು ಮುಕ್ತ ದೈವಶ್ರದ್ಧೆ.

ನಮ್ಮ ಪುಟ್ಟ ಕುವೆಂಪು, ಆ ಕಿರಿ ವಯಸ್ಸಿನಲ್ಲಿ ಅನುಭವಿಸಿದ ಸಾಮಾಜಿಕ ಅಸಮತೋಲನಗಳು ಮತ್ತು ಅವರ ಬದುಕಿನಲ್ಲಿ ನಡೆದ ಕೆಲವು ಘಟನೆಗಳು ಮತ್ತು ತಾವು ಎದುರಿಸಿದ ವಿವಿಧ ಸಂಘರ್ಷಗಳ ನಡುವೆ ಹೆಣೆದ ಬಿಕ್ಕಟ್ಟುಗಳು ಮತ್ತು ಅದರ ಸುತ್ತ ಹೆಣದ ಸತ್ಯಾನ್ವೇಷಣೆಯೇ, ಈ ಯಾತ್ರೆ ಎಂಬ ಕವನ. ಪ್ರಕೃತಿ ಮತ್ತು ಆಧ್ಯಾತ್ಮ ಈ ಎರಡೂ ಪರಿಕಲ್ಪನೆಗಳ (ಚಿಂತನೆಗಳ) ಆಧಾರದ ಮೇಲೆ ಸೃಷ್ಟಿಯಾಗಿರುವ ಕವನವಿದು. ಈ ದರ್ಶನದ, ಅದರ ಹೆಸರೇ ಸೂಚಿಸುವಂತೆ, ಲೋಕವನ್ನು ಕಾಣುವ ಒಂದು ವಿಧಾನ ಅಥವಾ ಅಸ್ತಿತ್ವದ ವಿವರಗಳನ್ನು ಪ್ರಜ್ಞೆಯಲ್ಲಿ ದಾಖಲಿಸಿಕೊಳ್ಳುವ ಒಂದು ಕ್ರಮ.

ಕವಿ ಕುವೆಂಪು ಅವರು ಈ ಕೆಳಗಿನ ಪ್ರಸ್ತುತ ಕವನವನ್ನು ೨೩.೨.೧೯೨೫ರಲ್ಲಿ The Pilgrimage (ನಿಲುಕದ ಆಧ್ಯಾತ್ಮವನ್ನು ಹಿಡಿಯುವ ಬಯಕೆಯೂ ಅದು ವ್ಯರ್ಥವೆಂಬ ತಿಳಿವಳಿಕೆಯೂ ಇಲ್ಲಿದೆ) ಎಂಬ ಶೀರ್ಷಿಕೆಯಲ್ಲಿ ರಚಿಸಿದ್ದಾರೆ.

"A little drop of rain
Flew from its home,
For it had longed in vain
For years to roam
Thro' countries far away
Where every month was May!"[62]

ಈ ಮೇಲಿನ ಸಾಲುಗಳಲ್ಲಿ ಒಂದು ದೊಡ್ಡ ತತ್ವವೇ ಅಡಗಿದೆ, ಅದೇನೆಂದರೇ ಎಷ್ಟು ಹುಡುಕಿದರೂ, ಜೀವನ ಸವೆಸಿದರೂ ಸಿಗದ ಆಧ್ಯಾತ್ಮವೆಂಬ ತಂತಿಯನ್ನು ಹಿಡಿಯುವ ಆಸೆಯೂ, ಅದು ನಿಷ್ಪ್ರಯೋಜಕವೆಂಬ ತಿಳಿವಳಿಕೆಯೂ ಇಲ್ಲಿದೆ. ಅಂದರೆ ಆಧ್ಯಾತ್ಮದಲ್ಲಿದ್ದ ಕವಿ ಲೋಕ ಸಂಸಾರಕ್ಕಿಳಿದು, ತನ್ನ ಮೊದಲಿನ ಮನಸ್ಥಿತಿಯನ್ನು ನೆನೆದು ಮತ್ತೆ ಆ ಸ್ಥಿತಿಗೆ ಮರಳಲು ಇಚ್ಚಿಸುತ್ತಿರುವುದಕ್ಕೆ ಸಾಕ್ಷಿಯಾಗಿದೆ.

ಇಲ್ಲಿ ವಿಲಿಯಂ ವರ್ಡ್ಸ್‌ವರ್ತ್‌ನ ಸಾಲುಗಳು ನೆನೆಪಿಗೆ ಬರುತ್ತದೆ. ನಿಸರ್ಗವು ಸಂತಸದಿಂದ ಸಂತಸಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ, ಮನಸ್ಸನ್ನು 'ಸುಂದರ ಚಿಂತನೆಗಳ ಸೌಧವನ್ನಾಗಿ' (A mansion for all lovely thoughts) ಮಾಡುತ್ತದೆ. ನಿಸರ್ಗವು ತನಗೆ ತಂದುಕೊಟ್ಟ ಗಾಢವಾದ ಅನುಭಾವವನ್ನು ಇಲ್ಲಿ ವರ್ಣಿಸುತ್ತಾನೆ. ಇಂಥ ಸ್ಥಿತಿಯಲ್ಲಿ the burthen of the mystery, the heavy and the weary weight of all this unintelligible world ಕಳಚಿ ಹೋಗುತ್ತದೆ. ದೇಹದ ಉಸಿರಾಟ, ರಕ್ತಚಲನೆಗಳು ಸಹ ನಿಂತು ಹೋದಂತಾಗಿ ದೇಹ ನಿದ್ರಿಸುತ್ತದೆ. ವ್ಯಕ್ತಿಯು ಆತ್ಮವಷ್ಟೇ ಆಗುತ್ತಾನೆ, ಬದುಕೇ ಸಮರಸವಾಗಿ ಆತ್ಮದಲ್ಲಿ ಆನಂದ ತುಂಬಿ, 'We see into the life things', ಸುತ್ತಲಿನ ಜಗತ್ತಿನ ಎಲ್ಲ ವಸ್ತುಗಳ ಮೇಲಿನ ಸ್ವರೂಪವನ್ನು ಬೇದಿಸಿ ಒಳಹೋಗುವ ಶಕ್ತಿ ಲಭ್ಯವಾಗುತ್ತದೆ. ಬದುಕಿನ ನೋವಿನ ಅರಿವು

ಆತ್ಮವನ್ನು ಶುದ್ಧಿಗೊಳಿಸುವ ಶಕ್ತಿಯಾಗುತ್ತದೆ. ಮುಳುಗುವ ಸೂರ್ಯ, ಸಾಗರ, ಗಾಳಿ, ಆಕಾಶ, ಮನುಷ್ಯನ ಮನಸ್ಸು ಎಲ್ಲದರಲ್ಲಿ ಇರುವ, ಎಲ್ಲ ಚಿಂತನೆಯನ್ನು ಮತ್ತು ಕ್ರಿಯೆಯನ್ನು ರೂಪಿಸುವ ಪರಮ ಶಕ್ತಿಯೊಂದರ ಅನುಭವ ಕವಿಗಾಗುತ್ತದೆ 'ಓಡ್ ಆನ್ ಇಮ್ಮಾರ್ಟ್ಯಾಲಿಟಿ' ಅನ್ನು ವರ್ಡ್ಸ್‌ವರ್ತ್ ತನ್ನ ಸೃಜನ ಪ್ರತಿಭೆ ಬತ್ತುತ್ತಿದೆ ಎನ್ನುವ ಆತಂಕವಾದಾಗ ರಚಿಸಿದ್ದು. ಕವಿ, ಬಾಲ್ಯದ ನೆನಪುಗಳನ್ನು ಅಸ್ತಿಭಾರ ಮಾಡಿಕೊಳ್ಳುತ್ತಾನೆ. ಹುಡುಗನಾಗಿದ್ದಾಗ ಅವನಿಗೆ ಒಮ್ಮೊಮ್ಮೆ ಹೊರಗಿನ ಜಗತ್ತು ಕರಗಿ ಅದೃಶ್ಯವಾದಂತೆ ಭಾಸವಾಗುತ್ತಿತ್ತು. ಕವಿಗೆ ಎನ್ನಿಸುತ್ತದೆ–ನಮ್ಮ ಆತ್ಮ ಸ್ವರ್ಗದಿಂದ ಈ ಜಗತ್ತಿಗೆ ಬರುತ್ತದೆ, ಬಾಲ್ಯದಲ್ಲಿ ಸ್ವರ್ಗಕ್ಕೆ ಹತ್ತಿರ ಇರುತ್ತೇವೆ, ಮುಗ್ಧತೆ–ಸಂತೋಷಗಳನ್ನು ಅನುಭವಿಸುತ್ತೇವೆ. ಆಗ ಬದುಕಿನ ಅರ್ಥ ಸಹಜವಾಗಿ ನಮ್ಮದು, (ಆದರೆ ಹೇಳಲು ಬರುವುದಿಲ್ಲ.) Shades of the prison house bigin to close upon the growing boy. ಸ್ವರ್ಗದಿಂದ ದೂರ ಸರಿಯುತ್ತೇವೆ, ಸಂದೇಹ–ನೋವು ಬಾಳನ್ನು ಪ್ರವೇಶಿಸುತ್ತವೆ. ಕ್ರಮೇಣ ಸ್ವರ್ಗ ಮರೆಯೇ ಆಗುತ್ತದೆ. ಬಾಲ್ಯದಲ್ಲಿ ಸುತ್ತಲಿನ ಜಗತ್ತಿನಲ್ಲಿ ಕಂಡ ಅವರ್ಣನೀಯ ಚೆಲುವು, ಆನಂದ ಮಾಯವಾಗುತ್ತದೆ. (Where is it now, the glory and the dream?) ಆದರೆ ಮನುಷ್ಯ ಸಹಜವಾದ ಅಂತಃಕರಣ, ಅನುಕಂಪ, ಚಿಂತನಶೀಲ ಮನಸ್ಸು, ಸಾವಿನಾಚೆ ನೋಡಬಲ್ಲ ವಿಶ್ವಾಸ–ಎಲ್ಲ ಬಾಲ್ಯ ಕಳೆದ ಮೇಲೆ ಬರುತ್ತವೆ. ಜೊತೆಗೆ ನಿಸರ್ಗದ ಅರ್ಥಪೂರ್ಣ ಭಾಂಧವ್ಯ.

"To me the meanest flower that blows can give
Thoughts that do often lie too deep for tears."[63]

ವರ್ಡ್ಸ್‌ವರ್ತ್‌ನ ಒಂದು ವಿಶಿಷ್ಟ ಕವನ A 'Ode to Duty' (ಇಲ್ಲಿ Duty ಎನ್ನುವುದು ನಮ್ಮ 'ಧರ್ಮ'ದ ಪರಿಕಲ್ಪನೆಗೆ ಹತ್ತಿರ. ದೇವರ ವಾಣಿಯ ಕುವರಿಯಾದ 'ಡ್ಯೂಟಿ' ನಕ್ಷತ್ರಗಳು ತಪ್ಪು ಮಾಡದಂತೆ ಕಾಯುತ್ತದೆ, ಪ್ರಾಚೀನವಾದರೂ ಸ್ವರ್ಗ ಹೊಸದಾಗಿ, ಶಕ್ತಿಶಾಲಿಯಾಗಿ ಉಳಿದಿದೆ). ಇಲ್ಲಿ ನಿಸರ್ಗದ ಪ್ರಸ್ತಾಪವಿಲ್ಲ, ಕರ್ತವ್ಯವು ಸ್ವಾತಂತ್ರ್ಯಕ್ಕೆ ವಿವೇಚನೆ ಇರುವ ಮಿತಿಯನ್ನು ಕಲ್ಪಿಸುತ್ತದೆ.

ನಮ್ಮ ಜೀವನದ ಕ್ರಮ ಹೇಗಿರಬೇಕೆಂದರೆ – (The Nature and spirituality both are like two faces of the same coin, they are inter connected to each other) ನಮ್ಮ ಈ ಜೀವನವೆಂಬ ಪಯಣ ಪ್ರಕೃತಿ ಮತ್ತು ಆಧ್ಯಾತ್ಮವೆಂಬ ಈ ಎರಡೂ ಪರಿಕಲ್ಪನೆಗಳು ಜೊತೆ ಜೊತೆಯಲ್ಲೇ ಸಾಗುತ್ತಾ ಹೋಗುತ್ತದೆ, ಒಂದನ್ನು ಬಿಟ್ಟರೂ ಜೀವದ ಸಮತೋಲನವನ್ನು ಸಾಧಿಸಲು ಆಗುವುದೇ ಇಲ್ಲ. ಭಗವಂತನ ಅನುಗ್ರಹಕ್ಕಾಗಿ ನಾವು ಕಾಯಲೇಬೇಕು, ಅದರರ್ಥ ಕಷ್ಟಗಳೆಲ್ಲಾ ಕಳೆದು ಒಂದೊಳ್ಳೆಯ ಕಾಲಕ್ಕಾಗಿ ಕಾಯಬೇಕು ಶಬರಿಯ ಹಾಗೆ, ಹೇಗೆ ಪೆಟ್ಟು ತಿಂದ ಕಲ್ಲು ಮಾತ್ರವೇ ಒಂದೊಳ್ಳೆ ಪ್ರತಿಮೆಯಾಗಲು ಸಾಧ್ಯವೋ (How a rejected block of Marble became the world's most famous statue) ಹಾಗೆ, ಇದಕ್ಕೆ ಈ ಕೆಳಗಿನ ಸಾಲುಗಳು ನಿದರ್ಶನವಾಗಿದೆ–

"Ah silly little dream,
You stole away to the skies !
Silently you stole away
Far, far and far away !
And now I wish, fond dream,
You were ever in my eyes !
I love you, little dream,
For all thy childish lies !
Thy sweet Paradise
Was with you in my eyes !
Now you are gone, fond dream,
With you all Paradise !"[64]

The Man and the Echo (ಮನುಷ್ಯ ಮತ್ತು ಅವನಲ್ಲಿನ ಪ್ರತಿಧ್ವನಿ) ಎಂಬ ಡಬ್ಲ್ಯು. ಬಿ. ಯೇಟ್ಸ್‌ನ ಕವನದಿಂದ ಪ್ರೇರಣೆಯನ್ನು ಹೊಂದಿ ಈ ಮೇಲಿನ ಸಾಲುಗಳನ್ನು ಕುವೆಂಪು ರಚಿಸಿದಂತಿದೆ. ಯೇಟ್ಸ್ Vacillation (ಹೊಯ್ದಾಟ) ಎಂಬುದು ಇದಕ್ಕಿಂತ ಮೊದಲು ಬರೆದ ಇನ್ನೊಂದು ಕವಿತೆ. Byzantium ಎಂಬುದು ಮತ್ತೊಂದು. Dialogue of self and soul (ಆತ್ಮ ಮತ್ತು ಅಂತಃಕರಣಗಳ ಸಂವಾದ) ಎಂಬುದು ಮಗದೊಂದು. ಈ ಬಗೆಯ ಕವನಗಳೆಲ್ಲ ಕವಿಯ ಮನಸ್ಸಿನ ತುಮುಲವನ್ನು ಅಭಿವ್ಯಕ್ತಿ ಪಡಿಸುವುದಾಗಿದ್ದು, ಭಾರತೀಯ ಮೂಲದ ತತ್ತ್ವಜ್ಞಾನವು ಕವಿಯನ್ನು ಹೇಗೆ ಪ್ರಭಾವಿಸಿದುವೆಂಬುದನ್ನು ತೋರಿಸುತ್ತವೆ. ಈ ಲೌಕಿಕ ಜೀವನದ ಬಗೆಗೆ ಪ್ರೇಮವನ್ನು ಬಿಡಲಾರದ, ಆದರೆ ಇದರ ನಶ್ವರತೆಯನ್ನು ಮರೆಯಲಾಗದ, ಪಾರಲೌಕಿಕತೆಯನ್ನು, ಅಮರತ್ವವನ್ನು ಒಪ್ಪಿಕೊಂಡು ಅದು ತನಗೆ ಸಾಧ್ಯವೋ ಇಲ್ಲವೋ ಎಂದು ಶಂಕಿಸುವ, ಆದರೆ ಅಮರತ್ವದ ಗುರಿಯ ಮೋಹಕ ಸೆಳತಕ್ಕೆ ಸಿಕ್ಕ ಕವಿಯ ಮನಸ್ಸಿನ ಸ್ಥಿತಿ ಈ ಕವನಗಳಲ್ಲಿ ಚೆನ್ನಾಗಿ ವ್ಯಕ್ತವಾಗಿದೆ.

ಮೊದಲು The Man and the Echo ಕವನದತ್ತ ದೃಷ್ಟಿಯನ್ನು ಹಾಯಿಸೋಣ. ಈ ಕವನದ ಹೃದಯದಲ್ಲಿ ಕವಿಗೆ ತನ್ನ ಇಡೀ ಜೀವನದ ಸಾರ್ಥಕತೆಯ ನಿಷ್ಕರ್ಷೆಯ ಪ್ರಶ್ನೆಯೇ ಅಡಗಿದೆ. ಕವಿ ಇದನ್ನು ತನ್ನ ಕೊನೆಯ ದಿನಗಳಲ್ಲಿ ಬರೆದಿರಬೇಕು (ಜನವರಿ ೧೩, ೧೯೩೯ರಲ್ಲಿ ಬರೆದದ್ದು).

"All that I have said and done,
Now that I am old and ill,
Turns into a question till

I lie awake night after night

And never get the answers right.

Did that play of mine send out

Certain men the English shot?

Did words of mine put too great strain

On that women's reeling brain?"[65]

ತನ್ನ ಮೇಲೆ ಹೇಗೆ ಸಮಾಜ ಪ್ರಭಾವಿಸಿದೆ ಮತ್ತು ಕವಿ ಅದರಾಚೆಗೆ ಬರಲಾರದೆ ಅದಕ್ಕೆ ತಕ್ಕಂತೆ, ಅವರಂತೆಯೇ ಮಾರ್ಪಾಟು ಹೊಂದಿ ಆಡಿದ್ದು, ಮಾಡಿದ್ದು, ಅದರ ಪರಿಯ ಬಗ್ಗೆ ಈಗ ಪ್ರಶ್ನೆಯಾಗಿದೆ ಎನ್ನುತ್ತಾನೆ: ಯಾವ ಪ್ರಶ್ನೆಯೆಂದರೆ, ಈ ಆಡಿದ, ಮಾಡಿದ ಮಾತು, ಕಾರ್ಯಗಳ ಫಲದಿಂದ ಬಿಡಿಸಿಕೊಳ್ಳುವುದು ಹೇಗೆಂಬುದೇ ಆಗಿದೆ. ನಮ್ಮ ಈ ಜೀವನವೆಂಬ ಯಾತ್ರೆಯಲ್ಲಿ ಭಗವಂತ ನಮ್ಮ ಆತ್ಮ ಸಂಸ್ಕರಣೆ ಮಾಡಲು ಅನೇಕ ಸವಾಲುಗಳನ್ನು ಒಡ್ಡುತ್ತಾನೆ, ಅದನ್ನು ಎದುರಿಸಲು ಹೊರಟ ನಮ್ಮನ್ನು, ಸಮಾಜದ ಮಾನವ ನಿರ್ಮಿತ ಅನಿಷ್ಟ ಕಟ್ಟುಪಾಡುಗಳು ಚಿವುಟಿ ಹಾಕಿ ಬಿಡುತ್ತದೆ. ಇಲ್ಲಿ ನಿಲುಕದ ಆಧ್ಯಾತ್ಮವನ್ನು ಹಿಡಿಯುವ ಬಯಕೆಯೂ ಅದು ವ್ಯರ್ಥವೆಂಬ ತಿಳಿವಳಿಕೆಯೂ ಇಲ್ಲಿದೆ.

ಈ ಕವನದ ಭಾಷೆಯಲ್ಲಾಗಲಿ, ವಸ್ತುವಿನಲ್ಲಾಗಲಿ, ಮೇಲಿರುವ ಕವನದ ಅದರ ಮಟ್ಟಕ್ಕೆ ಏರುವುದಿಲ್ಲ ಎಂದು ಕುವೆಂಪು ಅವರೇ ಹೇಳಿದ್ದಾರೆ. ಕಾಲಾನಂತರದಲ್ಲಿ ಒಬ್ಬ ವ್ಯಕ್ತಿಯನ್ನು ಕುರಿತಂತೆ, ಕವಿಯಲ್ಲಿ ಮೂಡುವ ಭಾವನೆಗಳು, ಪಡೆದುಕೊಳ್ಳುವ ಅರ್ಥವ್ಯಾಪ್ತಿ ಹಾಗೂ ಅದನ್ನು ನಿರ್ವಹಿಸುವ ಕ್ರಮಕ್ಕೆ ಈ ಕವನಗಳು ಸಾಕ್ಷಿಯಾಗಿವೆ.

ಕಸಿನ್ಸ್ ಅವರ ಹಿತವಚನದ ನಂತರ ಕುವೆಂಪು ಅವರ ಮೊದಲ ಕನ್ನಡದ ಪ್ರಯೋಗ 'ಪೂವು'. ಇದು ಅವರ ಸ್ವಂತ ಪ್ರಯೋಗವಾಗಿದ್ದು, ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹೊಸ ಹಾದಿಯನ್ನು ರೂಪಿಸುವುದಕ್ಕೆ ದಾರಿಮಾಡಿಕೊಟ್ಟ ಕವನ.

ಕನ್ನಡದಲ್ಲಿ ಪೂರ್ಣ ಪ್ರಮಾಣದಲ್ಲಿ ಕವನ ರಚನೆ ಮಾಡುವಷ್ಟು ಭಾಷಾ ಸಾಮರ್ಥ್ಯ ಪಡೆಯುವವರೆಗೂ, ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಬರೆಯುವುದನ್ನು ಕುವೆಂಪು ಮುಂದುವರಿಸುತ್ತಾರೆ. ಈ ಸಮಯದಲ್ಲಿ ರಚಿಸಿದ ಕನ್ನಡ ಕವನಗಳೆಲ್ಲಾ ಹೆಚ್ಚಾಗಿ ಇಂಗ್ಲಿಷ್ ಕವನಗಳ ಅನುಕರಣೆಯ ಕವನಗಳ ವಸ್ತುವೂ ಸಹಜವಾಗಿ ಒಂದೇ ಆಗಿರುತ್ತದೆ. ಇದಕ್ಕೆ ನಿದರ್ಶನವಾಗಿ ಈ ಕೆಳಗಿನ ಕವನಗಳನ್ನು ಗಮನಿಸಬಹುದು. ೧೯೨೫ರಲ್ಲಿ ರಚಿಸಿದ ಕವನಗಳು The Song of the Earth flower.

"Move gently, maiden sweet,

Lest you should trample my bosom ;

Tho' flowery be your feet
Flowerier still's the blossom!

Tho' your sweet lotus-eyes
The wandering bees allure,
Tho' the wealth of Paradise
Be yours, O maiden pure."[66]

ಮತ್ತು

"ತುಳಿಯದೆನ್ನ ಹೃದಯವ,
ಚೆಲುವಾದರು ನಿನ್ನಡಿಗಳವು
ಅಲರ ಚೆಲುವು ಮೀರವು.
ಸುರರ ಲೋಕದವಳು ನಾನು,
ನಳಿನವದನೆಯೆ
ವರ ವಸಂತನತಿಥಿಯಾಗಿ
ಧರೆಗೆ ಬಂದಿಹೆ!"[೬೭]

ಇಲ್ಲಿ ಒಂದೇ ವಸ್ತು, ಒಂದೇ ತೆರನಾಗಿ ಎರಡು ಭಿನ್ನ ಭಾಷೆಗಳಲ್ಲಿ ಪ್ರಕಟಗೊಂಡಿದೆ. ಹೂವೊಂದನ್ನು ವಸ್ತುವನ್ನಾಗಿಟ್ಟುಕೊಂಡು ರಚಿಸಿದ ಮತ್ತೊಂದು ಕವನ 'ಒಂದು ಹೂವಿಗೆ'. ೨೦.೧೧.೧೯೩೩ರಲ್ಲಿ ರಚಿಸಿದ್ದಾಗಿದ್ದು, ಹೂವನ್ನು ಕಾಣುವ ದೃಷ್ಟಿಕೋನವಿಲ್ಲಿ ಬದಲಾಗಿದೆ. ಮೇಲಿನ ಎರಡೂ ಕವನಗಳು ಹೂವಿನ ಅದ್ಭುತ ಸೌಂದರ್ಯವನ್ನು ವರ್ಣಿಸಿವೆ ಹಾಗೂ ಹೂವನ್ನು ಮೀರಿದ ವಸ್ತುವಿಲ್ಲ ಎಂಬ ಧೋರಣೆಯು ವ್ಯಕ್ತವಾಗುತ್ತದೆ. ಈ ಕವನದಲ್ಲಿ ಮನುಷ್ಯ ಮತ್ತು ಹೂವಿನ ನಡುವಿನ ಸಮಾನತಾವಾದವನ್ನು ಕಲ್ಪಿಸಿದ್ದಾರೆ. ಅವರ ದೃಷ್ಟಿಯಲ್ಲಿ ಮನುಷ್ಯ ಬೇರೆಯಲ್ಲ, ಹೂ ಬೇರೆಯಲ್ಲ. ಮನುಷ್ಯನಷ್ಟೇ ಮಹತ್ವವುಳ್ಳದ್ದಾಗಿ ಹೂ ಕಂಡು ಬಂದಿದೆ.

"ಅನಂತ ಕಾಲವು ನಿನ್ನನು ಹೊತ್ತಿದೆ;
ಸಮಸ್ತ ವಿಶ್ವವೆ ನಿನ್ನನು ಹೆತ್ತಿದೆ.
ನನಗೆಂತುಂಟೊ ನಿನಗಂತುಂಟೆ ಸೃಷ್ಟಿ;
ನನ್ನಂತೆಯೆ ನಿನಗೂ ಇದೆ ದೃಷ್ಟಿ;
ನನ್ನಂತೆಯೆ ಅನುಭವಿಸುವ ಶಕ್ತಿ;
ನನ್ನಂತೆಯೆ ನೀನೂ ವ್ಯಕ್ತಿ!"[೬೮]

೧೯೨೫ರಲ್ಲಿ ರಚಿಸಿದ ಕವನಗಳು ಚೆಲ್ವಿಗೆ ಸಾಕ್ಷಿಯಾದರೆ, ನಂತರದಲ್ಲಿ ೨೭.೮.೧೯೨೬ರಲ್ಲಿ ರಚಿಸಿದ **'ದಾಸವಾಳದ ಹೂ'** ಎಂಬ ಕವನ ಕವಿಯ ಯೋಗದೃಷ್ಟಿಗೆ ಸಾಕ್ಷಿಯಾಗಿದೆ. "ಸರ್ವ ಖಲ್ವಿದಂ ಬ್ರಹ್ಮ" ಎಂಬ ತತ್ವ, ಅಲ್ಪದಲ್ಲೂ ಭೂಮತ್ವವನ್ನು ದರ್ಶಿಸುತ್ತವೆ.

"ಕಾಲಾನಲನಿಂ ಪೊರಮಡುವ
ಜ್ವಾಲೆಯ ನಾನಹೆ! ಹೂವಲ್ಲ!
ಬ್ರಹ್ಮಾನಂದಾಂಬುಧಿಯಲ್ಲಿ
ಪ್ರೇಮ ಸಮೀರಣ ಚುಂಬನದಿ
ಉದಿಸಿದ ಮೀಚಿಯು ನಾನಹೆನು;
ಉದಯದ ಲೀಲೆಯ ಹೂವಲ್ಲ
ಸುಮವಲ್ಲವೊ ನಾ: ಚೈತನ್ಯ!
ಸುಮಮಾಯೆಯು ಕೇವಲ ಶೂನ್ಯ."[೬೯]

ಇಲ್ಲಿ ಹೂ ತನ್ನ ನಿತ್ಯತೆಯಿಂದ ಅನಿತ್ಯದೆಡೆಗೆ ಸಾಗುತ್ತದೆ. ಇಂಥ ಗಂಭೀರ ಚಿಂತನೆಗೆ ಕಾರಣವಾದ ಹೂ, ಅಷ್ಟೇ ಸಹಜವಾಗಿ, ಅದರ ಮೋಹಕ ಸೌಂದರ್ಯದಿಂದಲೂ ಕಂಗೊಳಿಸುತ್ತದೆ. ಏಕಕಾಲದಲ್ಲೆ ಕುವೆಂಪು ಅವರು ಲಘುವಾಗಿ, ತಿಳಿಯಾಗಿ ಮತ್ತು ಅಷ್ಟೇ ಆಳವಾಗಿ ಚಿಂತನೆಯನ್ನು ಮಾಡಬಲ್ಲವರಾಗಿದ್ದರು. ಅದು ಒಂದೇ ವಸ್ತುವನ್ನು ಕುರಿತು ಎಂಬುದಕ್ಕೆ 'The Flowers' ಎಂಬ ಕವನವನ್ನು ಗಮನಿಸಬೇಕು. ಸರಳ ಸುಂದರ ಹೂವಿನ ಸೌಂದರ್ಯವನ್ನು ಸವಿದ ಕವಿಗೆ ಅನಿವರ್ಚನೀಯವಾದ ಅನುಭವ ಉಂಟಾಗುತ್ತದೆ. ಅಂಥ ಅನುಭವ ಸುಖವನ್ನು ಇಂಗ್ಲಿಷಿನ ಈ ಕವನ ವರ್ಣಿಸುತ್ತದೆ.

"Who are ye, sweet Flowers?
And whernce do ye come?
Ye adorn the bowers
And pass away dumb!"[70]

**'ಕುಸುಮಕ್ಕೆ'** ಎಂಬ ಕವನದಲ್ಲಿ, ಕುವೆಂಪು ಅವರ ದರ್ಶನ ತತ್ವವು ಬೀಜ ರೂಪದಲ್ಲಿದೆ. ೨೮.೧.೧೯೨೭ರಲ್ಲಿ ರಚಿಸಿದ ಈ ಕವನ ಸೃಷ್ಟಿಯ ವಿಕಾಸದ ಅಲ್ಪ ಮತ್ತು ಭೂಮತೆಗೆ ಸಮಾನ ಮೌಲ್ಯವನ್ನು ಕಲ್ಪಿಸುತ್ತದೆ. ಅವರೆ ಹೇಳುವಂತೆ 'ಕೊನೆ ಕೊನೆಗೆ ಈ ದೃಷ್ಟಿ ಕವಿಯ 'ದರ್ಶನ' ಒಂದು ಅಗ್ನಿ ಉಜ್ವಲ ಶ್ವಾಸ ಸ್ಪಂದನವಾಗಿ ಅವನ ಕೃತಿಗಳಲ್ಲೆಲ್ಲಾ ಮಿಡಿದು 'ಶ್ರೀ ರಾಮಾಯಣ ದರ್ಶನಂ' ಮಹಾ ಕಾವ್ಯದಲ್ಲಿ ಉತ್ತುಂಗ ಶಿಖರ ಸ್ಥಾನಕ್ಕೆ' ಏರುತ್ತದೆ.

"ಎದುರುಗೊಳ್ಳಲು ನಿನ್ನ ಯುಗಯುಗಗಳನು ಕಳೆದೆ;
ಎದುರುಗೊಂಡೆವು ಕಡೆಗೆ ನಾನಿಂದು, ಕುಸುಮ!
ರವಿ ಶಶಿಯು ನಭತಾರೆ ತಂಬೆಲರು ಶೀತಾಂಬು
ಭೂದೇವಿ ಮೊದಲಾದವರೆಲ್ಲರೂ ನಮ್ಮ
ಬರನ ಹಾರೈಸೆನಿತು ಕಲ್ಪಗಳ ಕಳೆದರೈ,
ಎಲೆ ಕುಸುಮ? ನಮ್ಮ ಸಂಗಮವವರ ಮುಕ್ತಿ!"[೭೧]

ಈ ಕವಿತೆಯೊಳಗಿನ ಆಂಶಿಕದೃಷ್ಟಿ, ಪೂರ್ಣ ದೃಷ್ಟಿಯಾಗಿ ಪರಿಣಮಿಸಿ, ಮಹಾ ಕಾವ್ಯದವರೆಗೂ ಮುಂದುವರೆಯುತ್ತದೆ.

ಕುವೆಂಪು ಅವರ ಮನೋಭಾವಗಳು, ಕಾಲಾನಂತರದಲ್ಲಿ ಪಡೆದುಕೊಳ್ಳುವ ವಸ್ತು ವಿನ್ಯಾಸಗಳು ಭಿನ್ನರೂಪವನ್ನು ತಾಳುತ್ತವೆಯೊ ಅಥವಾ ಒಂದೇ ರೂಪದಲ್ಲಿ ಇರುತ್ತವೆಯೊ ಎಂಬುದರ ಅವಲೋಕವನ್ನು ಇಲ್ಲಿ ಮಾಡಲಾಗಿದೆ. ಕವನಗಳ ಅಧ್ಯಯನದೊಂದಿಗೆ, ಕವಿ ಮನಸ್ಥಿತಿಯ ಹಿನ್ನೆಲೆಯನ್ನು ಅರ್ಥೈಸಲಾಗಿದೆ. ಇಲ್ಲಿನ ಬಹುತೇಕ ಕವನಗಳು 'ನೆನಪಿನ ದೋಣಿಯಲ್ಲಿ' ಉಲ್ಲೇಖವಾಗಿವೆ, ಕೆಲವು ಆಗಿಲ್ಲ. ಆದ್ದರಿಂದ ಅದೇ ಕಾಲಮಾನದಲ್ಲಿ ಅದೇ ವಸ್ತುವಿನ ಮೇಲೆ ಬರೆದ ಕವನಗಳನ್ನು, 'ಕುವೆಂಪು ಸಮಗ್ರ ಕಾವ್ಯ'ದಿಂದ ತೆಗೆದುಕೊಳ್ಳಲಾಗಿದೆ. ಎಲ್ಲಾ ಕವನಗಳು 'ನೆನಪಿನ ದೋಣಿಯಲ್ಲಿ' ಉಲ್ಲೇಖಗೊಂಡಿಲ್ಲವಾದ್ದರಿಂದ, ಅವಗಾಹನೆಗಾಗಿ, ಸರಿ ಎನಿಸುವ ಕಡೆ ಸಮಗ್ರ ಕಾವ್ಯದಿಂದ ಕೆಲವು ಕವನಗಳನ್ನು ಆರಿಸಿಕೊಳ್ಳಲಾಗಿದೆ. ಈ ಕವನಗಳ ಅಧ್ಯಯನವೂ 'ನೆನಪಿನ ದೋಣಿಯಲ್ಲಿ' ಬಂದಿರುವ ಕವನಗಳಷ್ಟೇ ಮುಖ್ಯ ಎಂದು ಪರಿಗಣಿಸಲಾಗಿದೆ.

ಕವಿ ಹೃದಯ ವಿಪಂಚಿಯನ್ನು ನಿರಂತರವಾಗಿ ಮಿಡಿವ ಎರಡು ಶಕ್ತಿಗಳೆಂದರೆ ಪ್ರಕೃತಿ ಹಾಗೂ ಜೀವನ. ಜೀವನದಲ್ಲಿ ಕವಿಯ ಅನುಭವ ಪ್ರತಿಕ್ರಿಯೆಗಳೇನೇ ಇರಲಿ, ಪ್ರಕೃತಿ ಸಾನ್ನಿಧ್ಯಕ್ಕೆ ಆತ ಬಂದಾಗ ಕ್ಷಣಕಾಲ ಅವೆಲ್ಲವನ್ನೂ ಮರೆತು ಒಂದು ತನ್ಮಯ ಸ್ಥಿತಿಗೆ ಒಳಗಾಗುತ್ತಾನೆ. ಅಲ್ಲಿ ಆತ ಸಹೃದಯನೂ ಹೌದು. ಸೃಷ್ಟಿಕರ್ತನೂ ಹೌದು. ಸೃಷ್ಟಿಯ ವಿವಿಧ ಮುಖಗಳಿಂದ ಹೊಮ್ಮುವ ಬ್ರಹ್ಮಗಾನವನ್ನು ಆಸ್ವಾದಿಸುವಲ್ಲಿ ಆತ ಸಹೃದಯ, ಅದನ್ನು ಮತ್ತೊಂದು ಆನಂದಮಯ ಗಾನವನ್ನಾಗಿಸುವಲ್ಲಿ ಸೃಷ್ಟಿಕರ್ತ. ಇಲ್ಲಿ ಕವಿ ಮುಖ್ಯವಾಗಿ ಗಮನಿಸುವುದು ಸೌಂದರ್ಯವನ್ನು, ತತ್ಫಲವಾದ ಆನಂದವನ್ನು. ಕವಿ ಕಲ್ಪನೆಗೆ ಮಿತಿಯೇ ಇರುವುದಿಲ್ಲ, ಅದಕ್ಕೆ ಒಂದು ಸಾಕ್ಷಿಯಂತಿದೆ ಈ ಕೆಳಗಿನ ಕವನ.

"In thy great world's uncertainty
Where notes confounding come and greet,
I have heard thee and I hear thee
Musician great, Musician sweet !
Beside the brooks that run and slide
Filling with murmur the silent woods,
Whose shade spreads far and wide
Over the gurgling floods,
I've seen thee sit, I've heard thee sing,
O thou majestic Musician king !"[72]

ಕುವೆಂಪು ಅವರಿಗೆ ಪ್ರಕೃತಿ ಅಪರೂಪದ ಅತಿಥಿಯಲ್ಲ, ನಿತ್ಯದ ಗೆಳೆತನಕ್ಕೆ ಒದಗಿ ಬರುವ ಆತ್ಮಸಂಗಾತಿ. ಈ ಕವನದಲ್ಲಿ ಕವಿಗೆ ಹಕ್ಕಿಯ ಕಲರವವೇ ಸುಶ್ರಾವ್ಯವಾದ ಸಂಗೀತದಂತೆ ಭಾಸವಾಗಿ, ಈ ಪಕ್ಷಿಗಳೇ ಕಾನನದ ಸಂಗೀತದ ಅರಸರು ಎಂದು ಹಾಡಿ ಹೊಗಳಿದ್ದಾರೆ. ಅವರೆನ್ನುತ್ತಾರೆ – I have heard thee and I hear thee, Musician great, Musician sweet![73] ಎಂದು.

ಕರ್ಮ ಜೀವಿಯಾದ ರೈತ ಎಂತಹ ಸನ್ನಿವೇಶದಲ್ಲೂ ತನ್ನ ಕಾಯಕವನ್ನು ನಿಲ್ಲಿಸುವುದಿಲ್ಲ; ಆತನದು ನಿರಂತರ ದುಡಿಮೆ. ಆತನ ಬೆವರ ಫಲವನ್ನು ಕವಿ ಹಬ್ಬದ ರೂಪದಲ್ಲಿ ಇಲ್ಲಿ ಧ್ವನಿಸುತ್ತಿದ್ದಾರೆ.

"Let's go to the fields, to the golden fields, come
away, brothers come,
The sun has risen in the east and the purple
clouds are pensive still ;
The wind is plundering grass and flower and
the glimmering locusts hum,
And the song of the bulbul blends with the
merry heath-cock's shrill."[74]

ಈ ಮೇಲಿನ ಕವನ ಕುವೆಂಪು ಅವರ ವಿಶಿಷ್ಟ ಶೈಲಿಯ ಪ್ರಾತಿನಿಧಿಕ ಪದ್ಯವೂ ಆಗಿದೆ. ಇಲ್ಲಿ ಕವಿ ವಿವಿಧ ಸುಂದರ ಸನ್ನಿವೇಶಗಳನ್ನು ಅನುಭವಿಸುತ್ತಾ ಸಾಗಿ ರಸಾವೇಶಕ್ಕೆ ಒಳಗಾಗುತ್ತಾರೆ. ಸುತ್ತಲಿನ ಗಿರಿ, ತೊರೆ, ವಿಹಂಗಮ, ತರು, ಬನ, ಸುಮಗಳೆಲ್ಲಾ ಅವರಿಗೆ ಆನಂದವನ್ನುಂಟು ಮಾಡಿದೆ. ರೈತಾಪಿ ವರ್ಗಕ್ಕೆ ಆ ಸುಗ್ಗಿಯ ಸಂತಸವನ್ನು ಈ ಕವನದ ಮೂಲಕ ಹರಡುತ್ತಿದ್ದಾರೆ.

ಋತುಚಕ್ರದಲ್ಲಿ ವಸಂತನಿಗೆ ಪ್ರಾಶಸ್ತ್ಯ ಹೆಚ್ಚು. ಋತುಚಕ್ರದ ಯೌವ್ವನವದು. ಗಿಡ ಮರಗಳು ಚಿಗುರುತ್ತವೆ, ಹೂಗಳು ಅರಳುತ್ತವೆ. ಸೃಷ್ಟಿಗೆ ಹೊಸ ಲಾವಣ್ಯ, ಹೊಸ ಜವ್ವನಗಳು ಒದಗುತ್ತವೆ. ಋತುಗಳು ರಾಜನಾಗಿ ವಸಂತ ಮರೆಯುತ್ತಾನೆ. ಈ ಸುಗ್ಗಿಯಾಣ್ಮನ ಸೊಬಗು ನಮ್ಮ ಕವಿಗಳ ಹೃದಯದಲ್ಲೂ ನವ ಉತ್ಸಾಹವನ್ನು ತುಂಬುತ್ತದೆ. ಉದಾಹರಣೆಗೆ, ಕುವೆಂಪು ಅವರ "ಸುಗ್ಗಿ ಬರುತಿದೆ" "ವಸಂತ ರಮಣಿಯರ ಹಾಡು" "ಕೋಕಿಲೋದಯ ಚೈತ್ರ" "ವೈಶಾಖ ಸೂರ್ಯೋದಯ" "ವೈಶಾಖ ಪಾಡ್ಯಮಿ" ಹಾಗೂ ಬೇಂದ್ರೆಯವರ 'ಈ ಸಲದ ಸುಗ್ಗಿ' 'ಮಧುಮಾಸದ ಕುಣಿತ' ಪು.ತಿ.ನ. ಅವರ 'ವಸಂತ ಚಂದನ'ಗಳಂತಹ ಸುಂದರ ಋತುಗೀತೆಗಳನ್ನು ಗಮನಿಸಬಹುದು.

'ಸುಗ್ಗಿ ಬರುತ್ತಿದೆ' ಕುವೆಂಪು ಅವರ ಪ್ರಥಮ ಕವಿತಾ ಸಂಕಲನ 'ಕೊಳಲು'ವಿನಲ್ಲಿ ಪ್ರಕಟವಾದ ಭಾವಗೀತ. ಲಯದ ನಾದಲೀಲೆ, ಸೌಂದರ್ಯದ ಬಗ್ಗೆ ತನ್ಮಯತೆ, ಹಾಗೂ ಬಂಧಭಾವಗಳ

ಮಧುರ ಮಿಲನದಿಂದಾಗಿ ಇದು ಇಂದಿಗೂ ಕುವೆಂಪು ಅವರ ಉತ್ತಮ ಪ್ರಕೃತಿ ಗೀತವಾಗಿದೆ. ಉತ್ಸಾಹ ಲಯದ ಹಿರಿಯ ಕಿರಿಯ ಚರಣಗಳ ಮೇಳ, ಯತಿ ಹಾಗೂ ಗಣ ಪರಿವೃತ್ತಿ ತರುವ ವೈವಿಧ್ಯ ಇವುಗಳ ಉಚಿತ ಬಳಕೆಯಿಂದಾಗಿ ಕಾವ್ಯದ ಬಂಧ ಭಾವದ ಅಭಿನಯಕ್ಕೆ ಎಡೆ ಮಾಡಿಕೊಟ್ಟಿದೆ.

"ಅಡಿಯಗೆಜ್ಜೆ ನಡುಗೆ ಹೆಜ್ಜೆ ಇಡುವ ಸುಗ್ಗಿ ಬರುತಿದೆ
ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗ ಸುಖವ ತರುತಿದೆ
ಕಣಿವೆಯಿಳಿದು ತೆಮರನೇರಿ,
ತರುಗಳಲ್ಲಿ ತಳಿರ ಹೇರಿ,
ಹೊಸತು ಜೀವಕಳೆಯ ತೋರಿ
ಸುಗ್ಗಿ ಮಾಡುತಿರುವುದು!"[೮೫]

ಎಂಬ ಆರಂಭದ ನುಡಿಗಳಲ್ಲಿ ಕಣಿವೆ ಇಳಿದ ತೆಮರನೇರಿ ಬರುತ್ತಿರುವ ಸುಗ್ಗಿ ನರ್ತಕನ ನಡೆಯನ್ನು ಕಾಣಬಹುದು. ಯತಿಯ ಜಾಗಕ್ಕೆ ತಾಳಬಿದ್ದು ಅಲ್ಲಿನ 'ಜ' ಕಾರದಲ್ಲಿ ಗೆಜ್ಜೆಯ ಘಲ್ ಘಲ್ ನಾದವನ್ನು ಹೊರಡಿಸುತ್ತದೆ.

"ಬನದ ಬಿನದದಿನಿದು ನಿನದ ಮನದೊಳಾಡುತಿರುವುದು!"[೮೬]

ಎನ್ನುವಲ್ಲಿನ ಅನುಪ್ರಾಸ ಕವಿ ಸಂವೇದನೆಯ ಅನುಕರಣವನ್ನು ಸಹೃದಯನ ಹೃದಯದಲ್ಲಿ ಮೂಡಿಸುತ್ತದೆ.

ಕವಿಯ ಕಣ್ಣಿಗೆ ಸುಗ್ಗಿ ಕೇವಲ ಒಂದು ಋತುವೈಭವವಲ್ಲ ತನ್ನ ಇನಿಯಳನ್ನು ಸಂಧಿಸಲು ಉತ್ಸಾಹದಿಂದ ಕುಣಿದು ಬರುವ ಬೇಟಕಾರ. ಆತನ ಸ್ವಾಗತಕ್ಕಾಗಿ ದುಂಬಿವಿಂಡು ಹಾರುತ್ತಿವೆ ಮತ್ತು ಮಧುಮಾಸವನ್ನು ಸಾರುತ್ತಿವೆ. ತನ್ನಿನಿಯನನ್ನು ಸಂಧಿಸಲು ವನದೇವಿಗೂ ಅಷ್ಟೇ ಕಾತುರ.

"ಮಾಮರಂಗಳಲಿ ವಿಹಂಗತತಿಯ ನಿಸ್ವನಂಗಳಿಂ
ತಳಿ ಸೊಂಪನಲರ ದೊಂಪನಾಂತ ಬನಬನಂಗಳಿಂ
ನಲಿವ ಪಟ್ಟೆ ಯುಡೆಯನುಟ್ಟು
ಅರಳಿದರಳುಗಳನು ತೊಟ್ಟು
ಹಿಮದ ಮಣಿಯ ಮಾಲೆ ಇಟ್ಟು
ತಣಿದು ಸೋಲೆ ಕಣ್ಮನಂ
ಕರೆವಳೋವಿ ಬನದದೇವಿ ತನ್ನ ಸುಗ್ಗಿಯಾಣ್ಮನಂ"[೮೮]

ಇಡೀ ಪ್ರಕೃತಿಯನ್ನು ಸುಂದರ ಹೆಣ್ಣಾಗಿಸಿ ವಿವಿಧ ಚೆಲುವಿನ ದೃಶ್ಯಗಳನ್ನು ಉಡುಗೆ ತೊಡುಗೆಗಳಾಗಿಸಿ ಮಧುರ ಬೇಟದ ರಸ ಸನ್ನಿವೇಶವನ್ನು ಕವಿ ಕಾಣುತ್ತಾರೆ ಮತ್ತು ಕಾಣಿಸುತ್ತಾರೆ.

ತೊರೆಯ ದಂಡೆಯಲ್ಲಿ ನಿಂತು ಸುಗ್ಗಿ ಹಾಗೂ ವನರಾಜಿಯ ಚೆಲುವನ್ನು ಆಸ್ವಾದಿಸುತ್ತಿರುವ ಕವಿ ರಸಸಾಗರದಲ್ಲಿ ಕರಗಿದ್ದಾರೆ. 'ತೊರೆಯ ಗಂಡನೆದುರುಗೊಂಡ ಕೋಮಲೆಯನು ಹೋಲುತ' ಎಂಬ ಹೋಲಿಕೆ ಈ ಸೌಂದರ್ಯಕ್ಕಾಗಿ ಕಾತುರ, ಸುಗ್ಗಿಯಾಣ್ಮನನ್ನು ಎದುರುಗೊಳ್ಳುವ ಆತುರ ಇತ್ತೆಂಬುದನ್ನು ತೋರಿಸುತ್ತದೆ.

ವೇಣುನಾದ ಗೈಯುತ್ತಿರುವ ಗೊಲ್ಲ, ತನ್ಮಯದಿಂದ ಅವನನ್ನು ಆಲಿಸುತ್ತಿರುವ ತರು-ಕರು, ಗಿರಿಗಳ ಚಿತ್ರ ಈ ಚೆಲುವಿಗೆ ಮತ್ತೂ ಶೋಭೆಯನ್ನೀರುತ್ತಿದೆ.

ಕುವೆಂಪು ಅವರು The Evening West ಎಂಬ ಶೀರ್ಷಿಕೆಯ ಕವನದಲ್ಲಿ ವರ್ಣಿಸುವ ಸುಂದರ ದೃಶ್ಯ ನಿಜವಾಗಿಯೂ ಚೇತೋಹಾರಿಯಾಗಿದೆ ಮತ್ತು ಅತ್ಯದ್ಭುತವಾಗಿದೆ. ಕವಿ ಸೂರ್ಯಾಸ್ತ ಅಥವ ಸಂಜೆಯನ್ನು ಈ ಕವನದಲ್ಲಿ ಹೀಗೆ ಬಣ್ಣಿಸುತ್ತಿದ್ದಾರೆ–

"Behold the cloud-crossed disc of flame
And the ray-built fleecy way!
The crimson splendor doth proclaim
The glory of the decay.
'Stop here, dear Friend.' We pause spell-bound,
Almost like statues on the ground!"[78]

ಕವಿ ಕುವೆಂಪು ಅವರು ನಿಸರ್ಗಾನುಭವವನ್ನು ದೈವೀಕರಣಗೊಳಿಸುವ ರೀತಿಯೇ ಮನೋಜ್ಞವಾದಂತದ್ದು. ಶಿಖರದಿಂದ ಸ್ವಚ್ಛವಾಗಿ ಸೂರ್ಯ ಮುಳುಗುವುದನ್ನು ಕಂಡಾಗ ಚಿನ್ನದ ಬುಗುರಿಯಂತೆ, ಸುತ್ತಲೂ ಕಂಡಂತೆ ನಿಗಿ–ನಿಗಿ ಹೊಳೆಯುವ ಆ ಸೂರ್ಯ ಆನಂತರ ಮಿಂಚಿನ ಓಟದಂತೆ ಕ್ಷಣ ಮಾತ್ರದಲ್ಲಿ ಮಾಯವಾದಾಗ ಸುತ್ತಲೂ ಆಗುವ ಆ ಮಸುಕಿನ ಬಣ್ಣದಲ್ಲೂ ಬೆಳಗು ಬೈಗುಳ ನೋಟ ರೋಮಾಂಚನವಾದದ್ದು.

ಮಹಾಕವಿ ವರ್ಡ್ಸ್‌ವರ್ತ್‌ನ It is a Beauteous Evening ಎಂಬ ಕವನವು ಕುವೆಂಪು ಅವರ The Evening West ಎಂಬ ಕವನಕ್ಕೆ ಒಂದು ಉದಾಹರಣೆಯಾಗಿದೆ.

"It is a beauteous evening, calm and free,
The holy time is quite as a Nun
Breathless with adoration; the broad sun
Is sinking down in its tranquility;
The gentleness of heaven broods o'er the sea"[79]

ಈ ಮೇಲಿನ ಕವಿತೆಯಲ್ಲಿ, ಕವಿ ವರ್ಡ್ಸ್‌ವರ್ತ್ ಸಂಜೆಯನ್ನು, ಅದು ಒಂದು ಪವಿತ್ರವಾದ ಸಮಯವೆಂದು ಉದ್ಘೋಷಿಸುತ್ತಾ, ಸೂರ್ಯಾಸ್ತವನ್ನು ಒಬ್ಬ ಧಾರ್ಮಿಕ ಗುರುವಿಗೆ ಹೋಲಿಸುತ್ತಾ

ಆ ಗುರುವು ಧ್ಯಾನಸ್ಥಿತಿಯಿಂದ ಯೋಗನಿದ್ರೆಗೆ ನಿಧಾನಗತಿಯಲ್ಲಿ ಜಾರುತ್ತಿದ್ದಾನೆ ಎಂದು ಸುಂದರವಾಗಿ ಬಣ್ಣಿಸಿದ್ದಾನೆ. ಸಮುದ್ರ ತೀರದ ಸೂರ್ಯಾಸ್ತವನ್ನು ಹಾಗೇ ನೋಡುತ್ತಿದ್ದ ನಮ್ಮ ಕಣ್ಣುಗಳೇ ಧನ್ಯ. ಅದು ಯಾವ ಸ್ವರ್ಗಾನುಭವಕ್ಕೆ ಕಡಿಮೆಯಿಲ್ಲ ಎಂದು ಹೇಳುತ್ತಿದ್ದಾನೆ.

ಕವಿ ಕುವೆಂಪು ಅವರು, ಒಂದು ಬಿರು ಬೇಸಿಗೆಯ ಬೇಗೆಯನ್ನು ತಾಳಲಾರದೆ, ಅಂದಿನ ರಾತ್ರಿ ತಮ್ಮ ಕೊಠಡಿಯ ತಾರಸಿಯ ಮೇಲೆ ತಂಪುಗಾಳಿ ಸೇವನೆಗೆಂದು ಮಲಗಿಕೊಂಡು ಅಂದಿನ ಇರುಳಿನ ಸವಿಯನ್ನು ಸವಿಯುತ್ತಾ, ೭.೪.೧೯೨೪ರಲ್ಲಿ The Beauty of Night ಎಂಬ ಕವನವನ್ನು ರಚಿಸಿದ್ದಾರೆ.

"The hushed heaven sleeps upon my breast
And a ocean of silence roars;
And heaven's sweet breath is at its rest
On some imaginary shores.
All seem to be in a land of dreams
Where every breath breaths golden themes.

The stars, like fallen spring-time flowers
On some sweet and glorious morn
After a night of gentle showers
The inspiring green that adorn,
Are spread o'er the mirror-blue of heaven,
As if from the earth reflected and driven!"[80]

ಆಕಾಶದಲ್ಲಿ ಮಿನುಗುತ್ತಿರುವ ನಕ್ಷತ್ರಗಳನ್ನು ನೋಡುತ್ತಾ, ನಿಸರ್ಗ ಮತ್ತು ದೈವತ್ವ ಈ ಎರಡೂ ಅಂಶಗಳನ್ನು ತಮ್ಮ ಮನದೊಳಗೆ ತುಂಬಿಕೊಂಡು ಶಿಶು ತಾಯಿಯ ಹತ್ತಿರ ಸಂಭೋಧಿಸುವ ಹಾಗೆ, ತನ್ನ ಮನದಾಳದ ಮಾತನ್ನು ಬಹಳ ಮುಕ್ತವಾಗಿ ಧ್ಯಾನಿಸುತ್ತಾ ಹೀಗೆನ್ನುತ್ತಿದ್ದಾರೆ– ನಾನೊಬ್ಬ ದಂಗೆಯೆದ್ದ ಕೂಸು, ಏನೇ ಇದ್ದರೂ ನೀನು ನನ್ನ ತಾಯಿ. ನಿನ್ನ ಮೇಲೆ ನನಗೆ ತುಂಬಾ ಅಕ್ಕರೆ. ನಾನು ಎಷ್ಟೇ ತಪ್ಪುಗಳನ್ನು ಮಾಡಿದರೂ ನೀನು ನನ್ನನ್ನು ಕೈಬಿಡದೇ ಕ್ಷಮಿಸುತ್ತಿಯ ಎಂಬ ಭರವಸೆ ಇದೆ. ನೀನು ನನ್ನ ತಪ್ಪುಗಳಿಗೆ ಏನೇ ಶಿಕ್ಷೆಯನ್ನು ಕೊಡಲು ಅದು ಮುದ್ದಾಟದ ಒಂದು ರೂಪವೆಂದೇ ಭಾವಿಸುತ್ತೇನೆ ಎಂದು ಹೇಳಿದ್ದಾರೆ.

ಕುವೆಂಪು ಅವರ ಆರಂಭಿಕ ಕವನಗಳನ್ನು ಕುರಿತಂತೆ ಒಂದು ವಿಚಾರವನ್ನು ಗಮನಿಸಬಹುದು. ಅವರು ಹಲವು ಕವನಗಳನ್ನು ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ಬರೆದಿದ್ದಾರೆ. ಈ ಬಗೆಯಲ್ಲಿ ಒಂದೇ ವಸ್ತು ಮತ್ತು ಶೀರ್ಷಿಕೆಗಳನ್ನೊಳಗೊಂಡ ಕನ್ನಡ ಮತ್ತು ಇಂಗ್ಲೀಷ್ ಕವನಗಳಲ್ಲೆ ಕೆಲವು ವಿಷಯ ಮತ್ತು ನಿರೂಪಣೆಯಲ್ಲಿ ಸಾಮ್ಯತೆಯಿಂದ ಕೂಡಿವೆ. ಹಾಗೆಯೇ

ಕೆಲವು ಒಟ್ಟಂದದಲ್ಲಿ ವೈದೃಶ್ಯದಿಂದಲೂ ಕೂಡಿವೆ. ಹಾಗೆ ಎರಡು ಭಾಷೆಗಳ ಕವನಗಳ ವಸ್ತು ಒಂದೇ ಆಗಿದ್ದು ಅವು ಹೋಲಿಕೆಗೆ ದಕ್ಕುವಂತಿವೆ. ಕುವೆಂಪು ಹೀಗೆ ಒಂದೇ ವಸ್ತುವನ್ನು ಒಳಗೊಂಡ ಕವನಗಳನ್ನು ಎರಡು ಭಾಷೆಗಳಲ್ಲಿ ಯಾಕೆ ಬರೆದರು ಎಂಬ ಪ್ರಶ್ನೆ ಮೂಡುತ್ತದೆ. ಈ ಪ್ರಯೋಗಕ್ಕೆ ಕಾರಣ ಆಗಿನ್ನೂ ತರುಣಾವಸ್ಥೆಯಲ್ಲಿದ್ದ ಕವಿಯಲ್ಲಿ ಆತನ ಭಾಷೆಯ ಬಳಕೆಯ ಪಟುತ್ವದ ಬಗ್ಗೆ ಸಂಶಯಗಳು ಇದ್ದವೇ ಎನ್ನುವುದೊಂದು; ಆಗ ತಾನೇ ತಾನು ದುಡಿಸಿಕೊಳ್ಳುತ್ತಿದ್ದ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿನ ತಮ್ಮ ಸಾಮರ್ಥ್ಯವನ್ನು ಹೋಲಿಕೆಯ ಮೂಲಕ ಕಂಡುಕೊಳ್ಳುವ ಸಲುವಾಗಿ ಈ ಪ್ರಯೋಗ ಮಾಡಿದ್ದಾರೆಯೆ ಎನ್ನುವುದು ಇನ್ನೊಂದು. ಇಂಥ ಪ್ರಯೋಗದಲ್ಲಿ ಕಂಡು ಬರುವುದೇನೆಂದರೆ ಇಂಗ್ಲೀಷ್ ಕವನಗಳ ಅವತರಣಿಕೆಯಾಗಿ ಕನ್ನಡ ಕವನಗಳು ರೂಪುಗೊಂಡಿರುವುದು. ಅದು ಪ್ರತಿಯಾಗಿಯೂ ಇರಬಹುದು. ಇದರ ಜೊತೆಗೆ ಒಂದೇ ವಸ್ತುವಿನ ಎರಡು ಕನ್ನಡ ಕವಿತೆಗಳನ್ನು ಕವಿ ಬರೆದಿರುವುದೂ ಉಂಟು.

ಈ ದೃಷ್ಟಿಯಿಂದ ನೋಡುವುದಾದರೆ 'ನೆನಪಿನ ದೋಣಿಯಲ್ಲಿ' ಇರುವ ಕವನಗಳಲ್ಲಿ ಕವಿಯ ಈ ಬಗೆಯ ದ್ವಿಭಾಷಾ ಪ್ರಯೋಗ ಹೆಚ್ಚು. ಇಲ್ಲಿಯೇ ಅವರಲ್ಲಿನ ಭಾಷಾ ಸಾಮರ್ಥ್ಯ ಹಾಗೂ ಕಾವ್ಯ ನಿರ್ಮಿತಿಯ ಪ್ರತಿಭೆಗಳನ್ನು ಗುರುತಿಸಬಹುದು. ಅಲ್ಲದೆ ಒಂದೇ ವಸ್ತು ಕಾಲಾನಂತರದಲ್ಲಿ ಕವಿಯಲ್ಲೇ ಯಾವ ರೀತಿಯ ಬದಲಾವಣೆಗಳಿಗೆ ಒಳಗಾಗುತ್ತದೆ ಎಂಬ ಸೂಕ್ಷ್ಮವೂ ಓದುಗರ ಗ್ರಹಿಕೆಗೆ ಬರುತ್ತದೆ. ಹಾಗೆ ಯಾವುದೇ ಬದಲಾವಣೆಗೂ ಪಕ್ಕಾಗದೆ, ಕವಿಯಲ್ಲೇ ಸ್ಥಿರವಾದ ಮೌಲ್ಯವನ್ನು ಉಳಿಸಿಕೊಂಡಿರುವಂಥ ಕವನಗಳೂ ಉಂಟು. ಈ ವಿಚಾರಕ್ಕೆ ಸಂಬಂಧಿಸಿದಂತೆ ಕೆಲವು ಕವಿತೆಗಳನ್ನು ವಿಶ್ಲೇಷಣೆಗೆ ಒಳಪಡಿಸಬಹುದು:

ದನಗಾಹಿ – ಇದು ೧೯.೯.೧೯೨೩ರಲ್ಲಿ ರಚಿಸಿದ ಕವನ ಕವಿತೆಯ ಸಾಲುಗಳು ಹೀಗಿವೆ:

"He smiles and he sings all alone
Beneath the banyan tree;
The cadence of his bamboo tone
Swells sweetly O'er the lea"[81]

ಈ ಕವಿತೆಯ ಕನ್ನಡ ಅನುವಾದ ಹೀಗಿದೆ–

"ನಸುನಗುವನು ಹಾಡುವನು ಏಕಾಂಗಿ
ಆ ಆಲದ ಮರದ ಅಡಿಯಲ್ಲಿ
ಅವನ ಇನಿಗೊಳಲುಲಿಯು
ಮೈದುಂಬುವುದು ಆ ಮೇವ ಬಯಲಿನಲ್ಲಿ"

ಈ ಕವಿತೆಯ ಇನ್ನೊಂದು ಚರಣ–

"The withered leaves do whirl and dance
In the hot summer noon;

And the wild hilly sweet expanse
Doth quiver to his tune"[82]

ಇದರ ಕನ್ನಡಾನುವಾದವನ್ನು ನೋಡೋಣ

"ಉದುರಿದೆಲೆಗಳು ಸುಳಿಸುತ್ತಿ ಕುಣಿಯುವುವು
ಉರಿ ಬೇಸಗೆಯ ನಡುಹಗಲಿನಲ್ಲಿ
ಮೇರೆವರಿಯದ ವಿಸ್ತಾರ ಗಿರಿಸಾಲು
ಕಂಪಿಸುವುದು ಅವನ ದನಿಗೆ"

ಅದೇ ದಿನ ರಚಿಸಿದ ಮತ್ತೊಂದು ಕವನ ದನಗಾಹಿಯ ಕೊಳಲು,

"Traveller, a moment pause,
Pass not this dale with haste;
Or listen as you slowly pass,
The flute of this jovial waste"

(ಕ್ಷಣ ನಿಲ್ಲು ಓ ಪಯಣಿಗನೇ
ಈ ಹೊಳೆಯನವಸರಿಸಿ ದಾಟಬೇಡ
ಸರಸದಲಿ ಹರಿಯುತಿಹ ಈ ಜಲರಾಶಿಯ
ಕಲರವವ ಕಿವಿದುಂಬಿಸಿಕೊ ಮೆಲ್ಲ ಸಾಗುತ್ತಲೇ)

"Sweetly does the cadence creep
Into the weary ears;
See, how does the forest sleep
The rustic flute as it hears!"[83]

(ದಣಿದ ಕಿವಿಗಳಲಿ ಮಧುರ ಅಲೆಅಲೆಯಾಗಿ
ಈ ಸವಿಗಾನ ಹರಿಯುತಿಹುದು
ನೋಡೆಂತು ನಿದ್ರಾವಶವಾಗಿದೆ ಕಾನು
ಆಲಿಸುತ ಆ ಗ್ರಾಮ್ಯಗೊಳಲ ನಾದವನ್ನು)

ಈ ಎರಡೂ ಕವನಗಳು ಹಳ್ಳಿಯ ದನಗಾಹಿಯೊಬ್ಬನ ಸ್ವಚ್ಛಂದ ಲಹರಿಯನ್ನೂ ಆತನ ಸಂತೋಷವನ್ನೂ ವ್ಯಕ್ತಪಡಿಸುತ್ತವೆ.

ಇದೇ ದನಗಾಹಿಯ ವಸ್ತುವನ್ನುಳ್ಳ ಕನ್ನಡ ಕವನವನ್ನು ೧೯೩೪ರಲ್ಲಿ ಕುವೆಂಪು ರಚಿಸುತ್ತಾರೆ. ಈ ಕವನದ ಶೀರ್ಷಿಕೆ The Cowherd ಮತ್ತು The Cowherd's Flute ಎಂದು. ಆದರೆ

ಇದರ ಅನುಭವವೇ ಬೇರೆ. ಮೇಲಿನ ಇಂಗ್ಲೀಷ್ ಕವನಗಳಲ್ಲಿ, ದನಗಾಹಿ ಮತ್ತವನ ಕೊಳಲಿನ ಸಂತೋಷ ವ್ಯಕ್ತವಾಗಿದ್ದು, ನಗರ ಬದುಕಿನ ಸುಳಿವೆಯೂ ಇಲ್ಲ. ಈ ಕವನಗಳನ್ನು ಬರೆಯುವ ಕಾಲಕ್ಕೆ ಕುವೆಂಪು ಅವರಿಗೆ ನಗರವಾಸ, ಅದರ ಯಾಂತ್ರಿಕ ಜೀವನದ ಪರಿಚಯವಿತ್ತು.. ನಗರದ ಗಿಜಿಗುಡುವ, ಏಕತಾನದ ಬದುಕಿನ ಅನುಭವವಿದೆ. ಇಂಥ ಪರಿಸರದಲ್ಲಿ ದನಗಾಹಿಯ ಹಳ್ಳಿಗಾಡಿನ ಆ ಸ್ವಚ್ಛಂದ ಸುಖವನ್ನು ಬಯಸಿ ರಚಿಸಿದ ಕವನವಿದು.

"ಮೌನವಿರೆ ಬಾನಿನಲಿ, ನಿದ್ದೆಯಿರೆ ಬನಗಳಲಿ,
ಬಿಸಿಲು ಮಲಗಿರೆ ಹಸುರು ಬಯಲಿನಲಿ;

ಮಲಗಿ ತರುಗಳು ಮೆಲುಕು ಮೇಯುತಿರೆ; ಕೊಳಲೂದಿ
ನಲಿಯುವೆಲೆ ದನಗಾಹಿ, ತಿರೆಯೊಳಿಲ್ಲಿ
ನಿನಗೆ ದೊರಕುವ ಸೊಗದ ಮೈಮೆಯನು ಬಲ್ಲೆಯೇನು?
ನೀನರಿಯದಿರಬಹುದು! ನಾನದನು ತಿಳಿಯೆನೇನು?
ನಡೆ ಪಟ್ಟಣಕೆ; ಅಲ್ಲಿ ಸಂತೆಗಳ ನಡುವೆ ಸಿಕ್ಕಿ
ನೀನುಳಿದ ಸೊಗವ ನೆನೆದಳಬಹುದು ಬಿಕ್ಕಿ ಬಿಕ್ಕಿ!"[೮೪]

ದನಗಾಹಿಯೊಬ್ಬನ ಸಂತೋಷದ ಕ್ಷಣಗಳು ನಗರದಲ್ಲಿ ಸಿಗದಿರುವ ನಿರಾಸೆ ಈ ಮೇಲಿನ ಕವನದಲ್ಲಿ ವ್ಯಕ್ತವಾಗಿದೆ. ಇದಕ್ಕೆ ಮತ್ತೊಂದು ಉದಾಹರಣೆಯಾಗಿ–

೨೫.೨.೧೯೨೯ರಲ್ಲಿ ರಚಿಸಿದ ಕವನ ಕೊಳಲು ಸಂಕಲನದ ಗೊಲ್ಲನ ಭಿನ್ನಹ.

"ಸಿರಿಬನದೇವಿಯ ಬೊಕ್ಕಸದಿಂದ
ಕದ್ದವು ಕೆಲವಿವು ಹಾಡುಗಳು
ಸುಂದರ ಋತುಗಳ ಸಿರಿಗೈಯಿಂದ
ಸುಲಿದವು ಕೆಲವಿವು ಹಾಡುಗಳು!"[೮೫]

ಸಿರಿಬನದೇವಿಯ ಸೌಂದರ್ಯವೇ ಕುವೆಂಪು ಕಾವ್ಯಕ್ಕೆ ಪ್ರೇರಣೆಯಾದ ಮೇಲೆ ಅಲ್ಲಿ ನಿಸರ್ಗ ವರ್ಣನೆಗೇನು ಕಡಿಮೆ? ಹಾಗಾಗಿಯೇ ಕುವೆಂಪು ಕಾವ್ಯದಲ್ಲಿ ಕಾಡು, ಕಣಿವೆ, ಬೆಟ್ಟ, ಗುಡ್ಡ, ಜಲಪಾತಗಳು ಜೀವ ತಾಳಿ ಕಣ್ಣೆದುರು ನಿಲ್ಲುತ್ತವೆ! ಅಂತಹ ಸಿರಿಬನದೇವಿಯ ಸೌಂದರ್ಯಕ್ಕೆ ಮನಸೋತ ಕವಿ ಆಕೆಯ ಶ್ರೀಮಂತ ಸೌಂದರ್ಯದಿಂದ ಪ್ರೇರಿತರಾಗಿ ಅದನ್ನು ಅದಮ್ಯವಾಗಿ ಸವಿಯುತ್ತಾ ಅಂತಹ ಸೊಬಗಿನ ವರ್ಣನೆಗೆ ನಿಲ್ಲುತ್ತಾರೆ. ಅವರ ಕವಿತೆಗಳಲ್ಲಿ ಹಕ್ಕಿಗಳ ಚಿಲಿಪಿಲಿ ಹಾಡಿಗೆ ಇಲ್ಲಿ ಹೂಬಳ್ಳಿಗಳು ನರ್ತನವಾಡುತ್ತವೆ. ಕವನಗಳನ್ನು ಅವರು ಆಕಾಶದ ವಿಶಾಲ ಆಟದ ಬಯಲಿನಲ್ಲಿ ಚುಕ್ಕಿ, ಚಂದ್ರಮರು ಚಿನ್ನಾಟವಾಡುತ್ತಾರೆ. ಕಾಮನಬಿಲ್ಲನ್ನೇ ದಾರವಾಗಿಸಿ, ಮಂಜಿನ ಮಣಿಗಳನ್ನೇ ಮುತ್ತಾಗಿ ಪೋಣಿಸಿ ನೇಯಲಾದ ಸಿರಿಕಾವ್ಯ ಕುವೆಂಪು ಅವರದು.

ಅದಕ್ಕೆಂದೇ ಅವು ಅಷ್ಟು ಸಮೃದ್ಧವಾಗಿ ಓದುಗನಿಗೆ ಸೌಂದರ್ಯಾನುಭೂತಿಯ ರಸಾನುಭವವನ್ನು ಉಣಬಡಿಸುತ್ತಿರುವುದು.

ಕುವೆಂಪು ಅವರಿಗೆ ಪ್ರಕೃತಿ ಅಪರೂಪದ ಅತಿಥಿಯಲ್ಲ, ನಿತ್ಯದ ಗೆಳೆತನಕ್ಕೆ ಒದಗಿ ಬರುವ ಆತ್ಮಸಂಗಾತಿ. ಸಾಮಾನ್ಯವಾದ ರಸಿಕ ಜೀವಿ ಮನಸೂರೆಗೊಳ್ಳುವ ಸೃಷ್ಟಿಯ ಚೆಲುವಿನೆದುರು ಅದು ಇರುಳಾಗಲಿ, ಹಗಲಾಗಲಿ ಯಾವುದೇ ಹೊತ್ತಲ್ಲಾದರೂ ಮಾತು ಕಳೆದುಕೊಂಡು ಮೂಕನಾಗಿಬಿಡುತ್ತಾನೆ. ಅದನ್ನು ಅವನು ಮನದುಂಬಿ ಅನುಭವಿಸಬಲ್ಲನೇ ಹೊರತು ಆ ಸೌಂದರ್ಯಾನುಭವವನ್ನು ಬಣ್ಣಿಸಿ ಹೇಳಲಾರ. ಆದರೆ ಕವಿ ಹೀಗೆ ಮಾಡುವಂತಿಲ್ಲ. ತನ್ನ ಅನುಭವವನ್ನು ಸಮಾನಮನಸ್ಕ ಸಹೃದಯರೊಡನೆ ಹಂಚಿಕೊಂಡಲ್ಲದೆ ಕವಿ ಮನಸ್ಸಿಗೆ ತೃಪ್ತಿಯಿರದು. ಈ ಕೆಳಗಿನ ಕವಿತೆ ಅದಕ್ಕೆ ಒಂದು ಉದಾಹರಣೆಯಾಗಿದೆ, In the Silent Night ಎಂಬ ಶೀರ್ಷಿಕೆಯ ಕವಿತೆ ೧೯೨೩ರಲ್ಲಿ ರಚಿಸಲಾಗಿದ್ದು.

"Methinks, I hear a voice
That whistles in the wind;
It's not the cry of boys
Nor voices of Fancy's mind.
What may it be?
What sings to me?
A silent beauty lulls
The pond, the lake and hills;
The pond, the lake and hills;
The wind is calm
With heavenly balm;
A visionary song
Silently flows along;
It is the voice of skies
The tune of heavenly sighs."[86]

ಅದು ಸದ್ದಿಲ್ಲದ ರಾತ್ರಿ, ಗಾಢ ಮೌನವು ಎಲ್ಲಾ ಕಡೆಯಲ್ಲು ಕವಿದಿದೆ. ಯಾವ ನೆರಳೂ ಇಲ್ಲ. ಪಿಸುಮಾತಿಲ್ಲ. ಒಂದಿಷ್ಟೂ ಗದ್ದಲವಿಲ್ಲ. ಎಲ್ಲವೂ ಸ್ತಬ್ದ, ಸರ್‍ರನೇ ಒಂದು ಸದ್ದು ಹಾಯ್ದುಬಿಟ್ಟಿದೆ ಕವಿ ಮನಕ್ಕೆ. ಅ ಸದ್ದು ಕವಿಯ ಮನದೊಳಕ್ಕೆ ಎಲ್ಲಿಲ್ಲದ ಆನಂದವನ್ನು ತೇಲಿಸಿಬಿಟ್ಟಿದೆ, ಅದು ಸಾಮಾನ್ಯವಾದ ಸದ್ದಲ್ಲ; ಅವರಿಗೆ ಅರಿವಾಗುತ್ತಿಲ್ಲ. It's not the cry of boys, Nor voices of Fancy's mind. What may it be? What sings to me?

ಅದು ದೈವದ ಒಳದನಿ. ಆ ಸದ್ದು ಸ್ವರ್ಗದ ಮುಲಾಮು ಎಂಬಂತೆ ಅವರಿಗೆ ತೋರುತ್ತಿದೆ. ಅದನ್ನು ತುಂಬಿಕೊಂಡು ಅವರ ಮನ ಎತ್ತೆತ್ತಲೋ ಹರಿದಾಡುತ್ತಿದೆ.

Exhortations ಎಂಬ ಕವಿತೆ ೨೬.೧೨.೧೯೨೩ರಲ್ಲಿ ರಚಿಸಿದ್ದು. ಕ್ರಿಸ್‌ಮಸ್ ರಜಕ್ಕೆ ಮನೆಗೆ ಹೋಗಿದ್ದಾಗ Exhortations on revisiting the woody mountains of my native ghats ಎಂಬ ವಿವರಣೆಯೊಡನೆ ರಚಿತವಾದ ಇಂಗ್ಲಿಷ್ ಕವನವಿದು. ಕವನದಲ್ಲಿ ಹುಟ್ಟಿದೂರಿನ ಕುರಿತ ಅಕ್ಕರೆ ಮತ್ತು ಚೆಲುವಿನ ಕುರಿತ ಮಮತೆಯ ವಿವರಣೆಯಿದ್ದು ಆ ಚೆಲುವು ಕವಿಯ ಬಾಲ್ಯದ ಮುಗ್ಧತೆಯ ಮೇಲೆ ಮಾಡಿದ ಪರಿಣಾಮವನ್ನು ತರುವಾಯದ ತಾರುಣ್ಯೋತ್ತರ ಕಾಲದಲ್ಲಿ ಮೈಸೂರಿನಿಂದ ಮರಳಿ ಬಂದವನ ಮೇಲೆ ಮಾಡಿದ ಪರಿಣಾಮದೊಡನೆ ಹೋಲಿಸುವ ಪ್ರಯತ್ನವನ್ನು ಕವಿತೆ ಮಾಡುತ್ತದೆ.

"Once more, O ye enchanting hills, once more
Ye meadows green that thread the silvery shore,
Ye flowery lawns of saffrons glorious wild,
Ye many a nature's child,
I come to brush the long seen dappled green
Not with an eye less keen
Than when from mount to mead with nimble feet
I leapt; - a troublesome companion sweet...

Sweet Nature then with me communed, not I
With her, for I careless of pleasures high,
And so filled with excess disdained her claims
Like a young child inflated in his games..."[87]

ಹಿಂದೆ ಕಂಡ ನೋಟದಲ್ಲಿ ಕವಿ ಈ ನೋಟಗಳನ್ನು ಕಾಣುತ್ತಿಲ್ಲ. Not with an eye less keen ಈಗ ನೋಡುತ್ತಿರುವುದು. ಬಂದಿರುವುದು ಅಚ್ಚರಿಯ ಬಿರುಗಣ್ಣ ತೆರೆದಲ್ಲ. I come to brush the long seen dappled green. ಅಂದರೆ ಅವರೀಗ young child inflated in his games. ಈ ಭಾವದ ಮುಂದುವರಿಕೆ ಅತ್ಯಂತ ಇಂಟೆನ್ಸ್ ಆಗಿದೆ ಮತ್ತು ನಿಸರ್ಗದ ಜೊತೆಗೆ ಕುವೆಂಪು ಅವರ ಆತ್ಮ ಸಂಗಾತದ ಅನುಭಾವ ಕಣ್ಣು ತೆರೆಯುವಂತೆ ಭಾಸವಾಗುತ್ತಿದೆ. Sweet Nature then with me communed, not i with her ಇಲ್ಲಿನ ಅದರೊಂದಿಗೆ ನಾನಲ್ಲ ಎಂಬ ಮಾತು ಗಮನಾರ್ಹ. ನಿಸರ್ಗವು ಆಮೋದಕವಲ್ಲ ಎಂಬ ಅರಿವು ಮೂಡಿದ ಕುವೆಂಪು ಇಲ್ಲಿ ಪ್ರತ್ಯಕ್ಷರಾಗುತ್ತಾರೆ. ಬಾಲ್ಯದಲ್ಲಿ ಪ್ರಕೃತಿಯ ಚೆಲುವಿಗೆ ವಿಸ್ಮಯರಾಗಿದ್ದ ಕುವೆಂಪು ತಾರುಣ್ಯದಲ್ಲಿ ಅದನ್ನು ಕುರಿತ ಭಾವವನ್ನು ಬೇರೆಯೇ ಆದ

ನೋಟದಲ್ಲಿ ಕಟ್ಟುತ್ತಾರೆ. ಆದರೆ ಎಳೆಬಾಳಿನ ಆ ಆನಂದಗಳನ್ನು ಈಗ ಭಿನ್ನ ಭಾವದಲ್ಲಿ ಗ್ರಹಿಸುತ್ತಿದ್ದಾರಷ್ಟೇ. ಆದರೆ ಅದು ಅವರ ಭಾವಭಿತ್ತಿಯಲ್ಲಿ ಕಟುವಾಗಿ ನೆಲೆನಿಂತಿರುವುದಾಗಿದೆ.

"Ye pleasures of my infancy, ye rills,
Ye mountains, meadow, rivers, lakes and hills!
(Ah thou sweet catalogue of thrilling names!)
In whom my infancy discerned its games,...

Who pleased me then, whose thoughts now gladden me
As if I once more gain sweet Infancy..."[88]

ಪಾಶ್ಚಾತ್ಯ ಕವಿಗಳ, ಅದರಲ್ಲಿಯೂ ಮುಖ್ಯವಾಗಿ ವರ್ಡ್ಸ್‌ವರ್ತ್ ಮಹಾಕವಿಯ ಕೃತಿಗಳ ಪರಿಚಯದಿಂದುಂಟಾದ ಪ್ರಕೃತಿ ಸೌಂದರ್ಯಾಸ್ವಾದನೆಯ ಪ್ರಭಾವವೂ, ಹಾಗೆಯೆ ಸ್ವಾಮಿ ವಿವೇಕಾನಂದರ ಮತ್ತು ಉಪನಿಷತ್ತಿನ ಋಷಿಗಳ ದೃಷ್ಟಿಯ ಪರಿಚಯದಿಂದ ನಿಸರ್ಗ ವಿಭವವನ್ನು ದಾರ್ಶನಿಕವಾಗಿ ಅವಲೋಕಿಸುವ ಒಂದು ಅಭಿರುಚಿಯೂ ಇಲ್ಲಿ ಗೋಚರಿಸುತ್ತದೆ. ಕವಿಗೆ ಮೈಸೂರಿನಿಂದ ತಮ್ಮ ತವರಿಗೆ ಮರಳಿರುವ ಸಂತಸದ ಜೊತೆಯಲ್ಲಿ, ತಮ್ಮ ಬಾಲ್ಯವ ಮರುಕಳಿಸುವ ಮತ್ತು ಅವರ ಬಾಲ್ಯದ ಆಟಿಕೆಗಳಂತಿದ್ದ ವನ, ಜಲ, ಬನ ರಾಶಿಯ ಮಡಿಲಲ್ಲಿ ಕುಳಿತು ಆ ತಾಯಿಯ ಬೆಚ್ಚಗಿನ ಆಲಿಂಗನದ ಮನಮೋಹಕ ಆನಂದಕ್ಕೆ ತಮ್ಮನ್ನು ತಾವೇ ಒಡ್ಡಿಕೊಂಡು ಅದರ ಜೊತೆ ಆಟವಾಡುವ ಹಾಗೆ ಭಾವಿಸುತ್ತಾರೆ.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೬೨೮, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨. ಅದೇ, ಪುಟ ೬೫೮.

೩. ಅದೇ, ಪುಟ ೬೩೯.

೪. ಅದೇ, ಪುಟ ೭೦೩.

೫. ಅದೇ, ಪುಟ ೬೨೭.

೬. ಅದೇ, ಪುಟ ೬೩೩.

೭. ಅದೇ, ಪುಟ ೬೬೭.

೮. ಕುವೆಂಪು ; ಮಲೆನಾಡಿನ ಚಿತ್ರಗಳು ; ಪುಟ ೧೮, ಏಳನೆಯ ಮುದ್ರಣ ೧೯೭೨, ಉದಯರವಿ ಪ್ರಕಾಶನ ವಾಣೀವಿಲಾಸಪುರಂ, ಮೈಸೂರು–೨.

೯. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೬೫೮, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೦. ಅದೇ, ಪುಟ ೬೩೯–೬೪೦.

೧೧. ಅದೇ, ಪುಟ ೬೪೧.

೧೨. ಅದೇ, ಪುಟ ೪೨.

೧೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೦೩, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೪. ಅದೇ, ಪುಟ ೯೦೩.

೧೫. ಅದೇ, ಪುಟ ೯೦೩.

೧೬. ಅದೇ, ಪುಟ ೯೦೩.

೧೭. ಅದೇ, ಪುಟ ೯೦೩.

೧೮. ಅದೇ, ಪುಟ ೯೦೩.

೧೯. ಅದೇ, ಪುಟ ೯೦೩.

೨೦. ಅದೇ, ಪುಟ ೯೦೩.

೨೧. ಅದೇ, ಪುಟ ೯೦೩.

೨೨. ಅದೇ, ಪುಟ ೯೦೩.

೨೩. ಅದೇ, ಪುಟ ೯೦೩.

೨೪. ಅದೇ, ಪುಟ ೯೦೩.

೨೫. ಅದೇ, ಪುಟ ೯೦೩.

೨೬. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೩೭೪, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೦೪, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೮. ಅದೇ, ಪುಟ ೯೦೪.

೨೯. ಅದೇ, ಪುಟ ೯೦೪.

೩೦. ಅದೇ, ಪುಟ ೯೦೪.

೩೧. ಅದೇ, ಪುಟ ೯೦೪.

೩೨. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೭೩೩, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೩೩. William Wordsworth ; William Wordsworth Poems (Classic Poetry Series) ; Page 997, Poemhunter.com – The World's Poetry Archive (2004)

೩೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೩೦೬, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೩೫. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೪೯೫–೪೯೬, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೩೬. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೧೦, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೩೭. ಅದೇ, ಪುಟ ೯೧೭.

೩೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೬೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೩೯. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೧೮೩–೧೮೪, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೪೦. ಅದೇ, ಪುಟ ೫೪೭.

೪೧. ಅದೇ, ಪುಟ ೫೪೮.

೪೨. ಅದೇ, ಪುಟ ೨೨೩.

೪೩. ಅದೇ, ಪುಟ ೫೮೪–೫೮೫.

೪೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೦೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೪೫. ಅದೇ, ಪುಟ ೧೦೧೩.

೪೬. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೭೦೩, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೪೭. ಅದೇ, ಪುಟ ೬೮೭.

೪೮. ನಾಗರಾಜ್.ಡಿ.ಆರ್ ; ಶಕ್ತಿ ಶಾರದೆಯ ಮೇಳ; ಪುಟ ೮೯-೯೧, ಅಕ್ಷರ ಪ್ರಕಾಶನ, ೨೦೦೩, ಮೊದಲ ಮುದ್ರಣ ೧೯೮೭.

೪೯. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೬೪೬, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೫೦. ಅದೇ, ಪುಟ ೬೫೧.

೫೧. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೧೦೫೩, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೫೨. ಅದೇ, ಪುಟ ೧೦೮೬.

೫೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೫೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೫೪. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೫೧೯, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೫೫. ಅದೇ, ಪುಟ ೯೨೫.

೫೬. ಅದೇ, ಪುಟ ೯೨೫-೯೨೬.

೫೭. ಅದೇ, ಪುಟ ೯೨೬.

೫೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಪುಟ ೯೬೦, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೫೯. ಅದೇ, ಪುಟ ೯೫೯.

೬೦. ದ.ರಾ.ಬೇಂದ್ರೆ ; ಅಂಬಿಕಾತನಯದತ್ತ ಸಮಗ್ರ ಕಾವ್ಯ ವಿಕಾಸ ಸಂ-೩; ಸಂ. ವಾಮನ ಬೇಂದ್ರೆ, ಪುಟ ೨೮೯ (ನಾದಲೀಲೆ), ವರಕವಿ ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ.

೬೧. ಅದೇ, ಪುಟ ೨೯೦.

೬೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೫೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೬೩. William Wordsworth ; Intimations of Immortality ; Page 40 , First Edition 1884, D Lothrop co, Boston.

೬೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೪೦, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೬೫. William Butler Yeats ; The Collected Poems ; Page 358 , 1889-1939.

೬೬. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೪೫, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೬೭. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೪೭೧-೪೭೨, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೬೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ ೧, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೬೯೧, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೬೯. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೬೮೬–೬೮೭, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೭೦. ಅದೇ, ಪುಟ ೩೨೧–೩೨೨.

೭೧. ಅದೇ, ಪುಟ ೭೨೭–೭೨೮.

೭೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೭೮ , ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೭೩. ಅದೇ, ಪುಟ ೯೭೮.

೭೪. ಅದೇ, ಪುಟ ೧೦೨೭.

೭೫. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ ೧, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೪, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೭೬. ಅದೇ, ಪುಟ ೯೪.

೭೭. ಅದೇ, ಪುಟ ೯೪.

೭೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೮೨, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೭೯. Byrd Howell Granger ; Romantic traces in the Ecclesiastical Sonnets of William Wordsworth (Thesis Submitted on 1952), Page 66, University of Arizona.

೮೦. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೨೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೮೧. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೨೦೪–೨೦೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೮೨. ಅದೇ, ಪುಟ ೨೦೫.

೮೩. ಅದೇ, ಪುಟ ೨೦೫–೨೦೬.

೮೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೩೧೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೮೫. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೮೬. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೨೦೯, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೮೭. ಅದೇ, ಪುಟ ೨೨೬.

೮೮. ಅದೇ, ಪುಟ ೨೨೬–೨೨೭.

* * * * *

## ೪.೨. ದೈವದ ಪರಿಕಲ್ಪನೆ

ದೈವ ಮತ್ತು ದೈವದ ಪರಿಕಲ್ಪನೆಯನ್ನು ಕುರಿತಂತೆ ಕುವೆಂಪು ಅವರು ತಮ್ಮ ಪ್ರಕೃತಿ ಗೀತೆಗಳಲ್ಲಿ ಚರ್ಚಿಸಿರುವಷ್ಟು ಬಹುಶಃ ನವೋದಯದ ಮತ್ತಾವ ಕವಿಯೂ ಚರ್ಚಿಸಿಲ್ಲವೆಂದು ಕಾಣುತ್ತದೆ. ಕುವೆಂಪುವಿನ ಪ್ರಕೃತಿ ದರ್ಶನದ ಪ್ರಾಥಮಿಕ ನೆಲೆ ದೈವೀ ಪರಿವರ್ತನೆ. ಕುವೆಂಪು ಅವರ ಕೃತಿಗಳನ್ನು ಓದಿದ ನಂತರ ದೇವರ ಬಗೆಗೆ ಅವರ ನಿಲುವೇನೆಂಬುದು ಖಚಿತವಾಗಿ ತಿಳಿಯುತ್ತದೆ. ಅವರಿಗೆ ವೇದೋಪನಿಷತ್ತುಗಳ ವಿಚಾರಗಳ ಅರಿವಿತ್ತು. ಭಾರತೀಯ ದರ್ಶನಗಳನ್ನು ಅವರು ಮನನ ಮಾಡಿಕೊಂಡಿದ್ದರು. ಪ್ರಾಚ್ಯ ಪಾಶ್ಚಾತ್ಯ ತತ್ವಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರು. ಅರವಿಂದರ ದರ್ಶನದಲ್ಲಿ ಮುಳುಗೆದ್ದಿರುವ ಅವರು ದೈವ ಮತ್ತು ಮಾನವ ಸಂಬಂಧವನ್ನು ನೂತನ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವರ ಪ್ರಕೃತಿ ಗೀತೆಗಳೆಲ್ಲ ದರ್ಶನಾತ್ಮಕವಾಗಿವೆ, ಭಗವಂತನ ಮುಖಕ್ಕೆ ಹಿಡಿದ ಕನ್ನಡಿಗಳಾಗಿವೆ. ಒಂದು ಕಡೆ ಪ್ರಕೃತಿ ಸೌಂದರ್ಯೋಪಾಸನೆ ಮತ್ತೊಂದು ಕಡೆ ಆತ್ಮವಿಚಾರ ಬಾಲ್ಯದಿಂದ ಅವರಲ್ಲಿ ರಕ್ತಗತವಾಗಿ ಬಂದಿರುವ ಸಂಗತಿಗಳಾಗಿವೆ. ಅವರ ಈ ಮನೋಧರ್ಮ ಅವರ ಕಾವ್ಯಗಳಲ್ಲೆಲ್ಲ ಪಸರಿಸಿದೆ. ದಾರ್ಶನಿಕ ಕವಿಗಳಲ್ಲಿ ಕಾಣಬಹುದಾದ ಮನಸ್ಸಿನ ತುಯ್ದಾಟ, ಸಂದೇಹ, ತರ್ಕ, ಜಿಜ್ಞಾಸೆ, ಅನುಭಾವ ಇವು ಅವರ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿವೆ. ತಾನೆಲ್ಲಿಂದ ಬಂದದ್ದು? ಹೋಗುವುದೆಲ್ಲಿಗೆ? ಎಷ್ಟು ಜನ್ಮಗಳನ್ನು ಹಿಂದಿಕ್ಕಿದ್ದಾಯಿತು? ತಾನು ಸೇರುವ ಊರು ಎಲ್ಲಿದೆ? ಎಂದು ಪ್ರತಿಯೊಬ್ಬ ಅನುಭಾವಿ ಸ್ವಯಂ ಪ್ರಶ್ನಿಸಿಕೊಳ್ಳುತ್ತಾನಷ್ಟೆ. ಸುತ್ತಮುತ್ತಣ ಜನ ಮರುಳನೆಂದು ಕರೆಯ ಬಹುದಾದ ಕಾರಣದಿಂದ ಜನನಿಯೇ ಗುರುವೆಂದು ಹೇಳಲು ನಾಚಿಕೊಳ್ಳುತ್ತಾನೆ. ಪೊಡವಿಗಧಿಪತಿ ಹೃದಯದೊಳಿರುವಾಗ ಬಡವನೆಂದು ಹೇಳಿಕೊಳ್ಳಲು ಹಿಂದೆ ಮುಂದೆ ನೋಡುತ್ತಾನೆ. ಈ ಮಹಾವಿಶ್ವದ ರಹಸ್ಯವನ್ನರಿಯಲು ಹೋರಾಟ ನಡೆಸುವುದಕ್ಕಿಂತ ಭಕ್ತಿ ಜಲನಿಧಿಯಲ್ಲಿ ಮುಳುಗುವುದು ಮೇಲು. ಭಗವಂತನ ಸ್ವರೂಪವನ್ನು ತಿಳಿಯುವುದು ಕಷ್ಟ ನಾಕಾರ ತತ್ವವನ್ನನುಭವಿಸಿ ನೋಡಿದರೆ ಸಾಕಾರನಾಗಿ ತೋರುತ್ತಾನೆ. ಸಾವು ನೋವುಗಳೇಕೆಂಬುದೆ ಗೊತ್ತಿಲ್ಲ; ಏಳುಬೀಳುಗಳ ರಹಸ್ಯ ಅರ್ಥವಾಗಿಲ್ಲ. ಕವಲೊಡೆದ ಹಾದಿ, ಕತ್ತಲೆ ಕವಿದಿದೆ, ಕರೆಯುವ ದನಿಯಿಲ್ಲ, ದಾರಿತೋರೆಂದು ಗುರುವನ್ನು ಕೇಳಿಕೊಳ್ಳಬೇಕು. ನಾವಿಕ ಕೈಬಿಟ್ಟರೆ ಗತಿಯಾರು ಗುರುವೇ ನಾವಿಕ. "ನಿನ್ನಾತ್ಮದಾನಂದ ನನ್ನದಾಗಿರಲಿ; ನಿನ್ನೊಳಿರುವಾ ಶಾಂತಿ ನನ್ನೆದೆಗೆ ಬರಲಿ" ಎಂದವನಲ್ಲಿ ಪ್ರಾರ್ಥನೆ ಸಲ್ಲಿಸಬೇಕಾಗಿದೆ.

ಪ್ರಕೃತಿ ಎನ್ನುವುದು ಕುವೆಂಪುವಿಗೆ ಪರಮನಾರಾಧನೆ. ಪ್ರಕೃತಿಯ ಚೆಲುವೆಲ್ಲವೂ ದೈವದ ಸಾಕ್ಷಾತ್ಕಾರವೇ. ಅಂತಿಮ ಹಂತದಲ್ಲಿ ಪ್ರಕೃತಿ ಸೌಂದರ್ಯ ಮತ್ತು ದೈವಗಳೆರಡರ ನಡುವೆ ಭಿನ್ನತೆಯನ್ನು ಕಾಣುವುದಿಲ್ಲ ಕುವೆಂಪು. ಇಂದ್ರಿಯಾಗಮ್ಯ ಅನುಭವವನ್ನು ದಾಟಿ ದೈವೀ ಅನುಭವದ ಕಡೆಗೆ ಕುವೆಂಪು ನಡೆಯುತ್ತಾರೆ. ಕೆಲವೊಮ್ಮೆ ಸಾಂಪ್ರದಾಯಿಕ ಧಾರ್ಮಿಕ ಪರಿಭಾಷೆಯಲ್ಲೇ ಅನುಭವದ ಮಂಡನೆ ನಡೆದರೂ, ಒಟ್ಟಾರೆಯಾಗಿ ಆ ಅನುಭವ ಅದಕ್ಕಿಂತ

ಸಾಕಷ್ಟು ಭಿನ್ನವಾದದ್ದು. ಕೆಲವೊಮ್ಮೆಯಂತೂ ನೇರವಾಗಿ ದೈವೀ ಅನುಭವದ ಪರಿಭಾಷೆಯಲ್ಲಿ ಕವನ ಪ್ರಾರಂಭವಾಗುತ್ತದೆ. ಅಲ್ಲೇ ಕೊನೆಯಾಗುತ್ತದೆ. ಕುವೆಂಪು ಅವರ ಪ್ರಸಿದ್ಧ ಕವನಗಳಲ್ಲೊಂದಾದ **'ಬಾ ಫಾಲ್ಗುಣ ರವಿ ದರ್ಶನಕೆ'** ಕವನವನ್ನೇ ಈ ಮಾತಿಗೆ ಆಧಾರವಾಗಿ ವಿವರಿಸಬಹುದು. ಇಡೀ ಕವನದ ತುಂಬ ಸುಂದರವಾದ ಒಂದು ಪೂಜಾವಿಧಿಯನ್ನು ಒಳಗೊಂಡಿದೆ.

"ಶಿವಮಂದಿರಸಮ ವನಸುಂದರ ಸುಮಶೃಂಗಾರದಗಿರಿಶೃಂಗಕೆ ಬಾ
ಬಾ ಫಾಲ್ಗುಣ ರವಿ ದರ್ಶನಕೆ!

ಕುಂಕುಮ ಧೂಳಿಯದಿಕ್ತಟವೇದಿಯೊಳೋಕುಳಿಯಲಿ ಮಿಂದೇಳುವನು
ಕೋಟಿ ವಿಹಂಗಮ ಮಂಗಲರವ ರಸನೈವೇದ್ಯಕೆ ಮುದತಾಳುವನು,
ಚಿನ್ನದ ಚೆಂಡನೆ ಮೂಡುವನು, ಹೊನ್ನನೆ ಹೊಯ್‌ನೀರ್ ನೀಡುವನು,
ಸೃಷ್ಟಿಯ ಹೃದಯಕೆ ಪ್ರಾಣಾಗ್ನಿಯ ಹೊಳೆ ಹರಿಯಿಸಿ ರವಿ ದಯಮಾಡುವನು!"[೧]

ಈ ರವಿದರ್ಶನದ ಅಂತಿಮ ಉದ್ದೇಶವನ್ನು, ಸಾರ್ಥಕತೆಯನ್ನು ಕಡೆಯ ಸಾಲುಗಳಲ್ಲಿ ಕುವೆಂಪು ಮಂಡಿಸುತ್ತಾರೆ. ಈ ಸಾಲುಗಳು ಕುವೆಂಪು ಅವರ ಅನೇಕ ಪ್ರಾತಿನಿಧಿಕ ನಿಲುವುಗಳನ್ನು ಒಳಗೊಂಡಿದೆ. ಅವರು ಹೇಳುತ್ತಾರೆ.

"ವರ್ಣನದಿಂದ್ರಿಯ ನಂದನವನು ದಾಂಟುತ ದರ್ಶನ ಮುಕ್ತಿಯ ಸೇರಿ
ವ್ಯಕ್ತಿತೆ ಮೈಮರೆವುದು ಸೌಂದರ್ಯ ಸಮಾಧಿಯೊಳಾನಂದವ ಹೀರಿ;
ಸರ್ವೇಂದ್ರಿಯ ಸುಖನಿಧಿ ಅಲ್ಲಿ; ಸರ್ವಾತ್ಮನ ಸನ್ನಿಧಿ ಅಲ್ಲಿ;
ಸಕಲಾರಾಧನ ಸಾಧನಬೋಧನದನುಭವರಸ ತಾನಹುದಲ್ಲಿ!"[೨]

ಇಲ್ಲಿ ಉಳಿದ ಧಾರ್ಮಿಕ ಅನುಭವಗಳಲ್ಲಿ ಆದಂತೆ (ಅದರಲ್ಲಿಯೂ ಮುಖ್ಯವಾಗಿ ಭಾರತೀಯ ಧರ್ಮಗಳಲ್ಲಿ ಆದಂತೆ) ಇಂದ್ರಿಯಗಳ ನಿರಾಕರಣೆ ನಡೆದಿಲ್ಲ. ಇಂದ್ರಿಯಗಮ್ಯ ಅನುಭವಗಳನ್ನು ಕುರಿತಂತೆ ಅಪಾರ ಶ್ರದ್ಧೆ, ಪ್ರೀತಿ ಇದ್ದೂ, ಅದನ್ನು ದಾಟಿ ಹೋಗುವ ನಿಲುವನ್ನು ಕಾಣುತ್ತೇವೆ.

ಉನ್ಮತ್ತತೆ ಮತ್ತು ತನ್ಮಯತೆಗಳ ನಡುವೆ ಸಮೃದ್ಧವಾಗಿ ಬೆಳೆಯುವ ನಿಸರ್ಗಾನುಭಾವದ ಅಂತಿಮ ಗುರಿ ಸಾಂಸ್ಥಿಕ ಧರ್ಮದ ನಿರಾಕರಣೆ. ಈ ಸಾಂಸ್ಥಿಕ ಧರ್ಮದ ನಿರಾಕರಣೆ ಕುವೆಂಪು ಅವರ ಅತ್ಯಂತ ಮುಖ್ಯ ವೈಚಾರಿಕ ನಿಲುವುಗಳಲ್ಲಿ ಒಂದು ಎಂಬುದನ್ನು ಈ ಸಂದರ್ಭದಲ್ಲಿ ನಾವು ಗಮನಕ್ಕೆ ತಂದುಕೊಳ್ಳಬೇಕು. ಈ ನಿಸರ್ಗಾನುಭಾವ ಎಂದೂ ಸಾಂಸ್ಥಿಕ ಧರ್ಮದ ಶ್ರೇಣೀಕರಣಗಳಿಗೆ, ಗುಡಿಗೆ, ಮಠಕ್ಕೆ, ನಿತ್ಯಾಚಾರದ ನೀರಸ ಪ್ರಕ್ರಿಯೆಗಳಿಗೆ ಬೆಲೆ ಕೊಡುವುದಿಲ್ಲ. ಈ ಎಲ್ಲಾ ಸಂಗತಿಗಳು ಅಂತಿಮವಾಗಿ ಅನುಭಾವದ ತೀವ್ರತೆಗೆ, ಪಾವಿತ್ರ್ಯತೆಗೆ ಆಘಾತ ಮಾಡುವಂಥದ್ದೆ. ಆದ್ದರಿಂದಲೇ ಕುವೆಂಪು ಕಾವ್ಯದ ನಿಸರ್ಗಾನುಭವಕ್ಕೆ ಸುಧಾರಕನೊಬ್ಬನ ತೀವ್ರ ರೊಚ್ಚಿನ ಆಯಾಮ ಕೂಡಾ ಮೂಡುತ್ತದೆ. 'ಹೂವು ದೇವರು' ಕವನವನ್ನು ಅಧ್ಯಯನ ಮಾಡಿದರೆ ಈ ಮಾತು ಸ್ಪಷ್ಟವಾಗುತ್ತದೆ. 'ಕೋಗಿಲೆ ಮತ್ತು ಸೋವಿಯತ್ ರಷ್ಯ' ಕವನ

ಸಂಕಲನದೊಳಗೆ ಬರುವ ಕವನ, ಒಟ್ಟಾರೆಯಾಗಿ ಆ ಕವನ ಸಂಕಲನದ ಪ್ರಗತಿಪರ ಧೋರಣೆಗೆ ಅನುಗುಣವಾಗಿಯೇ ಇದೆ.

"ಚೆಲುವೇ ದೇವರು, ಒಲವೇ ಪೂಜೆ;
ಎಂಬುದೆ ರಸಜೀವನದದೋಜೆ.
ಕಲೆಯನು ಮೀರುವ ಸಾಧನೆಯಿಲ್ಲ;
ಕಲೆಯೊಳೆ ಪುರುಷಾರ್ಥಗಳೆಲ್ಲ;
ಕಲೆಯಿರದೆದೆಗೆ-ಏನಿಲ್ಲ!"[೩]

ನಂತರ ಮುಂದಿನ ಸಾಲುಗಳಲ್ಲಿ ತನ್ನ ವಿಶಿಷ್ಟ ಧೋರಣೆಯನ್ನು ಕವನ ಹೇಳಿಬಿಡುತ್ತದೆ. ನಂತರ ಮುಂದಿನ ಸಾಲುಗಳಲ್ಲಿ ನಿಧಾನಕ್ಕೆ ಪ್ರಕೃತಿಯ ಸೊಬಗುಗಳನ್ನು ಬಣ್ಣಿಸುತ್ತಾ ಹೋಗುತ್ತದೆ. ಒಂದು ಪ್ರಶಾಂತತೆಯ ವಾತಾವರಣವನ್ನು ಈ ಸಾಲುಗಳು ನಿರ್ಮಿಸುತ್ತವೆ.

"ಪ್ರಾತಃಕಾಲದ ಹೊಂಬಿಸಿಲಲ್ಲಿ
ಸ್ವರ್ಗವೆ ಭೂಮಿಗೆ ಇಳಿದಿದೆ ಇಲ್ಲಿ;
ಕಂಗಳೆ ತೇಲಿವೆ ಬಣ್ಣದ ಕಡಲಲಿ.
ಕೆಂಪಾಗಿಹ ನೆತ್ತರು ನನ್ನೊಡಲಲಿ
ಕಣ್ಣೀಂಟುವ ಬಣ್ಣವನೇ ತಾಳಿ
ಮಿನು ವಂಚುತ್ತಿದೆ ಕಣ್ಣನೆ ಹೋಲಿ."[೪]

ಆದರೆ ಇದ್ದಕ್ಕಿದ್ದಂತೆ ಕವನಕ್ಕೆ ನಾಟಕೀಯ ತೀವ್ರತೆ ಬರುತ್ತದೆ. ನಿಸರ್ಗಾನುಭವದ ಪ್ರಶಾಂತತೆಗೆ, ತೀವ್ರ ರೊಚ್ಚಿನ ಆಯಾಮವೂ ಮೂಡುತ್ತದೆ.

"ಹೂ ಕುಯ್ಯಲು ಬಂದನು ಪೂಜಾರಿ;
ಹೂ ಬುಟ್ಟಿ ಅದೋ ಕೈಯಲ್ಲಿ!
ಹೂಗಳ ಚೆಲುವಿಗೆ ದೇವರೆ ಮಾರಿ?
ಪೂಜಾರಿಯೆ ಕಟುಕನೆ ಇಲ್ಲಿ?
ಹಕ್ಕಿಯ ಮರಿಗಳ ಕುತ್ತಿಗೆ ಮುರಿದು
ಬೇಡನು ಕೊಲ್ಲುವ ರೀತಿಯಲಿ
ಹೂಗಳ ತೊಟ್ಟನು ತಿರುಪ್ಪಿ ಹರಿದು
ಬುಟ್ಟಿಗೆ ಬಿಡುವನು 'ಪ್ರೀತಿಯಲಿ'"[೫]

ಹೋಗು ಹೋಗುತ್ತಾ ಕವನ ಇನ್ನೂ ತೀಕ್ಷ್ಣವಾಗಿ ಪೂಜಾರಿಯನ್ನು-ಸಾಂಸ್ಥಿಕ ಧರ್ಮದ ಪ್ರತಿನಿಧಿಯನ್ನು - ಟೀಕಿಸುತ್ತದೆ. ದೇವರು ಮಾರಿಯೋ ಏನೋ ಗೊತ್ತಿಲ್ಲ. ಆ ಕಲ್ಲು ವಿಗ್ರಹ ಹೂವು ಬೇಕೆಂದು ಪರದಾಡಿತೆ? ಇದು ಬೇಕು ಅದು ಬೇಡ ಎಂದು ಹೇಳಿತೆ? ಏನು

ಕೊಟ್ಟರೂ ಅದಕ್ಕೆ ತೃಪ್ತಿಯೆ ಪುಷ್ಪಾರ್ಚನೆ ಮಾಡಬೇಕೆಂದವನು ಪೂಜಾರಿ. ಮಾನವೀಯ ಗುಣಗಳಾದ ಕನಿಕರ ಅನುಕಂಪ ಸಹಾನುಭೂತಿಗಳಿಲ್ಲದವನು ಮಹಾ ರುದ್ರಾರ್ಚನೆ ಮಾಡಿಸಿದರೇನು? ಹೇಮಾಭಿಷೇಕ ಮಾಡಿಸಿದರೇನು? ಈ ಮೌಢ್ಯಪೂಜೆಗೆ ಪೂಜಾರಿ ಮಾತ್ರವಲ್ಲ, ಭಕ್ತ ಮಹಾಶಯನೂ ಕಾರಣ. ದೇವಾಲಯಕ್ಕೆ ಬರುವ ಆದಾಯದಲ್ಲಿ ಲಂಚಕೋರರ, ದರೋಡೆಗಾರರ, ಭ್ರಷ್ಟಾಚಾರಿಗಳ, ಕಪ್ಪು ಹಣಗಾರರ ಕಾಣಿಕೆಯೇ ಅತಿಶಯವಾದದ್ದೆಂದು ತೋರುತ್ತದೆ. ವಿದ್ಯಾಸಂಸ್ಥೆಗಳಿಗೆ ಹಣ ಕೊಡಿ, ಬಡವಿದ್ಯಾರ್ಥಿಗಳಿಗೆ ದಾನ ಮಾಡಿಯೆಂದು ಕೇಳಿದರೆ ಒಂದು ಪೈಸೆ ಸಹ ಬಿಚ್ಚುವುದಿಲ್ಲ. ಮಾಡಿದ ಪಾಪ ಪರಿಹಾರವಾಗಲೆಂದು, ಬಡ ಮುದುಕಿಯ ಶಾಪ ತಪ್ಪಲೆಂದು ಅವರು ದೇವರ ಸೇವೆ ನಡಸುತ್ತಾರೆ. ಕಪಟ ಪೂಜಾರಿ ಮತ್ತು ತಟವಟದ ಹಣವಂತ ಇಬ್ಬರೂ ಮಹಾಪಾಪಿಗಳು, ಇಬ್ಬರೂ ದೇಶದ್ರೋಹಿಗಳು, ಆ ಬಗ್ಗೆ ಕುವೆಂಪು ಅವರು ಹೇಳುವುದೇನು?

ಕುವೆಂಪು ಅವರ ಸಾಂಸ್ಥಿಕ ಧರ್ಮದ ವಿರೋಧಿ ನಿಲುವಿನ ಮೂಲ ನೆಲೆಗಳನ್ನು ಮೇಲೆ ಉದಾಹರಿಸಿದ ಸಾಲುಗಳಲ್ಲಿ ಪತ್ತೆಹಚ್ಚಲು ಸಾಧ್ಯವಿದೆ. ಸಾಂಸ್ಥಿಕ ಧರ್ಮ ತನ್ನ ಜೀವನ ಕ್ರಮದಲ್ಲಿ ಬೆಳೆಸುವ ಶ್ರೇಣೀಕರಣಗಳಿಂದಾಗಿ, ಅನಿವಾರ್ಯ ನಿತ್ಯಾಚಾರಗಳಿಂದಾಗಿ ವಿಕಾಸಕ್ಕೆ ಅತ್ಯಗತ್ಯವಾದ ಆನಂದದ, ತನ್ಮಯತೆಯ ಸ್ಥಿತಿಗಳನ್ನು ಕರಗಿಸಿ ಬಿಡುತ್ತದೆ ಎಂಬ ನಿಲುವಿನಿಂದ ಕುವೆಂಪು ಅವರ ನಿಸರ್ಗ ಧಾರ್ಮಿಕ ಕವನಗಳು ಹುಟ್ಟುತ್ತದೆ. ಮೊದಲೇ ಹೇಳಿದ ಹಾಗೆ ಉನ್ಮತ್ತತೆ ಮತ್ತು ತನ್ಮಯತೆಗಳೇ ನಿಸರ್ಗಾನುಭಾವದ ಮೂಲ ನೆಲೆಗಳು.

ಕುವೆಂಪು ಅವರ ಈ ಕೆಳಗಿನ ಇಂಗ್ಲೀಷ್ ಕವನ ೧೩.೩.೧೯೨೫ರಲ್ಲಿ ರಚಿತವಾದ Wake me Up! ಈ ಕವನನ್ನು ಪುನರ್‌ನಿರ್ವಚನ ಮಾಡಿದಾಗ ಸಾಕಷ್ಟು ಅರ್ಥಗಳು ಹೊಳೆಯಿಸುತ್ತವೆ.

ಕುವೆಂಪು ಅವರು ಪ್ರಸ್ತುತ ಕವನವನ್ನು ಕುರಿತು– Wake me Up ಎಂಬುದು ಕೆಟ್ಟ ಕನಸು ಕಾಣುತ್ತಿರುವ ಮಗು ತನ್ನನ್ನು ಎಚ್ಚರಿಸುವಂತೆ ತಾಯಿಯನ್ನು ಬೇಡುತ್ತಿರುವ ಪ್ರತಿಮೆಯನ್ನು ನೈತಿಕ ಪತನದಿಂದ ತನ್ನನ್ನು ಮೇಲೆತ್ತುವಂತೆ ಜೀವವೊಂದು ದೇವನನ್ನು ಪ್ರಾರ್ಥಿಸುತ್ತಿದೆ.[೬]

"Wake me up from my dream,
Mother, wake me up,
Lest I should tremble and scream
And fall from thy lap!

Terrible scenes are passing
Before my dreaming eye;
Life's ocean-waves are tossing
My frail cradle high.

O wake me up, Mother,
Wake me from my dream;
Visions and phantoms mother:
O the blood-red gleam!"[7]

ಸೃಷ್ಟಿಕರ್ತೆಯಾದ ಜಗನ್ಮಾತೆಯನ್ನು ಕುರಿತು ಹೇಳುತ್ತಿದ್ದಾರೆ– ಜಗತ್ತಿನ ಎಲ್ಲಾ ನಿಯಮಗಳಿಗೂ, ವಿಧಿನಿಯಮಗಳಿಗೂ ಕಾರಣಕರ್ತಳು ಅವಳೆ, ನೆತ್ತರು ಕಣ್ಣಿಗೆರಚುವ ದುಃಸ್ವಪ್ನವಾಗಿದೆ ಇದರಿಂದ ನನ್ನನ್ನು ಜಾಗೃತಗೊಳಿಸು ಅದರಿಂದ ನನ್ನನೆಚ್ಚರಿಸು ತಾಯಿ. ಕುವೆಂಪು ಅವರ ಮೇಲೆ ಪ್ರಭಾವ ಬೀರಿದಂಥಹ ಟಾಲ್‌ಸ್ಟಾಯ್‌ನಂತವರು ೧೯೦೦ರಲ್ಲೇ ಮನುಷ್ಯನ ಬರ್ಬರತೆಯು ನಾಶವಾಗುವಂಥಹುದ್ದಲ್ಲ ಅದು, ಯುದ್ಧ ಮತ್ತು ರಾಷ್ಟ್ರೀಯತೆಗಳು ಮಾನವನನ್ನು ಹಿಂಸೆ, ಕ್ರೌರ್ಯದೆಡೆಗೆ ನೂಕುತ್ತಿವೆಯನ್ನುವುದರ ಬಗ್ಗೆ ಚಿಂತನೆ ಮಾಡಿದ್ದರು. ಆತರಹದ ಚಿಂತನೆಗಳನ್ನು ಕುವೆಂಪು ಅವರು ಸಹ ಜಗತ್ತಿನಲ್ಲಿ ನಡೆಯುತ್ತಿರುವ ಎಲ್ಲಾ ಬರ್ಬರತೆಗಳನ್ನು ನಾಗರಿಕರ ಮನಸ್ಸಿನ ದುಃಸ್ವಪ್ನವೆಂದು ಪರಿಭಾವಿಸುತ್ತಾರೆ. ಆ ದುಃಸ್ವಪ್ನದಿಂದ ಹೊರಬರಲು ಯತ್ನಿಸುತ್ತಿರುವ ಕುವೆಂಪು ಆ ಜಗನ್ಮಾತೆಯಲ್ಲಿ ಮೊರೆ ಹೋಗುತ್ತಿದ್ದಾರೆ. ಈ ಕವಿತೆಯಲ್ಲಿರುವ ನಾಲ್ಕು ಸಾಲುಗಳಲ್ಲಿರುವ ಪ್ರತಿ ಸಾಲಿನ ಪ್ರತಿ ಪದಗಳೂ ಕೂಡ ಅರ್ಥಗರ್ಭಿತವಾಗಿದೆ.

ಈ ಸಾಲುಗಳು ನಿತ್ಯನಾರಕಿ ಎಂಬ ಪರಿಕಲ್ಪನೆಯನ್ನು ಪ್ರತಿಪಾಧಿಸುವ ಹಾಗಿದೆ. ಅಂದರೆ ಮನುಷ್ಯ ಭೂಮಿಯನ್ನು ನಿತ್ಯ ನಾರಕಿಯಾನ್ನಾಗಿಸಿರುವ ಭೂಮಿಯಲ್ಲಿ ಪ್ರತಿಯೊಬ್ಬ ಪ್ರಜ್ಞಾವಂತನ ಕಣ್ಣಿಗೂ ಕಾಣುವ ಕಡುನೆತ್ತರದ ಕನಸುಗಳು. ನಾನು ಕಣ್ಣು ಬಿಟ್ಟಿರುವ ಸಮಯದಲ್ಲಿಯೂ ಎಚ್ಚರದ ಸ್ಥಿಯಲ್ಲಿಯೂ ಸಹ ಮುಂದುವರಿಯುತ್ತಿದೆ.

ಕುವೆಂಪು ಅವರು ಇಲ್ಲಿ, ಕವಲೊಡೆದ ಹಾದಿ, ಕತ್ತಲೆ ಕವಿದಿದೆ, ಕರೆಯುವ ದನಿಯಿಲ್ಲ, ದಾರಿತೋರೆಂದು ಗುರುವನ್ನು ಕೇಳಿಕೊಳ್ಳಬೇಕು ಎಂದು ಬಿನ್ನಹಿಸುತ್ತಾ, ನಾವಿಕ ಕೈಬಿಟ್ಟರೆ ಗತಿಯಾರು, ಗುರುವೇ ನಾವಿಕ. "ನಿನ್ನಾತ್ಮಾನಂದ ನನ್ನದಾಗಿರಲಿ; ನಿನ್ನೊಳಿರುವಾ ಶಾಂತಿ ನನ್ನೆದೆಗೆ ಬರಲಿ"[೮] ಎಂದವನಲ್ಲಿ ಪ್ರಾರ್ಥನೆ ಸಲ್ಲಿಸಬೇಕಾಗಿದೆ ಎಂದಿದ್ದಾರೆ.

"ಬಾಳನು ಬೈಯದೆ ಎದೆಗುಂದದಳದೆ
ಭೂಮಿಯು ನಿನ್ನ ಮಡಿಲೆಂದು ತಿಳಿದು
ಋತದಿಂದ ಬಾಳಿ ಮೃತ್ಯುವನಣಕಿಪ
ಶಾಂತಿಯ ಬಲವೆನಗಿರಲಿ ಸದಾ"[೯]

ಎಂದು ಜಗದಂಬೆಯ ಬಳಿ ಬಿನ್ನಯಿಸಿಕೊಳ್ಳಬೇಕಾಗಿದೆ. ದೇಹವೇ ಗುಡಿ, ಬುದ್ಧಿಯೇ ದೀಪ. ಚಿಂತೆಯೇ ತೈಲ, ಕಂಬನಿಯೇ ಜಲ, ಕರ್ಮ ಸುಖ ದುಃಖಗಳೇ ಹಣ್ಣುಗಳು, "ಕಣ್ಣು ಕಿವಿ ಮೂಗು ಬಾಯಿಂದ್ರಿಯಗಳು ದುಡಿದ ಹೂವುಗಳ ಮಾಲೆಯನು ನೆಯ್ದು ಬರುವೆ". ಇದು ಪೂಜಿಸುವ ವಿಧಾನ. ಒಂದು ಕ್ಷಣವಾದರೂ ಭಗವಂತನ ಸಂಗವನ್ನು ತೊರೆಯಲಾಗದು.

ಎರಗಲಿ ಕುಣಿಯಲಿ ಬೀಳಲಿ ಏಳಲಿ, ತಾಯಿಯ ಅಂಕ ಪೀಠದ ಮೇಲೆ ಎಲ್ಲರೂ ಸುಭದ್ರ, ಪಾತಾಳಕ್ಕಿಳಿದಾಗ ಮೇಲೆತ್ತ ಬೇಕಾದವಳೂ ಅವಳೇ ದೋಷ ದೌರ್ಬಲ್ಯಗಳು ಮಾನವ ಸಹಜವಾದ ಪ್ರಕೃತಿಗಳು. ಆಗ

"ಗರ್ವದಿಂದೆನ್ನ ಶಿರ ನಿಮಿರಿ, ದೇವ,
ನಿನ್ನ ಗದೆಯಾಘಾತ ಬಂದೆರಗಲಿ
ದುಃಖದಿಂದೆನ್ನೆದೆಯು ನೊಂದು ಮೊರೆಯಿಡೆ, ಗುರುವ,
ನಿನ್ನೊಲ್ಮೆ ಬಂದದನು ಸಂತೈಸಲಿ"[೧೦]

ಎಂದು ಮೊರೆಯಿಡುತ್ತ, ಅವುಗಳ ಹೊಣೆ ಸಹ ದೇವರಿಗೆ ಬೇಕು. "ನಿನ್ನ ಆಶೀರ್ವಾದ ಪರಿವೇಶ ಮುತ್ತಿರಲಿ ನನ್ನನು ಸದಾ" "ಮನ್ಮನೋಮಂದಿರಕೆ, ಓ ಲೋಕ ಗುರುಗಳೆಲ್ಲ ಬನ್ನಿ!" "ನಿನ್ನಡಿದಾವರೆಯಲಿ ಹೂ ಕುಡಿಯುವ ಮರಿದುಂಬಿಯು ನಾನು" "ನಿನ್ನ ಕೈಲಿಹ ಕೈದು ನಾನು! ಕೆಲಸ ಮುಗಿಯಲು ತೊರೆವೆಯೇನು?" "ಈ ಮಾಯೆಯಿಂದೆನಗೆ ಬಿಡುತೆ ಬೇಕಮ್ಮಾ; ಈ ದೈನ್ಯವಿನ್ನು ಸಾಕಮ್ಮ" "ನರ್ತಿಸು ತಾಯೆ, ಅಜಜಾಯೆ, ಮಮಮಸ್ತಕ ನೀರೇಜದಲಿ!" "ಎಚ್ಚರಿಸು, ಬಾ ಗುರುವೆ, ಚಿಚ್ಚರಣ ಕಿರಣದಲಿ ಬಿಚ್ಚರಳುವಂತೆನ್ನ ಹೃದಯದಕ್ಷಿ". "ಓ ನನ್ನ ಚೇತನ, ಆಗು ನೀ ಅನಿಕೇತನ!" "ತನುವು ನಿನ್ನದು, ಮನವು ನಿನ್ನದು, ಎನ್ನ ಜೀವನಧನವು ನಿನ್ನದು" "ನಿನ್ನ ಪದಕಮಲದಲಿ ಮನಿ ಮಾಡಿರುವ ನನಗೆ ಆ ಸ್ಥಾನ ಈ ಸ್ಥಾನ ಎಲ್ಲ ವಾಸ್ಥಾನ!" "ಆಕ್ರಮಿಸು ಬಂದೆನ್ನ ಅಲ್ಪತ್ವಮಂ ಓ ಅನಂತ" "ಸೂತ್ರಧಾರಣಿ ನೀನು; ಪಾತ್ರಧಾರಿಯು ನಾನು; ಯಾವ ಪಾತ್ರವನ್ನಿತ್ತರೇನು ನೀನೆನಗೆ?" "ಇಲ್ಲಿ ಬಾ ಸಂಭವಿಸು ಇಂದೆನ್ನ ಹೃದಯದಲಿ ನಿತ್ಯವು ಅವತರಿಪ ಸತ್ಯಾವತಾರ!" "ಶಿವನ ಶಕ್ತಿ ನೀ, ವಿಷ್ಣು ಲಕ್ಷ್ಮಿ ನೀ ಚತುರ್ಮುಖನ ರಾಣಿ; ದಿವ್ಯ ವಿಜ್ಞಾನ ನನ್ನೊಳುದ್ಭವಿಸೆ ಮತಿಗಾಗಮಿಸು, ವಾಣಿ!" ಇದು ಕವಿಯ ದಿನ ನಿತ್ಯದ ಮೊರೆ; ಇದು ಎಲ್ಲರ ಮೊರೆಯಾದಾಗ ಲೋಕಕ್ಕೆ ಕ್ಷೇಮ ಪ್ರಾಪ್ತವಾಗುತ್ತದೆ. ಕವಿ ಕಲ್ಪನೆಯ ಭಗವಂತನ ಸ್ವರೂಪ ಈ ಗೀತೆಗಳಲ್ಲಿ

ಪ್ರಸ್ಫುಟವಾಗಿ ಗೋಚರವಾಗುತ್ತದೆ. ಇಲ್ಲಿಯ ಕವಿತಾ ಭಾಗಗಳನ್ನು ಪ್ರಾರ್ಥನಾ ಎಂಬ ಸಂಗ್ರಹದಿಂದ ಉದ್ಧರಿಸಿದೆ. ಕುವೆಂಪು ಅವರ ಆಧ್ಯಾತ್ಮಿಕ ಜೀವನಕ್ಕೆ ಇದೊಂದು ಕನ್ನಡಿ. ಭಗವಂತನನ್ನು ಪ್ರೇಮದ ಮೂಲಕ ಒಲಿಸಿಕೊಳ್ಳುವುದು ಸುಲಭ ಎಂಬುದು ಬಲ್ಲವರ ಮತ. ಈ ಮತ ಶ್ರದ್ಧೆಯಾದಾಗ ನಿಜದ ಅರಿವಾಗುತ್ತದೆ. ಈ ಅರಿವು ಬನದ ಗೋಪಾಲನ ಹಾಡಿನಲ್ಲಿ ಹೊರ ಹೊಮ್ಮುತ್ತದೆ. ನನ್ನ ಗೋಪಾಲ ಸಂಗ್ರಹದಿಂದ ಈ ಉದಾಹರಣೆ ಕೊಡಲಾಗಿದೆ–

"ತಿಳಿವಳಿಕೆಗೆ ನಾ ಸಿಲುಕೇ ಮನುಜಾ
ಒಲುಮೆಗೆ ಸೆರೆಯಾಗುವೆನು

ತಪಸಿಗಳೆನ್ನನು ಜ್ಞಾನದಿ ಮುಟ್ಟಲು
ಯುಗಯುಗಗಳು ಬಲು ಬಳಲುವರು
ಯೋಗಿಗಳೆನ್ನನು ಜನುಮ ಜನುಮದಲಿ
ಹೊಂದಲು ಸಾಧನೆ ಮಾಡುವರು"[೧೧]

ಮಾನವ ನಿರ್ವಿಕಲ್ಪ ಸಿದ್ಧಿಯನ್ನು ಅನುಭವಿಸಿದಂತೆಲ್ಲ, ಅವನು ವಿಜ್ಞಾನ ಹಾಗೂ ಆನಂದಮಯ ಕೋಶವನ್ನು ಮುಟ್ಟಿದಂತೆಲ್ಲ, ಸತ್ಯಂ ಶಿವಂ ಸುಂದರಂ, ಸಚ್ಚಿದಾನಂದ ಸ್ವರೂಪ ಎಂಬ ಮಾತುಗಳಿಂದ ದೇವರನ್ನು ವರ್ಣಿಸತೊಡಗಿದನು. ಹೂವು ಜಡ; ಅದರ ಸೌಂದರ್ಯ ಚೈತನ್ಯದಾಯಿ; ಕುರ್ಚಿ ಜಡ, ಅದನ್ನು ರೂಪಿಸಿದ ಭಾವನೆ ಕಲಾತ್ಮಕವಾದುದು; ಮೆಣಸು ಜಡ, ಅದರ ಗುಣ ಖಾರ. ಜಡದ ಹಿಂದಿರುವ ಚೈತನ್ಯ ಮುಖ್ಯ. ಅದು ಅವಿನಾಶಿ, ಸ್ವತಂತ್ರ ದೇವರು ಎಂಬ ಮಾತಿನ ಕಲ್ಪನೆ ವರ್ಣನೆಗಳೆರಡೂ ಕಷ್ಟವೇ. ಆದ್ದರಿಂದಲೇ ಅದನ್ನು (ಅವನನ್ನಲ್ಲ) ಅನಿರ್ವಚನೀಯ, ಅನಂತ, ಅಜಾತ, ಅನಾದಿ, ಸರ್ವಾಂತರ್ಯಾಮಿ, ಶಾಶ್ವತ, ಸರ್ವಶಕ್ತ, ಸರ್ವವ್ಯಾಪಿ, ನಿರ್ಗುಣ, ನಿರಾಕಾರ ಎಂದು ಸ್ತುತಿಸುತ್ತೇವೆ. ಈ ಸ್ತುತಿ ಹಲವರಿಗೆ ಎಟುಕವಂಥದಲ್ಲ. ಆದರೆ ಕಾಣದ್ದು, ಕೇಳದ್ದು ಮಾತ್ರ ದೇವರೆನ್ನುವ ಪಕ್ಷಕ್ಕೆ ನಮ್ಮ ಕಣ್ಣಿಗೆ ಕಾಣುವಂಥದ್ದೆಲ್ಲ ಸುಳ್ಳು, ಮಾಯೆ ಎನ್ನಬೇಕಾಗುತ್ತದೆ. ಶ್ರೀರಾಮ ಶ್ರೀ ಕೃಷ್ಣ ಮೊದಲಾದವರು ಸುಳ್ಳಾಗಬೇಕಾಗುತ್ತದೆ. ನಿರಾಕಾರಕ್ಕೆ ಸಾಕಾರತೆಯೊದಗಬಾರದು, ನಿರ್ಗುಣವಾಗಿದ್ದದ್ದು ಸಗುಣವಾಗಬಾರದು ಎಂದಿಲ್ಲ. ಕಣ್ಣಿಗೆ ಕಾಣಿಸದ ಅನಿಲಗಳು ಸೇರಿ ನೀರಾಗುವಂತೆ, ನೀರು ಘನಿಸಿ ಹಿಮಗಡ್ಡೆಯಾಗುವಂತೆ, ಪರಿಸರಕ್ಕನುಗುಣವಾಗಿ ನಿರಾಕಾರ ಸಾಕಾರವಾಗುತ್ತದೆ; ಸಾಕಾರವಾದಾಗ ಗುಣಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಸಾಕಾರತೆ ಸಾಮಾನ್ಯ ನಿಗರ್ಥವಾಗುತ್ತದೆ. ಈ ಸಾಕಾರತೆ ನಾನಾ ರೂಪಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಜೇಡಿಮಣ್ಣಿನಿಂದ ಆನೆ, ಇಲಿ, ಗಣೇಶ, ಮಹಿಷಾಸುರ, ಕುಂಬಳಕಾಯಿ, ಮೆಣಸಿನಕಾಯಿ ಯಾವುದು ಬೇಕಾದರೂ ಮಾಡಬಹುದು. ವಸ್ತು ಒಂದೆಯಾದರೂ ಆಕೃತಿಯಲ್ಲಿ ವ್ಯತ್ಯಾಸವುಂಟು. ಅಂತೆಯೇ ಜೀವಂತವಾದ ಆನೆಗೂ ಇಲಿಗೂ ಚೈತನ್ಯದ ದೃಷ್ಟಿಯಿಂದ ಅಂತರವಿರುತ್ತದೆ. ಶ್ರೀ ಮದ್ಭಗವದ್ಗೀತೆಯು ವಿಭೂತಿಯೋಗ ಸಚರಾಚರ ವಸ್ತುಗಳಲ್ಲಿಯ ವಿಭೂತಿತ್ವವನ್ನು ಗುರುತಿಸುತ್ತದೆ. ಎಲ್ಲೆಲ್ಲಿ ಭೂಮತ್ವ ಮಹತ್ವಗಳು ನಿಹಿತವಾಗಿವೆಯೋ ಅಲ್ಲೆಲ್ಲ ತನ್ನ ತೇಜಸ್ಸಿದೆಯೆಂದು ಕೃಷ್ಣ ಹೇಳುತ್ತಾನೆ. ಆದರೆ ಆನೆಗೂ ಇಲಿಗೂ ಹಿಂದಿರುವ ಸತ್ವ ಒಂದೇ ಎನ್ನುವುದನ್ನು ಮರೆಯಲಾಗದು.

ಕುವೆಂಪು ಅವರು ೫.೮.೧೯೨೪ರಲ್ಲಿ ರಚಿಸಿದ ಒಂದು ಇಂಗ್ಲಿಷ್ ಸಾನೆಟ್ಟು Radha And Krishna.

"Come, VISION, Come: Upon the moon-lit green
Where the flower-graced Zephyrs lave and blow
Beneath the waving Champak-bosom'd bough

Two radiant forms celestial are seen!
Are they Universe's King and Queen?
How beautiful their flower-hem'd garments flow
In the sweet breeze of the blushing dawn! each brow
Is crowned with freshest spring-time flowerets sheen!
Behold! like sun and moon in one embrace
They move, the mystic pair of paradise,
Their flower-knit garments trailing to and fro!
Majestic forms! See, the self-efflulgent rays
Hem radiant round their forms! Their sweet dark eyes
Pour peace and harmony : Go, VISION, go!"[12]

ಕುವೆಂಪು ಅವರಿಗೆ ತಮ್ಮ ಸೃಜನಶೀಲ ಸಾಹಿತ್ಯ ಪ್ರತಿಭೆಯ ಬಗೆಗೆ ಇದ್ದ ಆತ್ಮನಿಷ್ಠೆ, ಅವರ ಆಧ್ಯಾತ್ಮಿಕ ವಿಷಯದಲ್ಲೂ ಇರುತ್ತದೆ. ಕೃಷ್ಣನೊಂದಿಗಿನ ಅವರ ಸಂಬಂಧ ಸಖ್ಯಭಾವದೊಂದಿಗೆ ಸೋದರ ಭಾವವೂ ಇದ್ದದ್ದನ್ನು ಈ ಮಾತುಗಳು ಸ್ಪಷ್ಟಪಡಿಸುತ್ತವೆ.

ನನ್ನ ಕಣ್ಮುಂದೆ ಶ್ರೀ ಕೃಷ್ಣನ ರೂಪ ನಿಂತಿತು. ನನಗಿಂತಲೂ ಹೆಚ್ಚಿನ ಜ್ಞಾನಿಯಾಗಿ, ತನ್ನ ಸೋದರನನ್ನು ಉದ್ಧರಿಸಲು ಬಂದವನೆಂದು ಅವನನ್ನು ನನ್ನ ಸಹೋದರನೆಂದು ಕರೆದೆ. ನಾನು ಅಲ್ಪ, ನೀನು ಮಹಾನ್ ಎಂದು ಭಾವಿಸುವುದನ್ನು ನಾನು ಸಹಿಸಲಾರೆ, ನೀನು ಎಲ್ಲರಿಗಿಂತಲೂ ದೊಡ್ಡವನು ಅಂದುಕೊಂಡರೆ ನಾನೇಕೆ ಅಂದುಕೊಳ್ಳಬಾರದು?[೧೩]

ಹೀಗೆ, ಕುವೆಂಪು ಕೃಷ್ಣನೊಂದಿಗೆ ಮಾನಸಿಕವಾಗಿ ಸಂವಾದ ನಡೆಸುತ್ತಾರೆ. ಇದನ್ನು ಅವರು ತಮ್ಮ ಕವನದಲ್ಲೂ ಅಭಿವ್ಯಕ್ತಿಸುತ್ತಾರೆ. ನಿರ್ದೇಶನಕ್ಕೆ ೪.೩.೧೯೧೪ರಲ್ಲಿ ರಚಿಸಿದ Self and the universe ಎಂಬ ಸಾನೆಟ್ ಅನ್ನು ಗಮನಿಸಬಹುದು.

"How low! stand I not greater than a fly,
Nor wiser, worthier, nor more great in power!
But yet I feel, far mightier than the sky
In those vast dome all orbs and systems shine
And move incessant, I am, as a Lover:
For I am one with thee, Mother Divine!"[14]

ಕುವೆಂಪು ಅವರ ಬಾಲ್ಯದಲ್ಲಿ ಕೇವಲ ಅಣುರೂಪದಲ್ಲಿ ಪ್ರಾರಂಭವಾದ ಭಗವತ್ಪರವಾದ ಶ್ರದ್ಧಾ ನಿಷ್ಠೆಗಳು ಕಾಲಕ್ರಮೇಣ ಬೃಹದಾಕಾರವಾಗಿ ಬೆಳೆದು ವೃಕ್ಷ ರೂಪಿಯಾದವು. ಅವು ತನ್ನ ನಂಬಿಕೆಯ ದೇವರನ್ನು ಕಾಣಲು ದಶದಿಕ್ಕುಗಳಲ್ಲೂ ಹುಡುಕಿದವು. ಬೆಳ್ಳಕ್ಕಿಯ ಸಾಲಿನಲ್ಲಿ

ದೇವರ ರುಜುವನ್ನು ಕಂಡವು. ಶ್ರದ್ಧೆ ಅನುಭವವಾಗಿ ಅರುಹಾಗಿ ಅವರ ವ್ಯಕ್ತಿತ್ವವನ್ನೆಲ್ಲ ಅನನುಕರಣಿಯವಾದ ಶೈಲಿಯಲ್ಲಿ ೨.೧೧.೧೯೨೯ರಲ್ಲಿ ರಚಿಸಿರುವ **ನಾನು ಯಾರು** ಎಂಬ ಕವಿತೆಯ ಸಾಲುಗಳಲ್ಲಿ ವಿವರಿಸುತ್ತಾರೆ.

"ವಾಮನ ಸ್ವರೂಪದಲಿ ಬಂದೆ ನನ್ನದೆಗಂದು
ನನ್ನ ಬಾಳಿನಲಿ ಮೂರಡಿಯ ಬೇಡಿ;
ಭೀಮನಂದದಿ ಬೆಳೆದು ನಿಂತಿರುವೆ ನೀನಿಂದು
ನನ್ನ ಸರ್ವಸ್ವವನು ಸೂರೆಮಾಡಿ"[೧೫]

ಕುವೆಂಪು ಅವರು ಮೊದಲು ದಾರ್ಶನಿಕರು ಅನಂತರ ಕವಿಗಳು, ಅವರ ಆಧ್ಯಾತ್ಮ ಸಾಧನೆಯ ಅಂಗವಾಗಿ ನಡೆದದ್ದು ಅವರ ಕಾವ್ಯ ಸೃಷ್ಟಿಯೇನೋ ಎನ್ನಿಸುವಂತೆ ಬರೆದವರು ಅವರು. ಬೂಟಾಟಿಕೆಯಲ್ಲಿ ವಿಲಾಸ ಯುಕ್ತವಾದ ತೀರ್ಥಯಾತ್ರೆಯಲ್ಲಿ, ಮೌಢ್ಯಜನ್ಯವಾದ ಜಾತಕ ಪಂಚಾಗಗಳಲ್ಲಿ ಅವರಿಗೆ ನಂಬಿಕೆಯಿಲ್ಲ. ನಮ್ಮ ದೇಶದಲ್ಲಿರುವ ದೇವಾಲಯಗಳನ್ನು ಪೂಜಾರಿಗಳನ್ನು ಲೆಕ್ಕ ಹಾಕಿದರೆ ಎಷ್ಟು ಹಣ ಎಷ್ಟು ಮಾನವ ಕಾಲ ಪೋಲಾಗುತ್ತಿದೆಯೆಂಬುದು ವ್ಯಕ್ತವಾಗುತ್ತದೆ. ಈ ಪೂಜಾರಿಗಳಿಂದ ಜನರಲ್ಲಿ ಆಧ್ಯಾತ್ಮಿಕ ವಿದ್ಯುತ್ತಾದರೂ ಹರಿಯಿತೆ? ನಾಡಿನಲ್ಲಿ ಧಾರ್ಮಿಕ ವಾತಾವರಣ ಹಬ್ಬಿತೆ? ಅವರ ಸೋಮಾರಿತನ ಸಾಂಕ್ರಾಮಿಕವಾಗಲಿಲ್ಲವೆ? ಶ್ರೀರಾಮಕೃಷ್ಣ ಪರಮಹಂಸರಂಥ ಪೂಜಾರಿಗಳು ಎಷ್ಟು ಜನರಿದ್ದಾರೆ? ಅಂಥವರು ಹತ್ತು ಜನ ಸಿಕ್ಕಿದ್ದಾದರೆ ದೇವಾಲಯಗಳ ಅಸ್ತಿತ್ವ ಸಾರ್ಥಕವಾಗುತ್ತದೆ ಎಂಬುದರತ್ತ ಅವರ ಆಲೋಚನೆ ಹರಿಯುತ್ತಿತ್ತು. 'ನನಗೆ ಪುಣ್ಯ ಕ್ಷೇತ್ರ ಮತ್ತು ತೀರ್ಥಯಾತ್ರೆಗಳ ವಿಚಾರದಲ್ಲಿ ಅಷ್ಟೇನು ಶ್ರದ್ದೆಯಿದೆಯೆಂದೂ ಹೇಳಿಕೊಳ್ಳಲಾರೆ. ನಾನು ಪ್ರಜೆಯ ಸಲುವಾಗಿ ದೇವಸ್ಥಾನಗಳಿಗೆ ಕೂಡ ಹೋಗದೆ ಕಾಲು ಶತಮಾನಕ್ಕಿಂತಲೂ ಹೆಚ್ಚಾಯಿತೆಂದು ತೋರುತ್ತದೆ. ನಾನು ಜಾತಕ ಪಂಚಾಂಗ ಇತ್ಯಾದಿಗಳ ಕಡೆ ಎಂದೂ ಮುಖ ಹಾಕಿದವನಲ್ಲ. ನನಗೆ ರಾಹುಕಾಲ ಗುಳಿಕ ಕಾಲಗಳ ಅರ್ಥವೂ ಗೊತ್ತಿಲ್ಲ ......... ಹಿಂದೂ ಧರ್ಮಕ್ಕೆ ಸೇರಿದುವು ಎಂದು ಹೇಳಿಕೊಂಡು ಅನೇಕರು ಆಚರಿಸುವ ಕ್ರಿಯೆಗಳಲ್ಲಿ ಮುಕ್ಕಾಲು ಮೂರು ಹೆಚ್ಚು ಪಾಲಿಗೆ ನಾನು ಸ್ವಭಾವತಃ ವಿಮುಖವಾಗಿದ್ದೇನೆಂದು ತೋರುತ್ತದೆ (ಷಷ್ಟಿನಮನ ಪು.೮೧) ಎಂಬ ಮಾತುಗಳಲ್ಲಿ ಇದಕ್ಕೆ ಪುರಾವೆಯನ್ನು ಕಾಣಬಹುದು. ಕುಹಕ ಕಪಟಗಳನ್ನವರು ತೀಕ್ಷ್ಣವಾಗಿಸುತ್ತಾರೆ. ಕಂಡದ್ದನ್ನು ಕಂಡಂತೆ ಹೇಳಬೇಕು. ಹೇಳಲಿಲ್ಲ ಎಂದರೆ, ಸತ್ಯದ್ರೋಹಿಯಾಗಬೇಕಾಗುತ್ತದೆ. ಇಷ್ಟಕ್ಕೂ ಸತ್ಯವಾಕ್ಕಿಗೆ ಭಯ ಏಕೆ? ಎಂಬ ಅಂಶ ಅವರ ವ್ಯಕ್ತಿತ್ವದಲ್ಲಿ ಅಡಕವಾಗಿತ್ತೆಂದು ತೋರುತ್ತದೆ. ಅವರ ಟೀಕೆಯಲ್ಲಿ ಸತ್ಯನಿಷ್ಠುರತೆಯಿದೆ, ಸಮಾಜೋದ್ಧಾರದ ಪರವಾಗಿ ಅನುಕಂಪವಿದೆ. ನಮ್ಮ ಜನರನ್ನು ದಾರುಣ ದಾಸ್ಯಗಳ ಬಂಧನದಲ್ಲಿ ಇರಿಸಲಾಗಿದೆ. ಮೌಢ್ಯಜಾಲದಿಂದ ಪಾರು ಮಾಡಿ, ನಾಡನ್ನು ಊರ್ಧ್ವಮುಖದ ಪ್ರಗತಿ ಪಥದಲ್ಲಿ ಕೊಂಡೊಯ್ಯಬೇಕೆಂಬುದೇ ಈ ಪ್ರವಾದಿಯ ಉದ್ದೇಶವಾಗಿತ್ತು. ಇಂದಿನ ಪಾಪದ ಪೂಜಾರಿಗಳನ್ನು ಅವರಂತೆ ವಾಸ್ತವವಾಗಿ ವರ್ಣಿಸಿರುವ ಕವಿ ಬೇರೊಬ್ಬನಿಲ್ಲ.

"ಕಟ್ಟ ಕಡೆಯಲಿ
ದೇವರ ಗುಡಿಯಲಿ
ಪ್ರಜಾರಿಯೆ ದಿಟದ ನಿವಾಸಿ;
ಜ್ಯೋತಿಯ ಬಯಸುತೆ ಬಹಭಕ್ತರಿಗೆ ವಿಭೂತಿಯ ಹಂಚುವನು!
ಬೆಂಕಿಯ ನಂದಿಸಿ
ಬೂದಿಯ ವಂದಿಸಿ
ದೇವರ ಮರೆಗೈಯುತೆ ಪೂಜಾರಿಯೆ ಮಿಂಚುವನು!"[೧೬]

ಅವನ ಬಾಯಿ ಮಣಮಣ ಎನ್ನುತ್ತದೆ; ಕಣ್ಣು ಅನ್ವೇಷಕ ಭಾವದಿಂದ ಕಾತರಿಸುತ್ತದೆ. ಗುಡಿಯ ವಿಗ್ರಹವೊಂದು ಜಡಶಿಲೆ, ಪೂಜಾರಿಯೊಂದು ಹುಲಿ, ಅಲ್ಲಿಗೆ ಹೋಗುವ ಜನಬಲಿ, ಇದು ಇಂದಿನ ಗುಡಿಗಳಲ್ಲಿ ನೋಡಬಹುದಾದ ದೃಶ್ಯ.

"ದೇವರ ಸೆರೆಯಾಳ್, ದೇಗುಲ ಸೆರೆಮನೆ
ಕಾವಲು ಪೂಜಾರಿ!

ನೀನಾವಾಗಲು ನನ್ನಯ ಬಳಿಯಿರೆ
ಬಲು ತೊಂದರೆ ಎಂದು
ಗಿರಿಶಿಖರದೊಳತಿದೂರದಿ ಕಟ್ಟಿದೆ
ಗುಡಿಯನು ನಿನಗೊಂದು:
ಕಲ್ಲಿನ ಗೋಪುರ, ಕಲ್ಲಿನ ಗೋಡೆ,
ದುರ್ಗದವೊಲೆ ಬಲು ದುರ್ಗಮ ನೋಡೆ !"[೧೭]

ಆ ಜಡ ವಿಗ್ರಹಕ್ಕೆ ಅವನೇ ಸ್ವಾಮಿ, ಯಜಮಾನ. ಭಕ್ತ ನನ್ನ ಅನುಗ್ರಹಿಸಬೇಕಾದರೂ ದೇವರು ಸ್ವತಂತ್ರನಲ್ಲ. ಅವನಿಗೆ ಪುರೋಹಿತನ ಪರವಾನಗಿ ಬೇಕು. ಭಕ್ತರೆನ್ನೆಂತಾದರೂ ಅವನು ಸುಲಿಯಲಿ, ತೋಟದ ಹೂಗಳಿಗೂ ಅವನು ಕಟುಕನಾಗುತ್ತಾನೆ.

"ಕ್ಷಮಿಸೆನ್ನನು, ಓ ಕಣ್ಕೆವುಡಜ್ಜೀ
ನಾವೆಲ್ಲರು ಸೇರಿ,
ಹೇಗೋ ಏನೋ ಅಂತೂ ಇಂತೂ
ನಾವೆಲ್ಲರೂ ಸೇರಿ,
ನಿನ್ನನು ಈ ತೆಗೆಳೆದಿದ್ದೇವೆ!
ಆ ತಪ್ಪಿಂ ತಪ್ಪಿಸಿಕೊಳ್ಳಲು ಈ ದೇವರ ಗೀವರ ಸೇವೆ!"[೧೮]

ನಿಜವಾದ ಭಕ್ತನ ದೃಷ್ಟಿ ಹರಿದೆಡೆಯಲ್ಲೆಲ್ಲ ದೈವ ಸಾಕ್ಷಾತ್ಕಾರವಾಗುತ್ತದೆ. ನಿಸರ್ಗದ ಕೃಪೆಗೆ ಪಾತ್ರರಾದ, ಅದರಿಂದ ತಮ್ಮ ಆತ್ಮಶಕ್ತಿಯನ್ನೆಲ್ಲ ಪಡೆದ ಕುವೆಂಪು ಅಂಥವರಿಗೆ ಇಡೀ ಜಗತ್ತೇ ದೇಗುಲವಾಗುತ್ತದೆ; ಕನಕದಾಸರಂತೆ ಅವರೂ ಎಲ್ಲೆಲ್ಲೂ ದೇವರನ್ನೆ ದರ್ಶಿಸುತ್ತಾರೆ. ಅವರು ಕಲೋಪಾಸಕರಾದ್ದರಿಂದ ಆತ್ಮಸಾಕ್ಷಾತ್ಕಾರಕ್ಕೆ ಕಲೆಯೇ ಮಾಧ್ಯಮವಾಗುತ್ತದೆ.

"ಚೆಲುವೇ ದೇವರು, ಒಲವೇ ಪೂಜೆ;
ಎಂಬುದೆ ರಸಜೀವನದೋಜೆ.
ಕಲೆಯನು ಮೀರುವ ಸಾಧನೆಯಿಲ್ಲ;
ಕಲೆಯೊಳೆ ಪುರುಷಾರ್ಥಗಳೆಲ್ಲ;
ಕಲೆಯಿರದೆದೆಗೆ–ಏನಿಲ್ಲ !"[೧೯]

ಇದು ಅವರ ಬಾಳಿನ ಧ್ಯೇಯಮಂತ್ರ. ಈ ಮಂತ್ರದ ಅನುಷ್ಠಾನದಿಂದ ಪುರುಷಾರ್ಥ ಸಾಧ್ಯ. ಕುವೆಂಪು ಕೆಲವು ವಿಚಾರಗಳನ್ನು ಕುರಿತು ಯುಟೋಪಿಯಾ ರೀತಿಯ ಆದರ್ಶದ ಮಾತುಗಳನ್ನಾಡುವುದಿಲ್ಲ. ವಿಚಿತ್ರ ರೀತಿಯಲ್ಲಿ ಮನಸ್ಸು ಇಂದ್ರಿಯ ನಿಗ್ರಹವನ್ನು ನಿರಾಕರಿಸುತ್ತದೆ. ಇಂದ್ರಿಯ ಜಯ ಎನ್ನುವುದು ಮನುಷ್ಯ ಬದುಕಿರುವವರೆಗೂ ಸಾಧ್ಯವಿಲ್ಲ ಎಂಬ ಅಂತಿಮ ನಿರ್ಧಾರಕ್ಕೆ ಬರುತ್ತಾರೆ.

ಸಾವು ಬದುಕಿಗಿಂತ ವಿಸ್ಮಯ. ಆ ವಿಸ್ಮಯವನ್ನು ಹಂಚಿಕೊಳ್ಳುವುದು ಕಷ್ಟ. ಭಾವುಕತೆ, ನಿರ್ಭಾವುಕತೆ, ಧಾರ್ಮಿಕ, ವೈಜ್ಞಾನಿಕ, ಕಡುವೈಚಾರಿಕತೆ ಅಥವಾ ಹಾಸ್ಯ ಪ್ರಜ್ಞೆಯಿಂದ ಕೂಡಿದ ಒಂದು ತಮಾಷೆಯ ನೋಟ. ಆಸ್ಕರ್ ವೈಲ್ಡ್ ಸಾವಿನ ಬಗ್ಗೆ ಹೀಗೆಂದಿದ್ದಾನೆ– Death must be so beautiful, to lie on the soft brown earth, with the grasses waving above one's head, and listen to the silence. To have an yesterday, and no tomorrow. To forget time, to forgive life, to be at peace. ಬದುಕನ್ನು ಅಪಾರ ಗೇಲಿ ಮಾಡುತ್ತಿದ್ದ ಆಸ್ಕರ್ ವೈಲ್ಡ್, ಸಾವಿನ ಶೂನ್ಯತೆಯಲ್ಲಿ, ಕಾಲಾತೀತವಾದ ಶಾಂತ ಸ್ಥಿತಿಯಲ್ಲಿ ಸೌಂದರ್ಯವನ್ನು ಶೋಧಿಸುತ್ತಾನೆ.[೨೦]

ಸಾವು ಜೀವನವನ್ನು ನೋಯಿಸುವುದಿಲ್ಲ. ಸಾವಿಗೆ ಹೆದರುವುದು ಅಸಮರ್ಥನೀಯ. ಉತ್ಕಟವಾದ ನೋವಿನಿಂದ ಬಿಡುಗಡೆ ಕೊಡುವ ಮರಣವು ನಂತರ, ನಿಶ್ಶಬ್ದ ಜೋಗುಳ ಹಾಡುತ್ತಾ ತೊಡೆಯ ಮೇಲೆ ಮಲಗಿಸಿಕೊಳ್ಳುವ ತಾಯಿಯಂತೆ. *ಯಾವ ಸಾವು ಅಕಾಲಿಕವಲ್ಲ. ಅಂದಂದೆ ಹುಟ್ಟಿತ್ತು ಅಂದಂದೆ ಹೊಂದಿತ್ತು* ಎಂದೆನ್ನುತ್ತಾರೆ ಬಸವಣ್ಣ. ಚಾಪ್ಲಿನ್ ಹೀಗೆನ್ನುತ್ತಾನೆ– *ನೀವು ನಗದೆ ಇದ್ದ ದಿನ ವ್ಯರ್ಥ ಅನ್ನುತ್ತಾನೆ.* ಕತ್ತೆತ್ತಿ ನೋಡಲಾರದವನಿಗೆ ಕಾಮನಬಿಲ್ಲು ಕಾಣುವುದಿಲ್ಲ ಎನ್ನುತ್ತಾನೆ. ಕುವೆಂಪು ಅವರ Death ಎಂಬ ಕವನ ಇದೇ ದಿಕ್ಕಿನತ್ತ ಸಾಗುತ್ತದೆ. ೧೯೨೫ರಲ್ಲಿ ರಚಿಸಿದ ಕವನವಿದು.

"ಕವಿ ಕುವೆಂಪು ಪ್ರಸ್ತುತ ಕವನದ ಬಗ್ಗೆ ಹೀಗೆಂದಿದ್ದಾರೆ- ಎಷ್ಟೋ ಸಾರಿ ನಾನು ಕಾಯಿಲೆಬಿದ್ದಾಗ ನನ್ನ ಕಾವ್ಯಪ್ರತಿಭೆ ಪರಿಪಕ್ವವಾಗಿ ಪ್ರಕಟವಾಗುವ ಮುನ್ನವೆ, ನನ್ನ ಕವಿ ಜೀವನ ಪ್ರಫುಲ್ಲವಾಗಿ ಸಾರ್ಥಕವಾಗುವ ಮೊದಲೆ ಸತ್ತುಹೋಗಿ ಬಿಡುತ್ತೇನೆಯೊ ಎಂಬ ಚಿಂತೆಗೆ ನನ್ನ ಚೇತನ ಒಳಗಾಗುತ್ತಿತ್ತು. ಸ್ವಾಮಿ ವಿವೇಕಾನಂದರ ನಿರ್ಭಯ ತತ್ವವನ್ನು ಚೆನ್ನಾಗಿ ಹೃದಯಿಸಿದ್ದ ನನಗೆ ಸಾವಿನ ಭೀತಿ ಇರಲಿಲ್ಲ. ಏಕೆಂದರೆ ಸಾವು ಎನ್ನುವುದೇ ಸುಳ್ಳು, ಅದೊಂದು ನಿಷೇಧಾತ್ಮಕವಾದ ಭಾವನೆಯೆ ಹೊರತು ಬೇರೆ ಏನೂ ಅಲ್ಲ ಎಂಬುದನ್ನು ನನ್ನ ಜೀವ ಮನಗಂಡಿತ್ತು. ಭಗವದ್ಗೀತೆಯೂ ಅ ಭಾವನೆಗೆ ತನ್ನ ಅಮೃತವನ್ನು ಸಿಂಚಿಸಿತ್ತು. ಸಾವು ಎನ್ನುವುದು ದೇಹತ್ಯಾಗವೆ ಹೊರತು ಸೊನ್ನೆಯಾಗುವುದಿಲ್ಲ ಎಂಬುದು ನನ್ನ ಬುದ್ಧಿಗೆ ಅಸಂದಿಗ್ಧವಾಗಿತ್ತು. ಮೃತ್ಯುವನ್ನೂ ನುಂಗಿ ನೊಣೆಯುವ ಅದ್ವೈತದ ಕೆಚ್ಚೂ ನನ್ನಾತ್ಮದಲ್ಲಿ ಪ್ರಜ್ವಲಿಸಿತ್ತು ಎಂದಿದ್ದಾರೆ.."[೨೧]

"Death, flowery Death, welcome to my abode,
Thou sweet unraveller of mystery!
True, thou wert terror once to me; but oh!
That time is gone and thou art mild and sweet.
O, I envy those whom thou hast blessed
With thy great kiss! Perhaps more wise they are
And know things that beyond the human ken
Do lie; their forms are brighter, more divine,
And subtle; and their vision broader, keen
And sublime that from them naught doth hide."[22]

ಕವಿಯ ಮನಸ್ಸಿನಲ್ಲಿ ಸಾವಿನ ಬಗೆಗಿನ ಅರ್ಥವು ಬಹಳ ಸಕಾರಾತ್ಮಕವಾದಂತಾದ್ದು. ಅವರಿಗೆ ಸಾವೆಂದರೆ ಜೀವನವಿಮುಖತೆಯೂ ಅಲ್ಲ. ಅವರು ಸಾವನ್ನು ಬಹಳ ಪ್ರೀತಿಯಿಂದ ಸ್ವಾಗತಿಸುತ್ತಿದ್ದಾರೆ. ಸಾವು ಬದುಕಿನ ಮೌಲ್ಯವನ್ನು ಹೆಚ್ಚಿಸುತ್ತದೆ. ಕವಿಯಲ್ಲಿ ಆ ವಯಸ್ಸಿಗಾಗಲೆ ತಮ್ಮ ಇಂದ್ರಿಯ ನಿಗ್ರಹವನ್ನು ಸಾಧಿಸಿದ್ದರು. ಆದ ಕಾರಣ ಅವರಿಗೆ ಹುಟ್ಟು ಮತ್ತು ಸಾವನ್ನು ಸಮವಾಗಿ ಸ್ವೀಕರಿಸಲು ಸಾಧ್ಯವಾಯಿತ್ತೆನ್ನಬಹುದು. ಈ ಮೇಲಿನ ಸಾಲುಗಳು ಶೇಕ್ಸ್‌ಪಿಯರ್‌ನ ನಾಟಕವನ್ನು ನೆನಪಿಗೆ ತರುತ್ತದೆ- ದುರಂತ ಕೃತಿಗಳಿಗೆ ಖ್ಯಾತನಾದ ಶೇಕ್ಸ್‌ಪಿಯರ್ ಸಾವನ್ನೂ ಪ್ರೇಮವನ್ನೂ ಸಮೀಕರಿಸುತ್ತಾನೆ. ಪ್ರಸಿದ್ಧ ನಾಟಕ ರೊಮಿಯೋ ಜೂಲಿಯಟ್‌ನ ನಾಲ್ಕನೆಯ ಅಂಕದ ಐದನೆಯ ದೃಶ್ಯದಲ್ಲಿರುವ Death lies on her, like an untimely frost Upon the sweetest flower of all the field ಎಂಬ ಉದ್ಗಾರವೇ ಇದಕ್ಕೆ ಸಾಕ್ಷಿ.[೨೩] ಸಾವಿನ ನಂತರ ಏನು ಉಳಿಯುತ್ತದೆ ಎಂಬುದು ಒಂದು ಪ್ರಶ್ನೆಯಾದರೆ, ಏನಾದರು ಉಳಿಯಬೇಕೆ ಎನ್ನುವುದು ಅಷ್ಟೇ ಮುಖ್ಯವಾದ ಇನ್ನೊಂದು ಪ್ರಶ್ನೆ. ಕುವೆಂಪು ಅವರ **ಇಂದ್ರಿಯ ಜಯ** ಎಂಬ ಒಂದು ಕವನದಲ್ಲಿ-

"ನೀ ಸತ್ತು ಸೂಡಿನಲಿ ಹೆಣ ಬೂದಿಯಾದಂದು
ನಿನಗೆ ಇಂದ್ರಿಯ ಜಯವು ! ನೀನು ನಾನಾದಂದು !"[೨೪]

ಎಂದು, ಒಂದು ಹೆಣ್ಣು ಒಬ್ಬ ಸಾಧುವಿನ ಕೈಗೆ ನೀಡಿದ ಮಂತ್ರಭಸ್ಮ ಹೇಳುತ್ತದೆ, ಸಂಪೂರ್ಣ ಇಂದ್ರಿಯ ಜಯ ಬದುಕಿರುವವನಿಗೆ ಸಾಧ್ಯವೆ ಇಲ್ಲ ಎಂಬರ್ಥದಲ್ಲಿ.[೨೫]

ಬೆಳಕ್ಕಿಯ ಹಂತಿಯನ್ನೆ ದೇವರ ರುಜುವೆಂದು ಕವಿ ಕಾಣುವುದು ಸೃಷ್ಟಿ ಸೌಂದರ್ಯದಲ್ಲಿ ದೈವೀ ರೂಪವನ್ನು ಕಾಣುವ ಪರಿಯಿದು. ಮತ್ತೊಮ್ಮೆ ಕುವೆಂಪು ತಮ್ಮದೇ ಹಲವು ನೆಲೆಗಳಲ್ಲಿ ದೇವರನ್ನು ದರ್ಶಿಸುವ ಮೂಲಕ ಎಲ್ಲಾ ಸಾಂಸ್ಥಿಕ ಮತ್ತು ಆಸ್ತಿಕ ಧರ್ಮವನ್ನು ನಿರಾಕರಿಸುವುದು ವ್ಯಕ್ತವಾಗುತ್ತದೆ. ಆದರೆ ಅದನ್ನು ಅತ್ಯಂತಿಕವೆಂದು ಕುವೆಂಪು ಹೇಳುವುದಿಲ್ಲ. ದೈವೀ ಸ್ವರೂಪ ಅವರಿಗೆ ಕಾಣುವುದು ಒಂದು ಬಗೆಯಲ್ಲಿ ಅಲ್ಲ.

ದೇವರು ರುಜು ಮಾಡಿದನು;
ರಸವಶನಾಗುತ ಕವಿ ಅದ ನೋಡಿದನು![೨೬]

ಎಂದು ಹೇಳುವ ಕವಿಯ ಬಾಲ್ಯದ ಕಲ್ಪನೆಯನ್ನು ನೋಡಿ. ಇಂಥ ಮನಸ್ಥಿತಿಯಲ್ಲಿರುವಾಗಲೇ ಪ್ರಕೃತಿ ಸೌಂದರ್ಯದೊಂದಿಗೆ ಜೀವ – ದೇವರ ಸಂಬಂಧದ ಅಭೇಧ ಕಲ್ಪನೆಯಲ್ಲಿ ಮೂಡುವ ಕವಿತೆ On the way to Chamundi Hill ೧೯.೭.೧೯೨೫ರಲ್ಲಿ ರಚಿಸಿದ್ದು. ಅನಿತ್ಯವನ್ನು ಪಡೆಯುವ ಮನಸ್ಸು ಕವಿಗೆ ಇರುವುದು ಸೂಚಿಸುವ ಕವನ.

"Climb, climb, beloved friend;
The means is not the end.
Yet, and yet! few steps more
And in Her abode we are!
Not that, not this, not e'en Her kiss,
But Mother is all our bliss!"[27]

ಇಲ್ಲಿನ ನಿರಾಕರಣೆ ಮತ್ತು ಸ್ವೀಕರಣೆಯು ಎದ್ದು ಕಾಣುವಂತಿದೆ. ದೇವೀ ಸನ್ನಿಧಾನದಲ್ಲಿ ದೈವತ್ವಕ್ಕೇರುವ ಬಗೆಯನ್ನು ಕೆಳಗಿನ ಸಾಲುಗಳಲ್ಲಿ ಕಾಣಬಹುದು. ಇಲ್ಲಿನ ಕೇಂದ್ರ ಭಾವ ಮಹತ್ತು ಅರಳುವ ಹಾದಿಯ ಕಲ್ಪನೆಯನ್ನು ನಮ್ಮ ಮುಂದಿಡುತ್ತದೆ.

"What is great and noble sow,
What is mean and sinful burn.
Steep is the stony road"[28]

ತಾಯ ಸನ್ನಿಧಾನದ ಹಾದಿ – ಇಲ್ಲಿ ರಾಮಕೃಷ್ಣ–ನರೇಂದ್ರರು ನೆನಪಾದರೆ ಅತಿಶಯವಲ್ಲ. ಹಾಗೆಯೇ ಔನ್ನತ್ಯಕ್ಕೇರುವ ಮಾರ್ಗವು ಗುರಿಯಲ್ಲವೆಂದು ಸ್ಪಷ್ಟಪಡಿಸಿಕೊಂಡ ಮನಸ್ಸು ಕ್ರಮಿಸುವ

ಹಾದಿಯ ಬಗ್ಗೆಯೂ ಹೇಳುತ್ತಿದೆ. ಗಗನದ ಸನಿಹಕೆ ಮೇಲೇರಿದಂತೆಲ್ಲ ನಾವು/ಭಿನ್ನತೆಗಳಳಿಯುವವು ಎನ್ನುವುದು ಮಾರ್ಗದ ಬಗ್ಗೆ ನುಡಿವ ಮಾತುಗಳು.

"Climb, climb, beloved friend,
The mean is not the end.
Distinctions all shall fly
As we go near the sky."[29]

ಈ ಹಾದಿಯಲ್ಲಿ ಮನಸ್ಸನ್ನು ಸೆಳೆಯುವ ವಸ್ತುಗಳು, ಆಮಿಶಗಳು ಹಲವು. ಅವುಗಳನ್ನು ನಿವಾರಿಸಿಕೊಳ್ಳಬೇಕು ಎಂಬ ಹಂಬಲವೂ ದೇವರನ್ನು ಮುಟ್ಟುವ ಬಯಕೆಯ ಜೊತೆಗಿವೆ.

"Green grass and fruits and flowers,
Gay birds on leafy bowers
Beside the way allure:
But yet proceed and be pure.
All these are but Her joy,
And Her we want,"[30]

ಕವಿಗೆ ಬೇಕಿರುವುದು ಎಲ್ಲವನ್ನೂ ಉಳಿದ ತಾಯಿ. ಅವಳನ್ನು ಸೇರುವ ಸಂಭ್ರಮಾಚರಣೆಗೆ ಏರಬೇಕು, ಏಕವು ಸಂಭವಿಸುವಂತೆ.

"Climb till the Oneness is seen
For Mother's bliss serene.
And climbing chant "Om Peace!
Mother's all and nothing is!"[31]

ವೈಚಾರಿಕ ಮತ್ತು ವೈಜ್ಞಾನಿಕ ಚಿಂತನೆಗಳೊಂದಿಗೆ, ದೇವರು – ಪೂಜೆ – ಭಕ್ತಿ ಮೊದಲಾದ ತರ್ಕಕ್ಕೆ ನಿಲುಕದ ವಿಷಯಗಳಲ್ಲಿ ಕುವೆಂಪು ತೋರುವ ನಿಷ್ಠೆ, ನಂಬಿಕೆಗಳನ್ನು ದ್ವಂದ್ವಾತ್ಮಕ ನಿಲುವು ಎಂದು ಪ್ರತಿಪಾದಿಸುವುದುಂಟು. ಅವರ ನಂಬಿಕೆಗಳನ್ನು ಸರಿಯಾಗಿ ಗ್ರಹಿಸಿದಾಗ ದೇವರ ಬಗೆಗಿನ ಅವರ ಶ್ರದ್ದೆ, ತೋರಿಕೆಯ, ಆಡಂಬರ ಸಾಂಸ್ಥಿಕ ದೇವರುಗಳ ಮೇಲಿನ ಶ್ರದ್ಧೆಯಲ್ಲ ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ದೇವರ ಹೆಸರಿನಲ್ಲಿ ನಡೆಯುವ ಶೋಷಣೆ, ಮೂಢನಂಬಿಕೆ, ಕಂದಾಚಾರಗಳನ್ನು ಕಟುವಾಗಿ ವಿರೋಧಿಸುವ ಕುವೆಂಪು ದೇವರು, ಪೂಜೆ – ಭಕ್ತಿಯ ಬಗೆಗೆ ಅವರದೇ ಆದ ಧೋರಣೆ ಹೊಂದಿದ್ದರು. ಜಗತ್ತಿನಲ್ಲಿ ಒಂದೊಂದು ಶಕ್ತಿಯ ಸ್ವರೂಪವೇ ಬೇರೆ, ಅದು ಅರಳುವ ರೀತಿಯೂ ಬೇರೆ.

ಇಂಥ ಸಂಸ್ಕಾರ ನಿಸರ್ಗ ಕವಿಯ ವಿಕಸನಕ್ಕೆ ಅನಿವಾರ್ಯ. ಅವನಿಗೆ 'ಸೂರ್ಯೋದಯ ಚಂದ್ರೋದಯ ದೇವರ ದಯೆ', ಈ ಮಾತಿನಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ನಿನಗೆ ನಿಸರ್ಗ

ಬೇರೆಯಲ್ಲ, ದೇವರು ಬೇರೆಯಲ್ಲ. ಆಧ್ಯಾತ್ಮ ಅಥವಾ ಬ್ರಾಹ್ಮೀ ದೃಷ್ಟಿ ಇರುವ ಯಾವ ವ್ಯಕ್ತಿಯಲ್ಲಿಯೂ ದ್ವಂದ್ವತ್ವವಿರುವ ಸಂಭವವೆ ಇಲ್ಲ. ಖಂಡದೃಷ್ಟಿಯ ಪ್ರತ್ಯೇಕವಾದ ಆಲೋಚನೆಯಿಂದ ಜನಮನಸ್ಸು ಗೊಂದಲದ ಸಂತೆಯಾಗುತ್ತದೆ. ಸೃಷ್ಟಿ ಶಕ್ತಿಯನ್ನಾಗಲೀ ನಿಸರ್ಗ ತತ್ವವನ್ನಾಗಲೀ ಗ್ರಹಿಸಲಾರದ ಸಮನ್ವಯ, ಸಾಮರಸ್ಯ, ಪೂರ್ಣದೃಷ್ಟಿಯಿಲ್ಲದ ವ್ಯಕ್ತಿಗೆ ಜಗತ್ತಿನ ಪ್ರತಿಯೊಂದು ವಸ್ತುವೂ ಖಂಡಖಂಡವಾಗಿ ಸಂಬಂಧರಹಿತವಾಗಿ ಕಾಣುತ್ತದೆ. ಅಂದ ಮೇಲೆ ಈ ದ್ವಂದ್ವತ್ವ ನನ್ನಲ್ಲಿದೆಯೆನ್ನುವುದಕ್ಕಿಂತ ಆರೋಪಿಸುವ ವ್ಯಕ್ತಿಗಳಲ್ಲಿ ಎಂದು ಹೇಳಬೇಕಾಗುತ್ತದೆ.

ಸೃಷ್ಟಿಶಕ್ತಿಯ ಪ್ರಕೃತಿ ದರ್ಶನದಲ್ಲಿಯೇ ದೇವರನ್ನು ಕಾಣುವ ಪೂರ್ಣ ದೃಷ್ಟಿಯಲ್ಲಿ ಸಾಂಸ್ಥಿಕ ಧರ್ಮದ ದೇವರು, ನಂಬಿಕೆಗಳ ನಿರಾಕರಣೆ ಇರುವುದು ಇವರ ಈ ಮಾತುಗಳಲ್ಲಿ ವ್ಯಕ್ತವಾಗಿದೆ. ನಿಸರ್ಗದಲ್ಲಿ ಸಂಪೂರ್ಣವಾಗಿ ಒಂದಾಗಿಬಿಡುವ ಅನುಭಾವವೇ ದೇವರಾಗಿ ಕಂಡುಬಂದಿದೆ ಇಲ್ಲಿ. ಅವರ ಈ ಮಾತುಗಳು ದೇವರನ್ನು ಕುರಿತ ನಿಲುವನ್ನು ಸ್ಪಷ್ಟಪಡಿಸುತ್ತವೆ. ಇದು ಅವರನ್ನು ಪ್ರಶ್ನಿಸುವವರಿಗೆ ಕೊಟ್ಟ ಉತ್ತರವೂ ಆಗಿದೆ.

ಈ ಕೆಳಗಿನ ಕವನವನ್ನು ಕುವೆಂಪು ಅವರು ತಮ್ಮ ಬೆಂಗಳೂರಿನ ವಿದ್ಯಾರ್ಥಿನಿಲಯದ ಎದುರಿಗಿದ್ದ ಮಾವಿನ ಮರದಡಿ ಕುಳಿತು ಬರೆದಿರುವ ಕವನ. ೨೬.೧.೧೯೨೫ರಲ್ಲಿ Lines ಎಂಬ ಕವನವನ್ನು ರಚಿಸಿದ್ದಾರೆ.

"How tranquil is this home of peace!
And oh, how glorious is this scene!
While I stand beneath these mango trees
Where flowers blossoming fresh and green
Kiss the Infinite at my heart,"[32]

ಮಲೆನಾಡಿನ ಗರ್ಭದಲ್ಲಿ ಹುಟ್ಟಿ ಬೆಳೆದ ಕುವೆಂಪು ದೇವರನ್ನು ಕಲ್ಲು, ಮಣ್ಣುಗಳ ಮೂರ್ತಿಗಳಲ್ಲಿ ಕಾಣದೇ ನಿಸರ್ಗದಲ್ಲಿ ಕಂಡವರು. ಇಲ್ಲಿ ಈ ಮೇಲಿನ ಕವನದಲ್ಲಿ ಕವಿ ಆ ಮಾವಿನ ಮರವನ್ನು ಇಂಥ ಪರಿ ಭಾವಿಸಿ ಈ ಕವನದ ಮೂಲಕ ಮರಕ್ಕೆ ಜೀವಕೊಟ್ಟಿದ್ದಾರೆ.

ಕುವೆಂಪು ಎಂಟ್ರೆನ್ಸ್ ಕ್ಲಾಸಿನಲ್ಲಿ ಓದುತ್ತಿದ್ದಾಗಲೆ ಬರೆದಂತಹ ಕವನ **ಗುಬ್ಬಚ್ಚಿ**. ಈ ಕವನವು ಅವರು ಕಾಲೇಜು ಸೇರಿದ ಮೇಲೆ ಮಹಾರಾಜಾ ಕಾಲೇಜಿನ ಯೂನಿಯನ್‌ನಿಂದ ಹೊರಡುತ್ತಿದ್ದ 'The Union' ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. **"ತತ್ ತ್ವಮಸಿ"** ಎಂಬ *ಅದ್ವೈತ ತತ್ತ್ವದ* ಪ್ರಭಾವ ಅದರಲ್ಲಿರುವುದನ್ನು ಕಾಣಬಹುದು. ಗುಬ್ಬಚ್ಚಿ ಹಿಂದಿನಿಂದಲೂ ಮನುಷ್ಯರ ಒಡನಾಡಿಯಾಗಿಯೇ ಬಂದ ಹಕ್ಕಿ.

ಅದ್ವೈತ ಸಿದ್ಧಾಂತ – ಅದ್ವಯ (Non-Dualistic) – ಜಗತ್ತಿನ ಪ್ರಾಚೀನತಮ ಸಿದ್ಧಾಂತಗಳಲ್ಲಿ ಪ್ರಮುಖವಾದದ್ದು. ಅಂದರೆ ಕಾಣುವ ಜಗತ್ತು – ಅದರಲ್ಲಿ ಪ್ರವರ್ತಿಸುತ್ತಿರುವ ಜೀವಾತ್ಮ, ಮತ್ತು ಕಾರಣ ರೂಪವಾದ ಬ್ರಹ್ಮ (ಜೀವ, ಜಗತ್ತು, ದೇವರು) ಎಂದು ಹೇಳುತ್ತಿದ್ದಾರೆ.

ಉಪನಿಷತ್ತುಗಳನ್ನು ಜೀರ್ಣಿಸಿಕೊಂಡಿರುವ, ಶ್ರೀ ರಾಮಕೃಷ್ಣ ಪರಮಹಂಸರ ದರ್ಶನವನ್ನು ಅರಿತಿರುವ, ಪ್ರಾಚ್ಯ ಪಾಶ್ಚಾತ್ಯ ತತ್ವಶಾಸ್ತ್ರಗಳನ್ನು ಚೆನ್ನಾಗಿಯೇ ಮೆಲುಕು ಹಾಕಿರುವ, ಅರವಿಂದ ದರ್ಶನದಲ್ಲಿ ತೋಯ್ದಿರುವ ಅವರು ಅದನ್ನು ನೂತನ ರೀತಿಯಲ್ಲಿ ಇಲ್ಲಿ ವ್ಯಾಖ್ಯಾನಿಸಿದ್ದಾರೆ.

"Thou little Nature's Child
That playest on yonder tree, - ಅಂದರೆ ಗುಬ್ಬಿ

Where fragrance sweet and wild
Diffusing makest thee - ಇದು ಪರ್ಪಸ್.

Happy and gay
To sing thy lay,
Art thou not He

Who dwells in me?"[33] – ಇದು ಇನ್‌ಕ್ವಯರಿ. ಒಳಗನ್ನು ಅರಿಯುವ ಪ್ರಕ್ರಿಯೆ. ತನಗೆ ಬೇಕಿರುವುದು ಇದು. ಅಂದರೆ ಎದೆಯಲ್ಲಿನ ಗುಬ್ಬಿ, ಅವನು ಕಳಿಸಿದ ಗುಬ್ಬಿ ಮತ್ತು ಅವನೇ.

ಕವಿ ಪುಟ್ಟ ಹಕ್ಕಿಯ ಗಾನವನ್ನು ಆಲಿಸುತ್ತಾ ಅದರಿಂದ ಬಹಳವಾಗಿ ಸಂತಸಗೊಂಡು ಗುಬ್ಬಿಯನ್ನು ಪ್ರಶ್ನಿಸುತ್ತಿದ್ದಾರೆ, ಎಲೈ! ಗುಬ್ಬಿಯೇ ನಿನ್ನ ಸುಮಧುರ ಗಾನವು ನನ್ನನ್ನು ಆವರಿಸಿದೆ, ನನ್ನನ್ನು ಆವರಿಸಿರುವುದು ನೀನೋ ಅಥವ ನಿನ್ನಂತಹ ಅದ್ಭುತವನ್ನು ಸೃಷ್ಟಿಸಿದ ಆ ಸೃಷಿಕರ್ತನೋ(ದೈವ) ಎಂದು ಕೇಳುತ್ತಿದ್ದಾರೆ.

"Upon the Champak tree
That smiles before my door
He takes the form of thee
The Lord supreme and pure.

Thou Nature's child,
Thou creature mild,
Art thou not He
Who dwells in me?"[34]

ಪುಟ್ಟ ಗುಬ್ಬಿಯಲ್ಲಿ ಕವಿ ತಮ್ಮ ದೈವೀಕವಾದ ಸಂತಸವನ್ನು ಬಹಳ ಮುಗ್ಧವಾಗಿ ಹಂಚಿಕೊಳ್ಳುತ್ತಿದ್ದಾರೆ, ಕವಿಯ ಮನೆಯ ಮುಂಭಾಗದಲ್ಲಿರುವ ಸೊಂಪಾಗಿ ಬೆಳೆದಿರುವ ಒಂದು ಸಂಪಿಗೆ ಮರದ ಮೇಲೆ ಕುಳಿತಿರುವ ಗುಬ್ಬಿಯಲ್ಲಿ, ಆ ಸರ್ವಶ್ರೇಷ್ಠ ಭಗವಂತನನ್ನು ಕಾಣುತ್ತಿದ್ದಾರೆ. ಅಂದರೆ ಭಗವಂತನೇ ಗುಬ್ಬಿಯ ಸ್ವರೂಪದಲ್ಲಿ ಬಂದಿರುವ ಹಾಗೆ ಕವಿಗೆ ಭಾಸವಾಗುತ್ತಿದೆ.

ಮುಂದುವರಿದು ಗುಬ್ಬಿಯ ಬಳಿ ಮೇಲೆ ಕೇಳಿದ ಅದೇ ಪ್ರಶ್ನೆಯನ್ನು ಕೇಳುತ್ತಿದ್ದಾರೆ, ತಮ್ಮಲ್ಲಿರುವ ಭಗವಂತನು ಭಗವದ್ ಸ್ವರೂಪಿಯಾದ ನೀನೋ ಅಥವಾ ಆ ನಿನ್ನನ್ನು ಕಳುಹಿಸಿದ ಸಾಕ್ಷಾತ್ ಭಗವಂತನೇನಾ ಎಂದು. ಈ ಕವಿತೆಯಲ್ಲಿ ಕುವೆಂಪು ಅವರಲ್ಲಿ ಒಂದು ಪುಟ್ಟ ಹಕ್ಕಿಯಲ್ಲಿಯೂ ಆ ಪರಮಾತ್ಮನನ್ನು ಕಾಣುವ ಸಾಮರ್ಥ್ಯ ಮತ್ತು ಶುದ್ಧ ಮನಸ್ಥಿತಿಯನ್ನು ಹೊಂದಿದ್ದರು ಎಂಬುದು ಖಾತ್ರಿಯಾಗುತ್ತದೆ. ಪ್ರಕೃತಿಯೇ ದೇವರು ಎನ್ನುವ ಭಾವಕ್ಕೆ ಈ ಕವಿತೆ ಒಂದು ಒಳ್ಳೆಯ ಉದಾಹರಣೆಯಾಗಿದೆ.

ಕುವೆಂಪು To My Soul (ನನ್ನ ಆತ್ಮಕ್ಕೆ) ಎಂಬ ಶೀರ್ಷಿಕೆಯ ಕವನವನ್ನು ೧೯೨೩ರಲ್ಲಿ ರಚಿಸಿದ್ದಾರೆ. ಆ ಸಮಯದಲ್ಲಿ ತರುಣ ಕುವೆಂಪುವಿನ ಚೇತನವು 'ಸ್ವಾಮಿ ವಿವೇಕಾನಂದರ ಭಾಷಣಗಳನ್ನೋದಿ ತನ್ನ ಅಗ್ನಿಪಕ್ಷಗಳನ್ನು ಬಿದಿರ್ಚಿ ಆಕಾಶಗಾಮಿಯಾಗಿತ್ತು.' ಉಪನಿಷತ್ತುಗಳು, ಭಗವದ್ಗೀತೆ, ಶ್ರೀರಾಮಕೃಷ್ಣ ಪರಮಹಂಸರು ಮತ್ತು ಶ್ರೀಕೃಷ್ಣಚೈತನ್ಯ ಮೊದಲಾದ ಆಧ್ಯಾತ್ಮಿಕ ವಿಭೂತಿಗಳ ಜೀವನ ಚರಿತ್ರೆಗಳ ಅಧ್ಯಯನದಿಂದ, ಅವರಲ್ಲಿ ಒಂದು ಅದ್ವೈತಭಾವ ಮೂಡಿ ಮಸೆಯುತ್ತಿತ್ತು. ಆದಿ ಶಂಕರರ ಪ್ರಕಾರ ಆ ಶಿವನು ನನ್ನ ಆತ್ಮ, ಪಾರ್ವತಿಯೇ ನನ್ನ ಮನಸ್ಸು, ನನ್ನ ಪ್ರಾಣಗಳು ನಿನ್ನ ಸಹಚರರು, ಮತ್ತು ನನ್ನ ಶರೀರವೇ ನಿನ್ನ ಮನೆ. ಈ ಎಲ್ಲ ಇಂದ್ರಿಯ ಕ್ರಿಯೆಗಳು ನಿನ್ನ ಪೂಜೆ. ನನ್ನ ನಿದ್ರೆಯೇ ಸಮಾಧಿಸ್ಥಿತಿ. ನಾನು ಮಾಡುವ ಸಂಚಾರವೆಲ್ಲಾ ನಿನಗೆ ಪ್ರದಕ್ಷಿಣೆ ಮತ್ತು ನಾನು ಆಡುವ ಮಾತೆಲ್ಲಾ ನಿನ್ನ ಆರಾಧನೆ (ಧ್ಯಾನ ಮತ್ತು ಆಧ್ಯಾತ್ಮ ಜೀವನ– ಶ್ರೀ ಸ್ವಾಮಿ ಯತೀಶ್ವರಾನಂದ, ಶ್ರೀ ರಾಮಕೃಷ್ಣ ಮಠ) ಎಂದು ಭಾವಿಸಿದ್ದಾರೆ. ಈ ಕೆಳಗಿನ ಕವನದಲ್ಲಿ ಅದರ ಪ್ರಭಾವವನ್ನು ಕಾಣಬಹುದು.

"Deem not, O Soul, that thou art bound,
For thou art perfect, firm and pure;
Know that thou art the King uncrowned,
Unsoiled, immutable and sure."[35]

ಕವಿ ಇಲ್ಲಿ, ಆತ್ಮ, ಅಧ್ಯಾತ್ಮದ ಬಗ್ಗೆ ಮಾತಾಡುತ್ತಿದ್ದಾರೆ. ನಮ್ಮ ಆತ್ಮ ಶುದ್ಧಿಗೆ ಬುದ್ಧಿ ಮತ್ತು ಅಹಂಕಾರದ ದೋಷ ತಾಗದಂತೆ ಅವನ್ನು ನಿವಾರಿಸಿಕೊಳ್ಳಬೇಕು. ಪ್ರತಿಯೊಬ್ಬರೂ "ಆ ಅನಂತ ಚೈತನ್ಯದ ಒಂದು ಅಂಶವೇ" ಎಂದು ಹೇಳುವುದರ ಮೂಲಕ ಕವಿ ಆತ್ಮಕ್ಕೆ ಸಂಸ್ಕಾರ ಎಂಬ ಸಾಣೆ ಹಿಡಿಯುತ್ತಾರೆ. ನಿಷ್ಕಲ್ಮಶ, ನಿಶ್ಚಲ ನಿಲುವಿನ ಆತ್ಮವಿಶ್ವಾಸಿ ಆಗಬೇಕದು. ಅದಕ್ಕೆ ಪುಷ್ಟಿಯನ್ನು ನೀಡುವುದು, ಅಂತಃಶಕ್ತಿಯ ಹೆಚ್ಚಿಸಿಕೊಳ್ಳುವುದು ಹೇಗೆಂಬ ಬಗ್ಗೆ ಸ್ವಾಧ್ಯಾಯದ ಅರಿವು ಮೂಡಿಸುತ್ತಿದ್ದಾರೆ. ತನ್ನ ಆತ್ಮಕ್ಕೆ ನಿನ್ನನ್ನು ನನ್ನಲ್ಲಿ ಬಂಧನಕ್ಕೊಳಮಾಡಿದೆ ಎಂದು ನೀನು ಭಾವಿಸದಿರು, ಈ ದೇಹದಲ್ಲಿ ಬಂಧಿಯಾಗಿ ಇರುವುದಲ್ಲ ನೀನು; ನಿನ್ನದೆಯಾದ ಬಹುದೊಡ್ಡ ಸೀಮೆಗಳನ್ನು ಹೊಂದಿದ್ದೀಯ. ನೀನು ನಿನ್ನ ಸಾಮರ್ಥ್ಯದ ಅರಿವು ಮಾಡಿಕೋ. ನಿನಗೆ ದೊರೆಯಬೇಕಾದ ಎಲ್ಲಾ ಸ್ಥಾನಮಾನಗಳು ನಿನಗೆ ಈಗಾಗಲೇ ಲಭ್ಯವಾಗಿವೆ ಎನ್ನುತ್ತಾರೆ.

ನಿನ್ನಂತಹ ಅನಂತನನ್ನು ನನ್ನಲ್ಲಿರಿಸಿದ್ದೀಯ. ನನ್ನ ದೇಹದ ಮೂಲಕ ನಿನ್ನ ಪ್ರಾಬಲ್ಯವನ್ನ ಅಂದರೆ ಆತ್ಮದ ಭಾವವನ್ನ ಉದ್ದೀಪಿಸುವ ಕೆಲಸವನ್ನು ನಾನು ಮಾಡುತ್ತಿದ್ದೇನೆ ಅಷ್ಟೇ. ಹನುಮಂತನಿಗೆ ಲಂಕೆಗೆ ಹಾರುವ ಶಕ್ತಿ ಇದ್ದರೂ ಸಹ ಜಾಂಬವಂತನು ಹನುಮನ ಶಕ್ತಿಯನ್ನು ನೆನೆಪಿಸಿದ ಮೇಲೆಯೇ ಅವನು ಸಾಗರೋಲ್ಲಂಘನ ಮಾಡಿದ ಕಥಾನಕದಂತೆ ನೀನೂ. ನಿನಗೂ ಜಾಂಬುವಂತನ ತರಹ ನನ್ನಂತಹ ಕವಿಯ ಅಗತ್ಯವಿದೆ. ನೀನು ಅಪ್ರತಿಮನಾದರೂ ನಿನ್ನ ಶಕ್ತಿಯನ್ನು ನೆನಪು ಮಾಡಲಿಕ್ಕೆ ನಾನು. ನೀನು ಆಗಲೇ ಅತ್ಯುನ್ನತ ಪ್ರಜ್ಞಾಸ್ಥಿತಿಗೆ ತಲುಪಿದ್ದೀಯ, ಆದ್ದರಿಂದ ಭೌತಿಕವಾಗಿ ನಿನ್ನನ್ನು ಸಿಂಹಾಸನದ ಮೇಲೆ ಕೂರಿಸುವ ಅನಿವಾರ್ಯತೆ ನಿನಗಿಲ್ಲ. ಕಿರೀಟವಿಲ್ಲದ ದೊರೆಯು ನೀನು. ಪರಿಶುದ್ಧನು, ಕಲ್ಮಷರಹಿತವಾದ, ನಿಶ್ಚಲವಾದ ಆತ್ಮವಿಶ್ವಾಸವನ್ನು ಸದಾ ಹೊಂದಿರು ಎಂದು ಕವಿ ತಮ್ಮ ಆತ್ಮಕ್ಕೆ ಹೇಳಿಕೊಳ್ಳುತ್ತಿದ್ದಾರೆ.

"Think not, O Soul, that thou do'st live,
And neither ponder thou shalt die;
For life and Death shall never strive
To rule the Absolute and High..."[36]

ಕವಿ ಇಲ್ಲಿ, ಸ್ವ ಆತ್ಮಭೋಧನೆಯನ್ನು ಮಾಡಿಕೊಳ್ಳುತ್ತಿದ್ದಾರೆ. ಚಿಂತಿಸದಿರು ಆತ್ಮವೇ, ಹುಟ್ಟಿದ ಪ್ರತಿ ಜೀವಿ, ವಸ್ತು ಯಾವುದೇ ಆದರೂ ಅದಕ್ಕೆ ಅಳಿವು ಖಚಿತ. ಎಲ್ಲವೂ ಸಾಗುತ್ತಿರುತ್ತದೆಂದ ಬುದ್ಧದೇವನ ನುಡಿಯಂತೆ. ಯಾವುದಕ್ಕೂ ಸ್ಥಿರವೆನ್ನುವುದೇ ಇಲ್ಲ. ಬದುಕಿನಲ್ಲಿ ಸಾವು ಎಂಬುದರಿಂದ ಯಾರೂ ಫಲಾಯನಗೈಯಲು ಸಾಧ್ಯವಿಲ್ಲವೆಂಬ ಸತ್ಯವನ್ನು ಅರಿ ಎನ್ನ ಆತ್ಮವೇ, ಬದುಕು ಸಾವುಗಳೆಂದೂ ಆಳಲಳವಲ್ಲ ಎಂದು ಹೇಳುತ್ತಿದ್ದಾರೆ.

ಕುವೆಂಪು The Ancient Bard ಎಂಬ ಶೀರ್ಷಿಕೆಯ ಕವನವನ್ನು ೩೦.೮.೧೯೨೩ರಲ್ಲಿ ರಚಿಸಿದ್ದಾರೆ. ಪ್ರಸ್ತುತ ಕವಿತೆಯು ಭಗವಂತನನ್ನು ಕವಿಯೆಂದೂ ಜಗತ್ತನ್ನು ಅವನ ಕವನವೆಂದೂ ವರ್ಣಿಸಿದ್ದಾರೆ. ಅದರ ಮೊದಲ ಚರಣ ಹೀಗಿದೆ:

"The Lord is but a poet great
The world is but his poem;
Its birth and death none can relate,
Its hard to read his theme."[37]

ಒಬ್ಬ ಕವಿಯು ಹೇಗೆ ಸಾಹಿತ್ಯದ ಸೃಷ್ಟಿಕರ್ತನೋ ಹಾಗೆ ಇಲ್ಲಿ ಕವಿಗೆ ದೇವರು. ಅವನು ಕವಿಯ ಒಳಗಣ್ಣಿಗೆ ಈ ವಿಶ್ವದ ಸೃಷ್ಟಿಗೆ ಕಾರಣನಾದ ಒಬ್ಬ ಕವಿಯ ಹಾಗೆ ಕಾಣಿಸುತ್ತಿದ್ದಾನೆ. ಭಗವಂತನೆಂದರೆ ಕವಿಗೆ ಸೃಷ್ಟಿಕರ್ತ. ತನ್ನ ಲೇಖನಿಯಿಂದ ಸೃಷ್ಟಿಕರ್ತ ತನಗೆ ಬೇಕಾದ ರೀತಿಯಲ್ಲಿ ತನ್ನ ಕಲ್ಪನೆಗೆ ಎಟುಕುವಂತಹ ಎಲ್ಲಾ ಆಟವನ್ನು ಆಡಿಸುತ್ತಿದ್ದಾನೆ. ಅವನೊಬ್ಬನೇ ಇಷ್ಟು ಕೆಲಸಗಳನ್ನು ಅಚ್ಚುಕಟ್ಟಾಗಿ ನಿಭಾಯಿಸುತ್ತಿದ್ದಾನೆ, ಅವನಿಗಲ್ಲದೇ ಮತ್ತಾರಿಗೂ ಭವಿಷ್ಯದ

ಬಗೆಗಿನ ಅರಿವು ಇರುವುದಿಲ್ಲ. ಒಂದು ಹುಲ್ಲು ಕಡ್ಡಿಯೂ ಸಹ ಅವನ ಇಚ್ಛೆ ಮೀರಿ ಅಲುಗಾಡುವುದಿಲ್ಲ. ಅವನು ಆಡಿಸಿದ ಹಾಗೆ ನಾವು ಆಡುತ್ತೇವೆ ಅಷ್ಟೇ (ನಾವು ಅವನ ಆಟಿಕೆಗಳು).

ಕೊನೆಯ ಚರಣ:

"And he that reads with jealous mind
His poem word by word
Can only understand, and fine
The great and Ancient Bard."[38]

ಇಲ್ಲಿ ಕವಿ, ಸೃಷ್ಟಿಕರ್ತನೆಂಬ ದೇವರ ವಿಷಯದಲ್ಲಿ ಬಹಳ ಮಾರ್ಮಿಕವಾಗಿ ತನ್ನ ಭಾವನೆಯನ್ನು ಹಂಚಿಕೊಳ್ಳುತ್ತಿದ್ದಾರೆ. ದೇವರು ಬಹಳ ಅರಸುವ ಕುತೂಹಲದ ವ್ಯಕ್ತಿ. ಅರಸುವಿಕೆ ಕಾವ್ಯಧರ್ಮ. ಕವಿಯ ಮನೋಧರ್ಮ. ತಾನು ಬರೆದ ಕವಿತೆಯ ಸಾಲುಗಳನ್ನು ಅವನು ಜವಾಬ್ದಾರಿಯುತನಾಗಿ ಮತ್ತೊಮ್ಮೆ ಮಗದೊಮ್ಮೆ ಓದುತ್ತಾನೆ. ಅವನು ಬರೆದುದನ್ನು ಮತ್ತಾರು ಅರಿಯಲಾರರು. ಅದು **ಇನ್‌ಸೈಟ್ ಆಫ್ ದ ಪೊಯೆಟ್**. ಅಂದರೆ ಸೃಷ್ಟಿಕರ್ತನ ಬರಹದಲ್ಲಿ ಅಷ್ಟು ಗಹನಾರ್ಥಗಳು, ನಾನಾರ್ಥಗಳು ಅಡಗಿರುತ್ತವೆ. ಹಾಗಾಗಿಯೇ ಕುವೆಂಪು ಸೃಷ್ಟಿಕರ್ತನಾದ ಆತನನ್ನು ಅನಾದಿ ಮಹತ್ಕವಿಯೆಂದು ಕರೆಯುತ್ತಿರುವುದು.

ಕುವೆಂಪು Invocation ಎಂಬ ಕವನವನ್ನು ೫.೧.೧೯೨೪ರಲ್ಲಿ ರಚಿಸಿದ್ದಾರೆ. ಕುವೆಂಪು ತರುಣರಿದ್ದಾಗಲೇ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದರ ಚಿಂತನಾ ಲಹರಿಯು ಅವರ ಮನಸ್ಸಿನ ಮೇಲೆ ಅಗಾಧವಾದ ಪರಿಣಾಮ ಬೀರಿತ್ತು. ಶ್ರೀ ಕೃಷ್ಣನೇ ಅವರ ಆರಾಧ್ಯ ದೈವನಾಗಿದ್ದ. ಪ್ರತಿ ರಾತ್ರಿಯು ಮಲಗುವ ಮುನ್ನ ಅವನ ಸ್ಮರಣೆ ಮಾಡಿಯೇ ಮಲಗುವ ಅಭ್ಯಾಸ ಅವರಲ್ಲಿತ್ತು. ಅವರ ನೆನಪಿನ ದೋಣಿಯಲ್ಲಿ ಪ್ರಸ್ತುತ ಕವಿತೆಯನ್ನು ಕುರಿತು ಹೀಗೆ ಹೇಳಿದ್ದಾರೆ–

'ಅಂದು ಕೂಡ ಶ್ರೀಕೃಷ್ಣಚೈತನ್ಯ ಮತ್ತು ಇತರ ನನ್ನ ಮಹಾಮಹೋನ್ನತರೂ ವಿಶ್ವವ್ಯಾಪಿಗಳೂ ನಿತ್ಯಚೇತನಗಳೂ ಆಗಿರುವ ಗುರುಗಳನ್ನು ನೆನೆಯುತ್ತಾ ಮಲಗಿದ್ದೆನು. ಆಗ ಆ ರಾತ್ರಿ ನನಗೆ ಒಂದು ಕನಸು ಬಿತ್ತು. ನನ್ನ ತಾಯಿಯ ಬಳಿ ಹೋಗಿದ್ದೆ. ಆಕೆಯ ಕೃಪೆಯಿಂದ ಒಬ್ಬ ಮಹಾಪುರುಷನ ದರ್ಶನವಾಯಿತು. ಅವನು ಬೃಹದಾಕಾರನಾಗಿದ್ದ, ಆದರೂ ಸುಂದರವಾಗಿದ್ದ. ಸಾಮಾನ್ಯ ಮನುಷ್ಯರಿಗಿಂತ ನಾಲ್ಕು ಪಟ್ಟು ಎತ್ತರವಾಗಿದ್ದ, ಅವನು ಅಮರ್ತ್ಯವಾಗಿ ಪ್ರಕಾಶಿತನಾಗಿದ್ದ. ನನ್ನ ಕಡೆ ಕೈ ಬೀಸಿ ಕರೆದ. ಅವನು ಒಳ್ಳೆಯವನೊ ಅಲ್ಲವೊ ಅಸುರನೊ ಸುರನೊ ಯಾವುದನ್ನೂ ಗಣಿಸದೆ ಗೋಡೆ ಹತ್ತಿ ಬಳಿಗೆ ಹೋದೆ. ಮಾತೃಹೃದಯದಿಂದ ಮಾತನಾಡಿಸಿದ. ಅವನ ಪಕ್ಕದಲ್ಲಿ ನಡೆಯುತ್ತಾ ನಾನೊಂದು ಕುಬ್ಜನಾಗಿದ್ದೆ, ಗಲಿವರನ ಪಕ್ಕದಲ್ಲಿ ಲಿಲಿಪುಟ್ಟನಿಗಿಂತಲೂ. ಉದ್ಯಾನವನದಲ್ಲಿ ಅವನ ಎಡೆಯಲ್ಲಿ ನಡೆಯುತ್ತಿದ್ದಾಗ ನನಗಾದ ಆನಂದವನ್ನು ವರ್ಣಿಸಲಾರೆ.

ನಾವಿಬ್ಬರೂ ಸ್ವಲ್ಪ ದೂರ ನಡೆದಿದ್ದೆವು, ಅಷ್ಟರಲ್ಲಿ ಯಾರೋ ಕೆಲವರು ನಮ್ಮ ಕಡೆ ಬರುತ್ತಿದ್ದನ್ನು ಕಂಡೆವು. ಆಗ ಆ ಮಹಾವ್ಯಕ್ತಿ ನನಗೆ ಏನನ್ನೊ ಕೊಟ್ಟು ತಿನ್ನಲು ಹೇಳಿದನು. ಅದರ ಹೆಸರನ್ನೂ ಹೇಳಿದನು; ನಾನು ಕೇಳಿಸಿಕೊಂಡೆ; ಆದರೆ ಈಗ ಅದರ ನೆನಪು ಸರಿಯಾಗಿ ಆಗುತ್ತಿಲ್ಲ. ಆದರೂ ನಾನು ಊಹಿಸುವಂತೆ ಅದೊಂದು ಗಿಡಮೂಲಿಕೆಯ ಹೆಸರಾಗಿತ್ತು. ತರುವಾಯ ನಾವಿಬ್ಬರೂ ಅಗಲಿದೆವು.'[೩೯]

ಇಂಥ ದೈವಿಕಾನುಭವವನ್ನು ಹೊತ್ತುಕೊಂಡು, ಕವಿ Invocation ಎಂಬ ಕವಿತೆಯ ಮೂಲಕ ಓದುಗರಿಗೆ ಅವರಿಗಾದ ರೋಮಾಂಚಕಾರಿ ಅನುಭವವದ ರಸದೌತಣವನ್ನು ಉಣಬಡಿಸುತ್ತಿದ್ದಾರೆ.

"O Lover of my soul, when thy infinite
form stands before me with the might of
the Present, the Future and the Past, beyond
Space and Time, my locks flutter in anxiety,
my eyes stand still in silent adoration;
my heart throbs with an aweful delight
and I forget to bow down before thee."[40]

ಈ ಸಾಲುಗಳಲ್ಲಿ ಭಗವಂತನ ವಿಶ್ವರೂಪ ಕಂಡ ಸಂತಸ ಕಾಣಿಸುತ್ತಿದೆ. 'ನನ್ನ ಪ್ರೇಮಮಯನನ್ನು ಬಯ್ದು ಶಪಿಸುವಂತೆಯೂ ಮನಸ್ಸು ಓಲಿತು! ಆಗ ನಾನಿದ್ದ ಸ್ಥಿತಿಯನ್ನು ಭಾಷೆ ಬಣ್ಣಿಸಲಾರದು. ಆದರೆ ಬಹುಬೇಗ ಅನಂತರೂಪವನ್ನು ತಿರಸ್ಕರಿಸಿಬಿಟ್ಟೆ. ಆಗ ಬಾಲಕೃಷ್ಣನ ಮಧುರ ರೂಪ ನನ್ನ ಮುಂದೆ ಮೈದೋರಿತು, ನನ್ನನ್ನು ಸಮಾಧಾನ ಪಡಿಸುತ್ತಾ ನನ್ನೆದುರು ಕುಣಿಯುತ್ತಾ ನಲಿಯುತ್ತಾ ನಗುತ್ತಾ[೪೧] ಇದ್ದನು'. ಇಲ್ಲಿ ಶ್ರೀ ಸದ್ಗುರು ಬ್ರಹ್ಮಾನಂದ ಮಹಾರಾಜರ ತತ್ವವೊಂದರ ಹೋಲಿಕೆ ಕವಿ ಕುವೆಂಪು ಅವರ ಮೇಲಿನ ಸಾಲುಗಳಿಗೆ ಸಮಂಜಸವೆಂದೆನಿಸುತ್ತಿದೆ.

ಸಚ್ಚಿದಾನಂದವೆಂಬ ನಿರಾಕಾರ ಪರಮಾತ್ಮನೊಂದಿಗೆ ಜೀವಾತ್ಮನೆಂಬ ಸಾಕಾರ ಮೂರ್ತಿಯು ನೀನು. ಭುವಿಯನ್ನು ಕೂಡಿಸಲು ಭಗವಂತನೇ ಸ್ವಯಂ ಗುರುವಾಗಿ ಕಾಲ ಕಾಲದಲ್ಲಿ, ಭಿನ್ನ ಸ್ಥಳಗಳಲ್ಲಿ ಶರೀರ ತಳೆದು ಅವತರಿಸುತ್ತಾನೆ. ಅಸತ್ಯದಿಂದ–ಸತ್ಯ, ತಮಸ್ಸಿನಿಂದ–ಬೆಳಗು, ಮೃತ್ಯುವಿನಿಂದ–ಅಮೃತತ್ವವನ್ನು ದರ್ಶಿಸಲು ಗುರುವು ಧರೆಗಿಳಿಯುತ್ತಾನೆ ಎಂದು ಸದ್ಗುರು ಬ್ರಹ್ಮಾನಂದರು ಹೇಳಿದ್ದಾರೆ.

"O lover, grant me the vision supreme
and blest that I may see thee in
everything, in bliss and woe, in pleasure and
pain, in life and death."[42]

ಶ್ರೀ ಕೃಷ್ಣ ಚೈತನ್ಯದೇವನ ಜೀವನ ಚರಿತ್ರೆಯ ಮತ್ತು ರವೀಂದ್ರರ ಗೀತಾಂಜಲಿಯ ಪ್ರಭಾವಗಳನ್ನು ಈ ಕವನದಲ್ಲಿ ಗುರುತಿಸಬಹುದು. ಈ ಕವಿತೆಯು ವಚನ ಕವನ ಶೈಲಿಯಲ್ಲಿ ರಚನೆಯಾಗಿದೆ. ಮುಖ್ಯವಾಗಿ ವಿಶ್ವವ್ಯಾಪಿಯಾದ ಭಗವಂತನನ್ನು ಭಕ್ತಜೀವ ಸೃಷ್ಟಿಯ ನಾನಾ ರಸಗಳಲ್ಲಿಯೂ ವ್ಯಾಪಾರಗಳಲ್ಲಿಯೂ ಅನುಭಾವಿಸುವ ಹಾಗೆ ಪ್ರಸ್ತುತ ಕವನವಿದೆ. ಕವಿ ತಾನು ಆರಾಧಿಸುತ್ತಿರುವ ದಿವ್ಯಪ್ರಭೆಯನ್ನು ಪ್ರತಿ ಭಾವದ ನವರಸಗಳಲ್ಲಿಯೂ ಪರಿಭಾವಿಸುವ ಪರಿಕಲ್ಪನೆಯ ಕವನವಿದು. ಕವಿ ಇಲ್ಲಿ ಧ್ಯಾನಿಸುತ್ತಿರುವುದು ಎಲ್ಲವನ್ನೂ ತನ್ನೊಳಗೆ ಅಡಗಿಸಿಕೊಂಡಿರುವ ಆ ದಿವ್ಯಪ್ರಭೆಯ ಕುರಿತು. ಕುವೆಂಪು ಅವರ ದಾರ್ಶನಿಕ ಚೈತನ್ಯವನ್ನೆಚ್ಚರಿಸಿ ಅವರಿಗೆ ವೇದಾಂತದೀಕ್ಷೆಯನ್ನು ನೀಡಿದ್ದೇ ಆ ವಿವೇಕಾನಂದ ಶಕ್ತಿ. ಆ ಸಣ್ಣ ವಯಸ್ಸಿನಲ್ಲಿಯೇ ಅವರು ಜಗತ್ತಿನ ಒಂದೊಂದು ವಸ್ತುವನ್ನೂ, ಘಟನೆಯನ್ನೂ ಬ್ರಾಹ್ಮೀದೃಷ್ಟಿಯಿಂದಲೇ ವೀಕ್ಷಿಸುವ ಸಾಮರ್ಥ್ಯವನ್ನು ಪಡೆಯುತ್ತಾರೆ. ಅವರ ದೃಷ್ಟಿಯಲ್ಲಿ, ಚಿಂತನೆಗಳಲ್ಲಿ, ಅವರ ಸಕಲ ವ್ಯವಹಾರಗಳಲ್ಲಿ ದಾರ್ಶನಿಕ ಧಾತುವೆ ಪ್ರಧಾನವಾಗುತ್ತದೆ. ಬೈಬಲ್ಲು, ಪಾಶ್ಚಾತ್ಯ ತತ್ವಶಾಸ್ತ್ರ, ಭಾರತೀಯ ದರ್ಶನ ಪರಂಪರೆಗಳನ್ನು ಅಧ್ಯಯನ ಮಾಡಿದ ನಂತರ ವೇದಾಂತವೇ ಸರ್ವಶ್ರೇಷ್ಠ ದಾರ್ಶನಿಕ ನಿಧಿಯೆಂದು, ಅದ್ವೈತ ದರ್ಶನವೆ ಪರಮಾರ್ಥವೆಂದು ಅವರಿಗೆ ಮನದಟ್ಟಾದಂತಿದೆ.

ಕುವೆಂಪು ಅವರು The Lover's Embrace ಎಂಬ ಕವನವನ್ನು ೩೧.೧೨.೧೯೨೩ರಲ್ಲಿ ರಚಿಸಿದ್ದಾರೆ. ಪ್ರಸ್ತುತ ಕವಿತೆಯಲ್ಲಿ ಶ್ರೀ ಕೃಷ್ಣ ಚೈತನ್ಯ ದೇವನ ಜೀವನ ಚರಿತ್ರೆಯ ಮತ್ತು ರವೀಂದ್ರರ ಗೀತಾಂಜಲಿಯ ಪ್ರಭಾವಗಳನ್ನು ಈ ಕವನದಲ್ಲಿ ಗುರುತಿಸಬಹುದು. ಈ ಕವಿತೆಯು ವಚನ ಕವನ ಶೈಲಿಯಲ್ಲಿ ರಚನೆಯಾಗಿದೆ. ಮುಖ್ಯವಾಗಿ ಇಲ್ಲಿ ಕವಿ, ವಿಶ್ವವ್ಯಾಪಿಯಾದ ಭಗವಂತನನ್ನು ಭಕ್ತಜೀವ ಸೃಷ್ಟಿಯ ನಾನಾ ರಸಗಳಲ್ಲಿಯೂ ವ್ಯಾಪಾರಗಳಲ್ಲಿಯೂ ಅನುಭಾವಿಸುವ ಹಾಗೆ ಪ್ರಸ್ತುತ ಕವನವನ್ನು ರಚಿಸಿದ್ದಾರೆ. ಅಂದರೆ ಇಲ್ಲಿ ಕವಿ, ತಾನು ಆರಾಧಿಸುತ್ತಿರುವ ದಿವ್ಯಪ್ರಭೆಯನ್ನು ಪ್ರತಿ ಭಾವದ ನವರಸಗಳಲ್ಲಿಯೂ ಪರಿಭಾವಿಸುವ ಪರಿಕಲ್ಪನೆಯ ಕವನವಿದು. ಎಲ್ಲವನ್ನೂ ತನ್ನೊಳಗೆ ಅಡಗಿಸಿಕೊಂಡಿರುವ ಆ ದಿವ್ಯ ಪ್ರಭೆಯ ಕುರಿತು ಕವಿ ಇಲ್ಲಿ ಧ್ಯಾನಿಸುತ್ತಿರುವುದು. ಕುವೆಂಪು ಅವರ ದಾರ್ಶನಿಕ ಚೈತನ್ಯವನ್ನೆಚ್ಚರಿಸಿ ಅವರಿಗೆ ವೇದಾಂತ ದೀಕ್ಷೆಯನ್ನು ನೀಡಿದ್ದೇ ಆ ವಿವೇಕಾನಂದ ಶಕ್ತಿ. ಆ ಸಣ್ಣ ವಯಸ್ಸಿನಲ್ಲಿಯೇ ಅವರು ಜಗತ್ತಿನ ಒಂದೊಂದು ವಸ್ತುವನ್ನೂ, ಘಟನೆಯನ್ನೂ ಬ್ರಾಹ್ಮೀ ದೃಷ್ಟಿಯಿಂದಲೇ ವೀಕ್ಷಿಸುವ ಸಾಮರ್ಥ್ಯವನ್ನು ಪಡೆಯುತ್ತಾರೆ. ಅವರ ದೃಷ್ಟಿಯಲ್ಲಿ, ಚಿಂತನೆಗಳಲ್ಲಿ, ಅವರ ಸಕಲ ವ್ಯವಹಾರಗಳಲ್ಲಿ ದಾರ್ಶನಿಕ ಧಾತುವೆ ಪ್ರಧಾನವಾಗುತ್ತದೆ. ಬೈಬಲ್ಲು, ಪಾಶ್ಚಾತ್ಯ ತತ್ವಶಾಸ್ತ್ರ ಭಾರತೀಯ ದರ್ಶನ ಪರಂಪರೆಗಳನ್ನು ಅಧ್ಯಯನ ಮಾಡಿದ ನಂತರ ವೇದಾಂತವೇ ಸರ್ವಶ್ರೇಷ್ಠ ದಾರ್ಶನಿಕ ನಿಧಿಯೆಂದು, ಅದ್ವೈತ ದರ್ಶನವೆ ಪರಮ ಪರಮಾರ್ಥವೆಂದು ಅವರಿಗೆ ಮನದಟ್ಟಾಗುತ್ತದೆ.

"Thou comest, O my sweet lover, covering thyself
with the foliage of the Champak a tree that dances
and waves with languid breath of the gloom.

Thou comest with the melody of the sweet
music that flows from an unknown distance,
and hearing the cadence of thy feet my bosom
swells with a meaningless joy."[43]

ಈ ಕವಿತೆಯಲ್ಲಿ ದೇವ ನೀನು ದಾಸ ನಾನು ಎನ್ನುವ ಭಾವದ ಪರಿಕಲ್ಪನೆ ಇದೆ. ಕವಿ ಇಲ್ಲಿ ಅದ್ವೈತದ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದಾರೆ. ಅದ್ವೈತ ಸಿದ್ಧಾಂತದ ಪ್ರಕಾರ ಜೀವವಿರುವ ಮತ್ತು ಜೀವವಿಲ್ಲದ ಸರ್ವವೂ ದೈವಿಕತೆಯನ್ನು ಹೊಂದಿರುವವುಗಳೂ ಪವಿತ್ರವೂ ಆಗಿವೆ. ಇಲ್ಲಿ ಸಂಪಿಗೆ ಎಲೆಗೂ ಕೂಡ ದೈವದ ಸ್ಪರ್ಶದ ದೈವತ್ವದ ಲೇಪನೆಯಾಗಿದೆ. ಆ ದೈವದ ಮಧುರ ಸಂಗೀತ ಎಲ್ಲೋ ದೂರದಲ್ಲಿ ಹರಿದು ಬರುತ್ತಿದೆ, ನೀನು ಈ ದಾಸನ ಸನಿಹಕ್ಕೆ ಆಗಮಿಸುವ ನಿನ್ನ ಹೆಜ್ಜೆಯ ಸದ್ದಿನ ತರಂಗಗಳು ನನ್ನಲ್ಲಿ ಅಗಾಧವಾದಂತಹ ಸಂತೋಷವನ್ನು ನೀಡುತ್ತಿದೆ ಎಂದು ಬಣ್ಣಿಸುತ್ತಿದ್ದಾರೆ.

ಕುವೆಂಪು ಕಾವ್ಯಕ್ಷೇತ್ರವನ್ನು ಪ್ರವೇಶಿಸಿದ್ದು ಇಂಗ್ಲೀಷಿನ ಹೆಬ್ಬಾಗಿಲ ಮೂಲಕವೆಂಬುದು ಸರ್ವವೇದ್ಯ ಸಂಗತಿ. ತರುಣ ಕವಿ ಕುವೆಂಪು ಅವರು ಉಪನಿಷತ್ತುಗಳನ್ನು ಓದಿದ ಮೇಲೆ (Lines written after reading the Upanishads) ಎಂಬ ಕವನವನ್ನು ಬರೆದರು. ಇದು ಜೀವ ನಶ್ವರತೆಯನ್ನೂ, ಜೀವಪರವಾದ ನಿರಸನದ ಅಗತ್ಯವನ್ನೂ ಕುರಿತು ಹೇಳುತ್ತದೆ.

"We are the children of all ages;
Our morn has just begun,
And we see our glorious sun
Rising in the horizon,
We shall begin again

To end in vain
The work of all the sages..."[44]

ಕುವೆಂಪು ಬಾಲ್ಯದಲ್ಲಿಯೇ ರಚಿಸಿದ ಹಲವು ಕವಿತೆಗಳಲ್ಲಿ ಕವಿಯ ದರ್ಶನ ಸಮೃದ್ಧವಾದ ಮನೋಧರ್ಮವನ್ನು ಗುರುತಿಸಬಹುದು. ಜೀವನ ಸಂಸ್ಕಾರಕ್ಕೆ ಮತ್ತು ಈಗ ತಾನೆ ಅಂಬೆಗಾಲು ಇಡುತ್ತಿರುವವನಂತೆ ಅಥವಾ ಈಗಷ್ಟೇ ಬೀಜದಿಂದ ಚಿಗುರೊಡೆಯುತ್ತಿರುವ ಸಸಿಯ ಹಾಗೆ ಉದಯದ ಅಂಚಿನಲ್ಲಿರುವ ನವತರುಣರಿಗೆ ನಮ್ಮ ಹಿರಿಯರ ಸಾಧನೆಗಳ ಮಂಥನ ಸರ್ವಕಾಲಕ್ಕೂ ಅತ್ಯಗತ್ಯವೆಂಬ ನಿರಹಂಕಾರಿ ಭಾವ ಅವರಲ್ಲಿ ಪಡಿಮೂಡಿದುದು ಮೇಲಿನ ಕವಿತೆಯಲ್ಲಿ ವ್ಯಕ್ತವಾಗಿದೆ.

ಕುವೆಂಪು ಅವರು ಸಾಹಿತ್ಯಕ ಬದುಕಿನ ಉದ್ದಕ್ಕೂ ಕಾವ್ಯ ರಚನೆಯಲ್ಲಿ ಅನೇಕ ಪ್ರಯೋಗಗಳನ್ನು ನಡೆಸುತ್ತಿದ್ದರು. ಈ ಕವಿಪ್ರತಿಭೆ 'ವಚನ ಕವನ' ಪ್ರಕಾರದಲ್ಲಿಯೂ ಕೈಯಾಡಿಸಿದೆ. ಇವು ಪ್ರಮುಖವಾಗಿ ಸಂಕಲನದಲ್ಲಿ ಕೂಡಿವೆ.

ಜೀವನ ಸಂಸ್ಕಾರಕ್ಕೆ ಸಾವು ಅತ್ಯಗತ್ಯವೆಂಬ ಶಾಶ್ವತ ತತ್ವವನ್ನು ಕುರಿತು ರಚಿಸಿದ ಒಂದು ಕವನ Lines written at the thought of Death (ಮೃತ್ಯುಚಿಂತನೆಯಿಂದ ಉದಯಿಸಿದ ಪಂಕ್ತಿಗಳು); ೨೭.೧೨.೧೯೨೭ರಲ್ಲಿ ರಚಿಸಿದ್ದು.

"They want tears, but I hide them in the life-boat
of my heart, and they see no signs of woe;
They want wailing loud, but silent I stand"[45]

ಸಾವಿನ ಬಗ್ಗೆ ಒಂದು ಆಲೋಚನೆ ಮೂಡಿದಾಗ ಬರೆದಂತಹ ಕವನವಿದು. ಕವಿ ಇಲ್ಲಿ ಸಾವನ್ನು ಎದುರು ನೋಡುತ್ತಿರುವವನನ್ನು ನೋಡಲು ಹೋದ ಗುಂಪಿನಲ್ಲಿ ತಾನೂ ನಿಂತು ನೋಡುತ್ತಿದ್ದಾರೆ. ಅಲ್ಲಿ ನೆರೆದಿರುವ ಜನಕ್ಕೆ ಅದು ಶೋಕದ ಸಂಗತಿ ಮತ್ತು ಆ ಸಂದರ್ಭದಲ್ಲಿ ಎಲ್ಲರೂ ಅಳಬೇಕೆಂಬ ಗಾಢವಾದ ನಂಬಿಕೆಯನ್ನುಳ್ಳವರು ಆ ಜನ. ಅದರೆ ಅಲ್ಲಿ ಕವಿಗೆ ಕಣ್ಣೀರು ಬರುತ್ತಿಲ್ಲ, ಅಲ್ಲಿನ ಜನಕ್ಕೆ ಕವಿಯ ಮುಖದಲ್ಲಿ ಯಾವುದೇ ಬದಲಾವಣೆಯು ಕಾಣುತ್ತಿಲ್ಲ ಮತ್ತು ಅವರಿಗೆ ಕವಿಯಲ್ಲಿ ಯಾವ ದುಃಖದ ಛಾಯೆಯು ಕಾಣಿಸುತ್ತಿಲ್ಲ, ನಾನೂ ಕೂಡ ಅವರಂತೆ ಜೋರಾಗಿ ಕಣ್ಣೀರು ಸುರಿಸಬೇಕೆಂದು ಅವರುಗಳು ಎದುರುನೋಡುತ್ತಿದ್ದಾರೆ. ಆದರೆ ಕವಿ ಸ್ಥಿತಪ್ರಜ್ಞರಾಗಿ ನಿಂತಿದ್ದಾರೆ.

"And my heart responds to the call of love;
They bid me bow down and worship, but
I raise my head and gaze at the tranquil above;
Then some laugh at me, and rancour
rebukes, and some with reddened eyes
look stern in the face.
I neither laugh at them, nor sternly look
them in the face
But sing and dance in rhythms of joy,
laughter and scorn.
All for thee, thou flower-seller who dost
sell flowers of joy;
All for thee, O player who playest with
the tender leaves of spring,
O Dancer in the shady brooks that flow
and flowing sing their rocky lay;

O Enjoyer of the sweet Champak flower
that toils, and in labour sees
its holiday"[46]

ಇಲ್ಲಿ ಕವಿ ಸಾವಿನ ಬಗ್ಗೆ ನನ್ನಲ್ಲಿ ಎಳ್ಳಷ್ಟೂ ಅಂಜಿಕೆಯಿಲ್ಲ, ಬದುಕು ಸಾವಿಗಿಂತ ಮುಖ್ಯವಾದಂತಹದನ್ನ ಕೊಡುತ್ತದೆ, ಸಾವಿನಲ್ಲಿ ಶೋಕ ವ್ಯಕ್ತಪಡಿಸುವ ಅವಶ್ಯಕತೆಯಿಲ್ಲ ಎಂಬ ಮೇಲುಮಟ್ಟದ ತತ್ವಕ್ಕೆ ಬದ್ಧರಾಗಿದ್ದಾರೆ. 'ಕೆಲವರು ನನ್ನನ್ನು ನೋಡಿ ನಕ್ಕರು, ದ್ವೇಷಿಸಿ ಖಂಡಿಸಿದರೂ ನನ್ನಲ್ಲಿ ಅವರ ಬಗ್ಗೆ ಅನುಕಂಪವಿದೆಯೆ ಹೊರತು ದ್ವೇಷವಿಲ್ಲ. ಯಾರೇ ಈ ಪ್ರಪಂಚವನ್ನು ಅಗಲಿದರೂ, ನಿತ್ಯಕರ್ಮಗಳಲ್ಲಿ ಯಾವುದೇ ವ್ಯತ್ಯಾಸವಾಗದು. ಉದಾಹರಣೆಗೆ, ಆ ಹೂ ಮಾರುವವನು ಯಥಾ ಪ್ರಕಾರ ಸಂತೋಷವಾಗಿ ಹೂ ಮಾರುತ್ತಿದ್ದಾನೆ, ಅಲ್ಲಿ ಆಡುವವನು ಆಡುತ್ತಿದ್ದಾನೆ. ಜುಳು ಜುಳು ನಾದದ ಹರಿಯುವ ನದಿ ಹರಿಯುತ್ತಿದೆ. ಸಂಪಿಗೆ ಹೂವಿನ ಚೆಲುವನ್ನು ನೋಡಿ ಸಂತೋಷ ಪಡುವವನು ಅದನ್ನು ನೋಡಿ ಆನಂದಿಸುತ್ತಿದ್ದಾನೆ. ಕಷ್ಟಪಟ್ಟು ದುಡಿಯುವವನು ಅವನ ರಜೆಯ ನಿರೀಕ್ಷೆಯಲ್ಲಿದ್ದಾನೆ. ಹೀಗೆ ಪ್ರಪಂಚದ ಎಲ್ಲಾ ವಿದ್ಯಮಾನಗಳು ನಿಸರ್ಗ ಸಹಜವಾಗಿಯೇ ನಡೆದುಕೊಂಡು ಹೋಗುತ್ತಿದೆ. ಹಾಗಾಗಿ ನಾನಿದ್ದರೂ ಅಷ್ಟೇ ನಾನಿಲ್ಲದಿದ್ದರೂ ಅಷ್ಟೇ'.

ಸಾವಿನ ಬಗ್ಗೆ ಹೆದರುವ ಅವಶ್ಯಕತೆಯಿಲ್ಲ. ಅದು ನಿಸರ್ಗ ಸಹಜವಾದ ಕ್ರಿಯೆ. ಅದರಿಂದ ಈ ಪ್ರಪಂಚದ ಮೇಲೆ ಯಾವ ಕರಿ ನೆರಳು ಬೀಳುವ ಅಗತ್ಯವಿಲ್ಲ, ಹುಟ್ಟು ಸಾವು ಎರಡು ಒಂದೇ ಎಂದು ಈ ಕವಿತೆಯಲ್ಲಿ ಪ್ರತಿಪಾದಿಸಿದ್ದಾರೆ. ಈ ವಿಚಾರವನ್ನು ಆಚಾರ್ಯ ರಜನೀಶ್ ಮತ್ತು ಅನೇಕರು ಹೀಗೆಯೇ ಪ್ರತಿಪಾದಿಸಿದ್ದಾರೆ.

ಅನಂತರದಲ್ಲಿ ಕುವೆಂಪು 'ಕಿಂಕಿಣಿ'ಯಲ್ಲಿ ಇದೇ ಸಾರವನ್ನನುಸರಿಸಿ ಅಶ್ರು ಅವಿನಶ್ವರ! ಎಂಬ ವಚನ ಕವನವನ್ನು ೧೯೪೬ರಲ್ಲಿ ರಚಿಸಿದ್ದಾರೆ. ಅದು ಹೀಗಿದೆ–

"ಮಡಿದರವರು, ಹೋದರಿವರು, ಇವನು ಅಳನೇಕೆ? ಎಂದು ಅವರಿವರಾಡಿ ಕೊಂಬರು.
ಅಕ್ಕರೆ ಇಲ್ಲದವನು, ಕಂಬನಿಯಿಲ್ಲದವನು, ಕಲ್ಲೆದೆಯವನು, ಎಂದೆಲ್ಲ ನುಡಿಯುವರು.
ಒಲವಿರುವುದೆನಗೆ, ಕಣ್ಣೀರಿಹುದೆನೆಗೆ, ಮೆಲ್ಲೆದೆಯಿಹುದೆನೆಗೆ."[೪೭]

ಬಹುಶಃ ತಾನು ನಿರ್ಭಾವುಕನೆಂದು ಬಗೆದವರಿಗೆ ಕೊಟ್ಟ ಉತ್ತರವಿರಬೇಕು, ಇದು.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೬೪೨, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨. ಅದೇ, ಪುಟ ೬೪೨.

೩. ಅದೇ, ಪುಟ ೪೧೯.

೪. ಅದೇ, ಪುಟ ೪೧೯.

೫. ಅದೇ, ಪುಟ ೪೧೯–೪೨೦.

೬. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೪೯೨, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೯೪೭, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೪೧, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೯. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೪೮, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ.

೧೦. ಅದೇ, ಪುಟ ೪೮.

೧೧. ಕುವೆಂಪು ; ನನ್ನ ಗೋಪಾಲ ; ಪುಟ ೭, ಎಂಟನೆಯ ಮುದ್ರಣ ೨೦೧೫, ಉದಯರವಿ ಪ್ರಕಾಶನ, ಮೈಸೂರು.

೧೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ ೨ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೧೦೦೪, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ.

೧೩. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೨೩೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೯೭೮, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೫. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೧೯೪, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೬. ಅದೇ, ಪುಟ ೪೧೭.

೧೭. ಅದೇ, ಪುಟ ೪೧೮.

೧೮. ಅದೇ, ಪುಟ ೪೨೨.

೧೯. ಅದೇ, ಪುಟ ೪೧೯.

೨೦. ನಾಗತಿಹಳ್ಳಿ ಚಂದ್ರಶೇಖರ್ ಅವರ ಸಾವು ಎಂಬ ಲೇಖನ, ಪ್ರಜಾವಾಣಿ ಪತ್ರಿಕೆಯಲ್ಲಿ ೨.೩.೨೦೧೪ರಂದು.

೨೧. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೫೩೮–೫೩೯, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಶಿವಾರೆಡ್ಡಿ ಕೆ.ಸಿ., ಪುಟ ೯೬೬, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨೩. William Shakespeare ; Romeo And Juliet ; Page 39 ; Volume IV Book IX.

೨೪. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೧೦೧೭, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೫. ಅದೇ, ಪುಟ ೧೦೧೭.

೨೬. ಕುವೆಂಪು : ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ : ಸಂ. ಶಿವಾರೆಡ್ಡಿ ಕೆ.ಸಿ., ಪುಟ ೬೪೬, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨೭. ಕುವೆಂಪು : ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ : ಸಂ. ಶಿವಾರೆಡ್ಡಿ ಕೆ.ಸಿ., ಪುಟ ೯೬೦, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ. ಮೊದಲ ಮುದ್ರಣ, ೨೦೦೪.

೨೮. ಅದೇ, ಪುಟ ೯೬೦.

೨೯. ಅದೇ, ಪುಟ ೯೬೦.

೩೦. ಅದೇ, ಪುಟ ೯೬೦.

೩೧. ಅದೇ, ಪುಟ ೯೬೧.

೩೨. ಅದೇ, ಪುಟ ೯೩೪.

೩೩. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೨೦ ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೩೪. ಅದೇ, ಪುಟ ೨೨೦.

೩೫. ಅದೇ, ಪುಟ ೨೦೬.

೩೬. ಅದೇ, ಪುಟ ೨೦೬.

೩೭. ಅದೇ, ಪುಟ ೨೧೭.

೩೮. ಅದೇ, ಪುಟ ೨೧೭.

೩೯. ಅದೇ, ಪುಟ ೨೩೫.

೪೦. ಅದೇ, ಪುಟ ೨೩೬.

೪೧. ಅದೇ, ಪುಟ ೨೩೬.

೪೨. ಅದೇ, ಪುಟ ೨೩೬.

೪೩. ಅದೇ, ಪುಟ ೨೨೯.

೪೪. ಅದೇ, ಪುಟ ೨೧೧.

೪೫. ಅದೇ, ಪುಟ ೨೨೮.

೪೬. ಅದೇ, ಪುಟ ೨೨೮.

೪೭. ಕುವೆಂಪು : ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ : ಸಂ. ಶಿವಾರೆಡ್ಡಿ ಕೆ.ಸಿ., ಪುಟ ೭೨೬, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

* * * * * *

## ೪.೩. ಆಧ್ಯಾತ್ಮಿಕದ ಪರಿಕಲ್ಪನೆ

ದೃಗ್ಗೋಚರವಾದ ಬದುಕನ್ನು ಮೀರಿದ ಅನುಭವ ಜಗತ್ತೊಂದು ಇದೆ. ಅದು ಮನೋಗ್ರಾಹ್ಯ. ಅದೇ ಆದಿಭೌತಿಕ ಜಗತ್ತು ಅಥವಾ 'Metaphysical world.' ಇದಕ್ಕೆ relating to a reality beyond what is perceptible to the senses ಎಂಬ ವಿವರಣೆಯಿದೆ. ಅಂದರೆ ಇಂದ್ರಿಯಗಮ್ಯವಲ್ಲದ ವಾಸ್ತವ ಎಂದು ಅರ್ಥ. ಸಾಮಾನ್ಯ ಮನುಷ್ಯ ಇಂದ್ರಿಯಗಳ ಮೂಲಕ ಲೋಕವಿದ್ಯೆಯ ಗ್ರಹಣ ಮಾಡಿದರೆ ಒಬ್ಬ Metaphysical ಅಂದರೆ ಆಧ್ಯಾತ್ಮಿಕ ಮನುಷ್ಯ ಅದನ್ನು ಮೀರಿದ ಸ್ವ-ಶಕ್ತಿಯೊಂದರ ಮೂಲಕ ಲೋಕವನ್ನು ಕಾಣುತ್ತಾನೆ. ಈ ನೆಲಕ್ಕೆ ಅಂಟಿದ ಲೋಕ ಜೀವನವನ್ನು ಅವನು ಬೇರೊಂದು ಬಗೆಯಲ್ಲಿ ಪರಿಭಾವಿಸುವ ಮೂಲಕ ಆಧ್ಯಾತ್ಮಿಕ ಅನುಭವವನ್ನು ಹೊಂದಬಹುದು. ಮೆಟಫಿಸಿಕಲ್ ಅನ್ನುವುದು ಸುಲಭಗ್ರಾಹ್ಯವಲ್ಲ. ಅದನ್ನು ಬಗೆಯುವ ಮತ್ತು ಅರ್ಥೈಸಿಕೊಳ್ಳುವ ಸಾಮರ್ಥ್ಯದ ಮೂಲಕ ಕಂಡುಕೊಳ್ಳಬೇಕಾಗುತ್ತದೆ. ಒಟ್ಟು ಸೃಷ್ಟಿಯ ಜೀವ ಚೈತನ್ಯವನ್ನು ಸಾಮಾನ್ಯರಂತಲ್ಲದೆ ಭಿನ್ನವಾಗಿ ಕಂಡ ಕುವೆಂಪು ಈ ರೀತಿಯ ಮೆಟಫಿಸಿಕಲ್ ಕವಿ.

ವ್ಯಕ್ತಿ ತನ್ನ ಭೌತಿಕ ಅನುಭವಕ್ಕೆ ಭಿನ್ನವಾದ ಮಾನಸಿಕ ರೂಪವನ್ನು ದಕ್ಕಿಸಿಕೊಂಡಾಗ ಮಾತ್ರ ಆಧ್ಯಾತ್ಮಿಕತೆಯನ್ನು ಪಡೆಯಲು ಸಾಧ್ಯವಾಗುತ್ತದೆ. ಹಾಗೆ ಪ್ರತಿಯೊಬ್ಬರ ಆಧ್ಯಾತ್ಮಿಕತೆಯ ಅನುಭವವು ಒಂದೇ ವಸ್ತುವನ್ನು ಕುರಿತಿದ್ದರೂ ವಿಭಿನ್ನವೂ, ವಿಶಿಷ್ಟವೂ ಆಗಿರುತ್ತದೆ. ಆಧ್ಯಾತ್ಮವನ್ನು ಗ್ರಹಿಸುವ ಕ್ರಮವೂ ಒಬ್ಬರಿಂದ ಮತ್ತೊಬ್ಬರಲ್ಲಿ ಬೇರೆಯೆ ಆಗುತ್ತಿರುತ್ತದೆ. ಸಾಮಾನ್ಯ ಗ್ರಹಿಕೆಯಲ್ಲಿ ಈ ಬೇಧ ಕಾಣುವುದಿಲ್ಲ. ಕಲ್ಲನ್ನು ಕಲ್ಲಿನಂತೆ ನೋಡುವುದು ಆಧ್ಯಾತ್ಮಿಕ ನೋಟವಲ್ಲ. ಅದರ ಒಡಲಲ್ಲಿ ಅವಿತ ರೂಪಗಳನ್ನು ಕಲ್ಪಿಸಿಕೊಳ್ಳುವುದು ಆಧ್ಯಾತ್ಮಿಕತೆ.

ಆಧ್ಯಾತ್ಮಿಕತೆ ಮನೋಲೋಕಕ್ಕೆ ಸಂಬಂಧಪಟ್ಟಷ್ಟೆ ಭೌತಿಕಲೋಕಕ್ಕೂ ಸಂಬಂಧಪಟ್ಟಿರುತ್ತದೆ. ಆದರೆ ಇದಕ್ಕೂ ಅನುಭಾವಕ್ಕೂ ವ್ಯತ್ಯಾಸವಿದೆ. ಅನುಭಾವ ಜ್ಞಾನ – ಭಕ್ತಿ – ಕರ್ಮಗಳು ಸಮನ್ವಯವಾಗಿರುವಂಥ ಒಂದು ಸ್ಥಿತಿ. ಈ ಸಮನ್ವಯವನ್ನು ಪರಮಹಂಸರಲ್ಲಿ ಕಾಣಬಹುದು. ಕುವೆಂಪು ಇಂಥ ಜ್ಞಾನ – ಭಕ್ತಿ – ಕರ್ಮಗಳ ಸಮನ್ವಯ ಪರಿಕಲ್ಪನೆಯನ್ನು ಒಪ್ಪಿಕೊಳ್ಳುವರಾದರೂ ಅವರದು ಅನುಭಾವಿ ಬದುಕಿಗಿಂತ ಭಿನ್ನವಾದ ಪಯಣ. ಕುವೆಂಪು ಆಧ್ಯಾತ್ಮಿಕತೆಗೆ ತಮ್ಮದೇ ಆದ ನೋಟ ಕಲ್ಪನೆಯನ್ನು ಕಟ್ಟಿಕೊಡುತ್ತಾರೆ. ಪರಮಹಂಸ, ಅರವಿಂದ, ವಿವೇಕಾನಂದ, ಶಂಕರಾಚಾರ್ಯ – ಹೀಗೆ ಹಲವು ಸಂತರ ಅಧ್ಯಯನ ಮಾಡಿದ್ದ ಕುವೆಂಪು ಆ ಜ್ಞಾನವೆಲ್ಲವನ್ನೂ ತಮ್ಮದೇ ನೆಲೆಯಲ್ಲಿ ಗ್ರಹಿಸಿ ನಮ್ಮ ಮುಂದಿಡುತ್ತಾರೆ. ಕುವೆಂಪು ಅವರ ಆಧ್ಯಾತ್ಮಿಕತೆಗೆ 'ವಿಶ್ವಮಾನವ' ಪರಿಕಲ್ಪನೆಯನ್ನು ಉದಾಹರಣೆಯಾಗಿ ಇಟ್ಟುಕೊಳ್ಳಬಹುದು. ಸಿದ್ಧ ನಂಬಿಕೆಗಳ ಸಮರ್ಥನೆಗೆ ತೊಡಗದೆ ಅವುಗಳನ್ನು ಮೀರುವ ಹೊಸ ಮೌಲ್ಯಗಳ ತಾತ್ವೀಕರಣವನ್ನು ಕುವೆಂಪು ಅವರಲ್ಲಿ ಕಾಣುತ್ತೇವೆ. ತನ್ನ ಈ ಆಧ್ಯಾತ್ಮಿಕತೆಯೇ ತನಗೆ ಸಿದ್ಧಿಯನ್ನು ತರಬಲ್ಲದು ಎಂಬ ಆತ್ಮನಿಷ್ಠೆ ಅವರಲ್ಲಿತ್ತು. ಈ ಆತ್ಮನಿಷ್ಠೆ ಕೇವಲ ಸಾಹಿತ್ಯಕ, ಐಹಿಕ ಜೀವನಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ಅದನ್ನೂ ಮೀರಿದ ಸಂಗತಿಗಳಲ್ಲಿ ಇತ್ತು. ಅದು ಹೇಗೆಂದರೆ,

ಪ್ರಿಯ ಸ್ವಾಮೀಜಿ ಹೆದರಬೇಡಿ. ನನ್ನ ಕರ್ತವ್ಯವನ್ನು ನಾನು ಮಾಡುತ್ತೇನೆ. ವಿಕಲಾಂಗಿ ಪ್ರಾಪಂಚಿಕರಂತೆ ನಾನಿರುತ್ತೇನೆಂದು ಭಾವಿಸಬೇಡಿ. ನಾನು ಆಕಾರದಲ್ಲಿ ಸಣ್ಣವನಾದರೂ ನಾನೊಬ್ಬ ತ್ರಿವಿಕ್ರಮ,[೧] ಎನ್ನುವ ಅವರ ಈ ಮಾತುಗಳೇ ಸಾಕ್ಷಿಯಾಗಿದೆ.

ಐಹಿಕ ಪ್ರಪಂಚದಿಂದ ಕೆಲಕಾಲ ವಿಮುಖನಾಗಿ ಧ್ಯಾನಸ್ಥನಾಗಿ ಶಾಂತಿಯನ್ನು ಪಡೆಯುವುದು ಕುವೆಂಪು ಅವರ ಪ್ರಾರ್ಥನಾ ವಿಧಾನಗಳಲ್ಲಿ ಒಂದು. ಅವರು ಪೂಜಿಸುತ್ತಿದ್ದ ದೇವರು, ಸಾಂಸ್ಥಿಕ ದೇವರುಗಳಾಗಿರಲಿಲ್ಲ. ಮನುಷ್ಯ ಮಾತ್ರರಾಗಿದ್ದವರು, ಇಹ ಲೋಕದಲ್ಲಿದ್ದುಕೊಂಡೆ ಅಲೌಕಿಕ ಸಾಧನೆಯ ಸಿದ್ಧಿಯನ್ನು ಪಡೆದ ಪರಮಹಂಸರಂತಹ ಮಹಾತ್ಮರನ್ನು ಪೂಜಿಸಿ ಆರಾಧಿಸುತ್ತಿದ್ದರು. ವಿದ್ಯಾರ್ಥಿಯಾಗಿರುವಾಗಲೆ ಮಹಾ ವಿಭೂತಿ ಪುರುಷರ ಜೀವನ ಕೃತಿಗಳನ್ನು ವೇದಶಾಸ್ತ್ರ ಪುರಾಣಗಳನ್ನು ಅಭ್ಯಾಸ ಮಾಡುತ್ತಿದ್ದರು. ಶ್ರೀ ರಾಮಕೃಷ್ಣ ಮಠ ಹಾಗೂ ಸಿದ್ಧೇಶ್ವರಾನಂದ ಸ್ವಾಮೀಜಿಗಳ ಸಂಪರ್ಕ ದೊರೆತ ಮೇಲೆ ಆಧ್ಯಾತ್ಮಿಕ ವಿಷಯದಲ್ಲಿ ಅವರಿಗೆ ಇದ್ದ ಶ್ರದ್ದೆ, ಆಸಕ್ತಿ ದ್ವಿಗುಣವಾಯಿತು. ತಮ್ಮ ಜೀವನವನ್ನು ಆಧ್ಯಾತ್ಮದಲ್ಲೆ ಕಳೆದು ಸನ್ಯಾಸವನ್ನು ಸ್ವೀಕರಿಸುವುದಕ್ಕೆ ಅವರ ಮನಸ್ಸು ಹಾತೊರೆಯುತ್ತಿತ್ತು. ತಾನು ಹುಟ್ಟಿರುವುದು ಸಂನ್ಯಾಸಿಯಾಗಲಿಕ್ಕೆ ಎಂಬುದು ಅವರ ನಂಬಿಕೆಯಾಗಿತ್ತು. ಪ್ರಾಪಂಚಿಕತೆಯ ಬಗ್ಗೆ 'ಅಲಕ್ಷ್ಯ ಮನಸ್ಥಿತಿ'ಯನ್ನು ಎಷ್ಟರ ಮಟ್ಟಿಗೆ ಕುವೆಂಪು ಬೆಳೆಸಿ ಕೊಂಡಿದ್ದರೆಂದರೆ, ಬೇಸಿಗೆ ರಜೆಯಲ್ಲಿ ಊರಿಗೆ ಹೋದಾಗಲೂ ಅವರ ತಾಯಿ – ತಂಗಿಯರನ್ನು ಕಂಡು ಮಾತನಾಡಿಸಬೇಕೆಂಬ ಇಚ್ಛೆ ಅವರ ಮನಸ್ಸಿಗೆ ಸ್ವಲ್ಪವೂ ಸುಳಿಯುವುದಿಲ್ಲ. ಕಡೆಗೆ ತಾಯಿ ಸತ್ತಾಗಲೂ, ಅವರನ್ನು ನೋಡದಿರುವಷ್ಟು ಆಧ್ಯಾತ್ಮಿಕತೆಯ ಹಂಬಲದ ಮುಸುಕು ಆವರಿಸಿರುತ್ತದೆ. ಈ ಮುಸುಕು ಕವಿದಿದ್ದ ಕಾಲ ದೀರ್ಘವೇ. ತಮ್ಮ ತಾಯಿಯು ಅನಾರೋಗ್ಯದ ಸ್ಥಿತಿಯಲ್ಲಿದ್ದಾಗ ಕುವೆಂಪು ಆಡಿದ್ದ ಮಾತುಗಳಿವು:

> ಅವ್ವಾ ನನಗೇನು ನಿನ್ನ ಮೇಲೆ ಪ್ರೀತಿ ಇಲ್ಲ ಅಂತಾ ತಿಳಿದುಕೊಂಡಿದ್ದೀಯಾ? ನೀನು ಅಂದರೆ ಬರಿಯ ಈ ನಿನ್ನ ದೇಹವೇನು? ನೀನು ಸತ್ತರೂ ನಿನ್ನ ಆತ್ಮ ಅಮರವಾಗಿರುತ್ತದೆ.[೨]

ಹೀಗೆ ತಾಯಿ ಸತ್ತ ನಂತರದಲ್ಲಿ ಏಳು ವರ್ಷಗಳ ಕಾಲ ಆಶ್ರಮದಲ್ಲಿದ್ದು, 'ಮಾನವತೆಯ' ಬಗ್ಗೆ ಯೋಚಿಸುತ್ತಾ, ಅಂದು ತಾವಾಡಿದ ಮಾತುಗಳನ್ನು ಸ್ಮರಿಸಿಕೊಳ್ಳುತ್ತಾರೆ ಮಾತ್ರವಲ್ಲ ಅಂದಿನ ತಮ್ಮ ವರ್ತನೆಗೆ ಪಶ್ಚಾತ್ತಾಪ ಪಡುತ್ತಾರೆ. ಇದು ಪೊರೆ ಕಳಚಿದ ಮನಸ್ಸು.

ಲೌಕಿಕ ಜೀವನದ ಆಗು ಹೋಗುಗಳಿಗೆಲ್ಲ ದಿವ್ಯ ನಿರ್ಲಕ್ಷ್ಯತೆ ತಳೆಯಲು, ನಿರಾಸಕ್ತಿಭಾವ ಆವರಿಸಲು ಕಾರಣವನ್ನು ಹೀಗೆ ವಿವರಿಸುತ್ತಾರೆ–

> ಆಗ ನನ್ನ ಸಮಸ್ತ ಚೇತನವನ್ನೂ ಒಂದು ಅಲೌಕಿಕತೆ ಆಕ್ರಮಿಸಿ ಕೊಂಡಿರದಿದ್ದರೆ ನಾನು ಹಿರೇಕೊಡಿಗೆಗೆ ಹೋಗಿ ಅವ್ವನನ್ನು ಕಂಡು...... ಅರ್ಧ ವಿವೇಕ ಅರ್ಧ ಅವಿವೇಕಗಳಲ್ಲಿ ನನ್ನ ಪ್ರಜ್ಞೆ ಅರ್ಧ ಮೂರ್ಛಿತ ಸ್ಥಿತಿಯಲ್ಲಿ ಮುಂದುವರಿಯುತ್ತಿತ್ತೆಂದು ಭಾಸವಾಗುತ್ತದೆ. ನನ್ನ ಚೈತನ್ಯಾಶ್ವವನ್ನೇರಿ ಅದಕ್ಕೆ ಮೂಗು ದಾರವಿಕ್ಕಿ ಏನೋ ಒಂದು ನಿಷ್ಠುರ ಅತೀತ ಶಕ್ತಿ ಸವಾರಿ ಮಾಡುತ್ತಿದ್ದಂತೆ ಕಾಣುತ್ತದೆ![೩]

ಬಿ.ಎ. ವಿದ್ಯಾರ್ಥಿಯಾಗಿರುವಾಗಲೆ ಆಧ್ಯಾತ್ಮಿಕ ಅನುಭವದೊಂದಿಗೆ, ವೈಚಾರಿಕ ಪ್ರಜ್ಞೆಯನ್ನೂ ಕುವೆಂಪು ರೂಢಿಸಿಕೊಳ್ಳುತ್ತಾರೆ. ಸ್ವಾಮಿ ವಿವೇಕಾನಂದರ ಭಾಷಣ, ಜೀವನ ಚರಿತ್ರೆಯನ್ನು ಅಧ್ಯಯನ ಮಾಡುತ್ತ ಅವರ ಪ್ರಭಾವಕ್ಕೆ ಒಳಗಾಗುತ್ತಾರೆ.

> "ಆಗ ಸ್ವಾಮಿ ವಿವೇಕಾನಂದರ ಬೆಂಕಿ ಹೊತ್ತಿಕೊಂಡು ನನ್ನಾತ್ಮ ಉರಿಯುತ್ತಿತ್ತು! ಜ್ವಾಲಾಮಯವಾಗಿತ್ತು! ಅವರನ್ನು ಕುರಿತು ಮಾತನಾಡುವುದೆಂದರೆ ನನ್ನ ಜೀವ ಆನಂದಮಯವಾಗುತ್ತಿತ್ತು. ಆ ಅವಕಾಶ ಸಿಕ್ಕುವುದಾದರೆ ನಾನೆಲ್ಲಿಗೆ ಬೇಕಾದರೂ ಕರೆದಲ್ಲಿಗೆ ಹೋಗಲು ಸಿದ್ಧವಾಗಿದ್ದೆ."[೪]

ವಿವೇಕಾನಂದರ ಜನ್ಮ ದಿನದಂದು ಕುವೆಂಪು ಲೋಟಸ್ ಲೀಫ್ ಯೂನಿಯನ್ನಿನ ಶಾಖಾ ಪ್ರಾರಂಭೋತ್ಸವದ ಭಾಷಣ ಮಾಡಲು ಬೆಂಗಳೂರಿಗೆ ಹೋಗುತ್ತಾರೆ. ಸಭೆಯ ನಂತರ, 'ಜೀವನ ನೌಕೆಯ ಕರ್ಣಾಧಾರ ಸ್ವರೂಪವಾಗಲಿದ್ದ ಒಂದು ಮಹಾ ಪೂಜ್ಯ ಅನರ್ಘ್ಯ ವಸ್ತುವಾದ 'ಶ್ರೀ ರಾಮಕೃಷ್ಣ ಜೀವನ ಚರಿತ್ರೆ; ಅನೇಕ ಅಧಿಕೃತ ಮೂಲಗಳಿಂದ ಸಂಗ್ರಹಿಸಿದುದು' ಎಂಬ ಕೃತಿಯ ಓದು ಅವರ ಆಧ್ಯಾತ್ಮಿಕ ಜೀವನಕ್ಕೆ ಪ್ರವೇಶವನ್ನೊದಗಿಸಿ, ಆಲೋಚನೆಯ ದಿಕ್ಕನ್ನೇ ಬದಲಾಯಿಸುತ್ತದೆ ಎಂದು ಅವರು ತಮ್ಮ ನೆನಪಿನ ದೋಣಿಯಲ್ಲಿ ಉಲ್ಲೇಖಿಸಿದ್ದಾರೆ.

ಮುಂದೆ ಮೈಸೂರಿನಲ್ಲಿ ಕಾಲೇಜಿಗೆ ಸೇರಿದ ಮೇಲೆ ರಾಮಕೃಷ್ಣಾಶ್ರಮವು ಅವರ ಆಧ್ಯಾತ್ಮಿಕ ಜೀವನವನ್ನು ಹಾಗೂ ಮೈಸೂರು ವಿಶ್ವವಿದ್ಯಾಲಯವು ಅವರ ಸಾಹಿತ್ಯಕ ಜೀವನವನ್ನು ಪೋಷಿಸುತ್ತವೆ. ಅವರ ಆಶ್ರಮದ ಪ್ರತಿಯೊಂದೂ ಭೇಟಿಯಿಂದಲು ಅವರು 'ಉದಾತ್ತ ಚೇತನವಾಗಿ' ಹೊರ ಬರುತ್ತಿದ್ದರು. ಪರಮಹಂಸರ ಜೀವನ ಚರಿತ್ರೆಯನ್ನು ಓದುತ್ತಿರುವಾಗ ಮನಸ್ಸು ದ್ವಂದ್ವಗಳಿಂದ ಅಂತರ್ಮುಖಿಯಾಗುತ್ತದೆ. ಲೌಕಿಕ ಮತ್ತು ಅಲೌಕಿಕ ಜೀವನವನ್ನು, ಸಾಂಸಾರಿಕ ಬದುಕು ಹಾಗೂ ಪರಿವ್ರಾಜಕ ಬದುಕನ್ನು ಕುರಿತ ಚಿಂತನೆಗಳಲ್ಲಿ ಬದುಕನ್ನು ಹೇಗೆ ಸ್ವೀಕರಿಸಬೇಕು ಎಂಬುದರ ಜಿಜ್ಞಾಸೆ ನಡೆದಿತ್ತು.

ಕುವೆಂಪು ಅವರು ಸ್ವಾಮಿ ವಿವೇಕಾನಂದರಿಂದ ಬಹು ಮಟ್ಟಿಗೆ ಪ್ರಭಾವಿತರಾಗಿದ್ದರು. ಅವರನ್ನು ಗುರುವೆಂದು ಭಾವಿಸಿದ್ದರು. ವಿವೇಕಾನಂದರ ಬದುಕು ಆಧ್ಯಾತ್ಮಿಕ ನಡೆಯದೆ ಅಲ್ಲವೇ. ಇದರ ಜೊತೆ ಅವರ ಮನಸ್ಸು ವಾಸ್ತವದಿಂದ ದೂರ ಹೋಗುವುದಾಗಿರಲಿಲ್ಲ. ತರಂಗ ತರಂಗವಾಗಿ ಬರುತ್ತಿರುವ ವೈಜ್ಞಾನಿಕ ಶಕ್ತಿಗಳ ಪ್ರವಾಹದಿಂದ ಮುಳುಗದೆ, ಕದಲದೆ ಉಳಿಯಲು ಬೇಕಾದ ಸತ್ವೋನ್ನತಿಯು ವೇದ ವೇದಾಂತಗಳಲ್ಲಿರುವುದೇ? ಎಂಬ ಪ್ರಶ್ನೆ ಕುವೆಂಪು ಅವರನ್ನು ಅಡ್ಡಗಟ್ಟಿ ನಿಲ್ಲುತ್ತಿತ್ತು.

> "ಇರಲಿ, ನಾವೇನು ಮಾಡಿದ್ದೇವೆ? ಸಂನ್ಯಾಸಿಗಳು ನಾವೇನು ಮಾಡಿದ್ದೇವೆ? ಭಾರತಮಾತೆಯ ತೊಡೆಯ ಮೇಲೆ ಚಕ್ಕಂದದಿಂದ ನಲಿದಾಡುವ ಸಂನ್ಯಾಸಿಗಳು, ನಾವೇನು ಮಾಡಿದ್ದೇವೆ? ಕಾಷಾಯ ವಸ್ತ್ರಧಾರಿಗಳಾಗಿ ಮೂರ್ಖ ಜನರ ತಾಮಸಾತಿಥ್ಯದಿಂದ ಉದರ ಪೋಷಣೆ ಮಾಡಿಕೊಳ್ಳುತ್ತಾ ಅಲೆಯುತ್ತಿರುವ ಲಕ್ಷಾಂತರ

ಸಂನ್ಯಾಸಿಗಳು, ನಾವೇನು ಮಾಡಿದ್ದೇವೆ? ತತ್ತ್ವಭೋಧನೆ! ತತ್ತ್ವಭೋಧನೆ! ಚೀಃ ಚೀಃ ಬೈರಾಗಿಗಳೆ, ನಿಮ್ಮ ತತ್ತ್ವ ಬೋಧನೆಗೆ ಬೆಂಕಿ ಇಡಲಿ! ಹುಚ್ಚು! ಹುಚ್ಚು! ನಿಮಗೆಲ್ಲ ಹುಚ್ಚು! ಹೊಟ್ಟೆಗಿಲ್ಲದೆ ಕಂಗಟ್ಟಿರು ದೇಶದಲ್ಲಿ ನಿಮ್ಮ ತತ್ತ್ವಬೋಧನೆ! ಅಯ್ಯೋ ಕಪಟವೃತ್ತಿಯೆ! ನಾವೇನು ಮಾಡುತ್ತಿದ್ದೇವೆ! ಅನ್ನವಿಲ್ಲದ, ವಸ್ತ್ರವಿಲ್ಲದ ಕುರಿಗಳಿಗೆ ವೇದಾಂತ ಬೋಧನೆ ಮಾಡುತ್ತಿದ್ದೇವೆ! ಆಹಾ! ವೇದಮಾತೆ, ನಿನ್ನ ಸಂನ್ಯಾಸಿಗಳ ಲೀಲೆಯನ್ನು ನೋಡು! ನೋಡಿ ನಲಿ! ನಲಿ! ಕಾಲಡಿಯ ಭೂಮಿಯನ್ನೂ ಹಿಡಿಯಲಾರದ ಅಶಕ್ತರಿಗೆ ಅನಂತಾಕಾಶವನ್ನು ತೋರಿಸಿದ್ದೇವೆ! ಸಹೋದರರೆ, ಸಂನ್ಯಾನಿಗಳೆ, ನಮಗಿಂದು ಬರಿಯ ತತ್ತ್ವದಿಂದ ಮುಕ್ತಿ ದೊರಕದು. ಅನ್ನ ಬೇಕು, ವಸ್ತ್ರ ಬೇಕು, ಜನ ಬೇಕು, ಧನ ಬೇಕು![೫]

– ಎಂಬ ಮಾತುಗಳು ಮೇಲಿನ ಸಂದರ್ಭಕ್ಕೆ ಒದಗಿಬರುತ್ತವೆ.

ಕುವೆಂಪು ಅವರಲ್ಲಿ ಹೀಗೆ ಸೆಲೆಯೊಡೆದ ಆಧ್ಯಾತ್ಮಿಕತೆ ಹಾಗೆಯೇ ನಿರಂತರವಾಗಿ ಮುಂದುವರಿಯಿತು. ಅವರ ಕಾವ್ಯಕ್ಕೆ ವಿವೇಕಾನಂದ, ರಾಮಕೃಷ್ಣರ ಧೀಮಂತಿಕೆ ಜೊತೆಗೂಡಿತ್ತು. ನಾಡನ್ನು ಕುರಿತ ಭಕ್ತಿಭಾವ, ದೇಶವನ್ನು ಕುರಿತ ಅಮಿತ ಪ್ರೇಮ, ಕನಿಷ್ಠ ಮಾನವರ ಕುರಿತ ಅನುಕಂಪ ಮತ್ತು ಜವಾಬ್ದಾರಿ ಇವು ಅವರ ವ್ಯಕ್ತಿತ್ವದ ಭಾಗವಾಗಿ ಬೆಳೆದವು. ಅವರ ಕಾವ್ಯ ವಸ್ತುಗಳಾದವು.

ಸ್ವಾಮಿ ವಿವೇಕಾನಂದ ಕುವೆಂಪು ಬಾಲ್ಯದಲ್ಲಿ ಬರೆದ ಆಂಗ್ಲ ಕವಿತೆಗಳಲ್ಲೊಂದು. ಮೈಸೂರಿನ ಶ್ರೀ ರಾಮಕೃಷ್ಣಾಶ್ರಮದ ಪರಿಚಯವಾಗುವ ಮುನ್ನವೇ ಅವರು ರಾಮಕೃಷ್ಣ ಪರಮಹಂಸರ, ವಿವೇಕಾನಂದರ ಜೀವನ ಚರಿತ್ರೆಗಳನ್ನು ಓದಿಕೊಂಡಿದ್ದರು. ಕುವೆಂಪು ಅವರ ವ್ಯಕ್ತಿತ್ವದ ಒಂದು ಭಾಗ ಓದುವಿಕೆ. ಅವರಿಗೆ ಓದು ಎಂದರೆ ತಿಳಿವಳಿಕೆ. ಈ ತಿಳಿವಳಿಕೆಯ ಮೂಲಕವೇ ಅವರು ಆಧ್ಯಾತ್ಮ, ದೇವರು, ಭಕ್ತಿ, ಪೂಜೆ ಮುಂತಾದ ಪಾರಮಾರ್ಥಿಕ ಸಂಗತಿಗಳಲ್ಲಿ ಸ್ಪಷ್ಟ ನಿಲುವು ಹೊಂದಿದ್ದರು ಮತ್ತು ಅದಮ್ಯ ಆಸಕ್ತಿಯುಳ್ಳವರಾಗಿದ್ದರು. ಇದರ ಪರಿಪಾಕ ಅವರ ಮೇಲೆ ಹೇಗಾಗಿತ್ತೆನ್ನುವುದು ಈ ಪದ್ಯದ ಓದಿನಿಂದ ಶ್ರುತವಾಗುತ್ತದೆ. ಅದರ ಜೊತೆಗೆ ಬದುಕಿನಾದ್ಯಂತ ಅವರನ್ನು, ಅವರ ಕಾವ್ಯಾದರ್ಶವನ್ನು, ಅವರ ಕಾದಂಬರಿಯ ಪಾತ್ರವನ್ನು ಈ ಪ್ರಭಾವ ಹೇಗೆ ಆವರಿಸಿತ್ತು ಎನ್ನುವುದನ್ನು ಸಹ ನಾವು ಈ ಕವಿತೆಯಲ್ಲಿ ಗಮನಿಸಬಹುದು.

ಕುವೆಂಪು ಅವರು ತಮ್ಮ ಆರಾಧ್ಯ ದೈವವೆಂದೇ ಪೂಜಿಸುತ್ತಿದ್ದ ತಮ್ಮ ಪ್ರಿಯ ಸ್ವಾಮೀಜಿಯ ಅಂದರೆ ಸ್ವಾಮಿ ವಿವೇಕಾನಂದರ ಅರವತ್ತಾರನೆಯ ಜನ್ಮದಿನ, ೩.೨.೧೯೨೪ರಲ್ಲಿ Swami Vivekananda ಎಂದು ವಿವೇಕಾನಂದರ ಮೇಲೆ ಒಂದು ಕವನ ರಚನೆ ಮಾಡುತ್ತಾರೆ, ಇದು ಒಂದು ಸಾನೆಟ್ಟು.

ಕುವೆಂಪು ಈ ಕವನವನ್ನು ಅವರು ಬರೆಯುವ ಮುನ್ನ ಅವರ ಮನಸ್ಥಿತಿಯ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ:

"ನನ್ನಲ್ಲಿ ಏನಾದರೂ ಇದ್ದ ಪಕ್ಷದಲ್ಲಿ, ನಾನು ಏನನ್ನಾದರೂ ನಿಮಗೆ ಹೇಳಿರುವ ಪಕ್ಷದಲ್ಲಿ, ಅದೆಲ್ಲಕ್ಕೂ ನಾನು ನನ್ನ ಸ್ವಾಮೀಜಿಯ ಕೃಪೆಗೆ ಋಣಿಯಾಗಿದ್ದೇನೆ; ಭಾಷಣದಲ್ಲಿರಬಹುದಾದ ದೋಷಗಳಿಗೆ ಮಾತ್ರ ನನ್ನ ಸ್ವಂತಪ್ರತಿಭೆ ಹಕ್ಕುದಾರನಾಗಿದೆ."

– ಎಂದು ತುಂಬಾ ಭಾವುಕರಾಗಿ ತಮ್ಮ ಸ್ವಾಮಿನಿಷ್ಠೆಯನ್ನು ಮೆರೆದಿದ್ದಾರೆ.[೬]

"Flower of philosophy, thou teacher great
Of cosmic creeds, O spriritual gaint,
O soldier of God, tho mighty-hearted saint,
O thou commander of suspicious fate,
all hail to thee ! For thee the death-less date
Shall dazzling e'er survive! No shriek nor plaint
Thy brave devotees gives ; he'll ! be a Gaint
Commanding earth and heaven ; he ruleth fate !"[7]

– ಎಂಬೀ ಸಾಲುಗಳಲ್ಲಿ ವಿವೇಕಾನಂದರ ಒಟ್ಟು ವ್ಯಕ್ತಿತ್ವದ ಸ್ಮರಣೆಯಿದೆ. ಅಂತೆಯೇ ವಿವೇಕಾನಂದರ ಶಕ್ತಿಯ ಮೇಲೆ ಅವರ ವಿಶ್ವಾಸ ಎಷ್ಟಿತ್ತೆಂದು ಕೆಳಗಿನ ಸಾಲುಗಳಲ್ಲಿ ಕಾಣಬಹುದು. ಅವರ ಧೀರ ಉಪಾಸಕನೆ ವಿಧಿಯನಾಳಬಲ್ಲವನಂತೆ. ಇದಕ್ಕಿಂತ ಮಿಗಿಲಾದ ವರ್ಣನೆಯ ಅಗತ್ಯವಿದೆಯೇ?

"Like a great dazzling meteor didst thou come
Enlightening all ; and flashed across the sky ;
Then wonder thrilled each slumbering heart, while dumb
All stood adoring thee with wrinkless eye !
Again and let again, Ascetic blest
And Guide Divine, thy Orient rays blaxe West !"[8]

ಈ ಭಾರತ ಮಾತೆಯ ಮಡಿಲಲ್ಲಿ ವಿವೇಕಾನಂದರ ಜನನವೊಂದು ಅಪೂರ್ವ ಫಿನಾಮಿನಲ್ ಘಟನೆ. ಅದು ಸಾಧಾರಣ ಜನನವಲ್ಲ. ಅದು ಸದುದ್ದೇಶದ ಜನನ. ಶ್ರೀರಾಮನ ಹುಟ್ಟಿನಂತೆ, ಕೃಷ್ಣನ ಜನನದಂತೆ, ಏಸು ಹುಟ್ಟಿದಂತೆ ವಿವೇಕಾನಂದರನ್ನು ಭಾರತಮಾತೆ ಹಡೆದದ್ದೂ ದೈವಕಾರಣ ನಿಮಿತ್ತ. ಆದ್ದರಿಂದಲೇ ಅವರು ಹುಟ್ಟುವುದು ಉರಿವ ಉಲ್ಕಾಪಾತದಂತೆ ಕಣ್ಣ ಕೋರೈಸುತ ಎಲ್ಲರಾತ್ಮಕ್ಕೆ ಅರಿವಿನ ಬೆಳಕ ಹರಿಸುತ್ತ; ಗಗನದಡ್ಡಗಲಕ್ಕು ಸರಿದುಹೋದ ಮಿಂಚಂತೆ.

ಅದು ಸಾರಿದ ಸಂಗತಿ. ಜಗವನ್ನೆಚ್ಚರಿಸಿದ ಸಂಗತಿ. ಇದರ ಪ್ರಭಾವಲಯವನ್ನು ನೋಡೋಣ:

"ಬ್ರಹ್ಮವಿದ್ಯೆಯ ದಿವ್ಯದೀಪ್ತಿಯ ದೇಶದೇಶದಲಿ
ಹರಡಿ, ಅಭಯವನೀಯುತಮೃತವ ಸುರಿದು ಪಾಲಿಸಿದೆ;
ಗಗನಕೆತ್ತಿದೆ ಭಾರತಾಂಬೆಯ ಕೀರ್ತಿಕೇತನವ;
ಓಜೆ ತುಂಬಿಹುದಾರ್ಯಮಾತೆಯ ಶ್ರೀನಿಕೇತನವ!"[೯]

೧೯೨೬ರ ಪ್ರಾರಂಭದಲ್ಲಿ ಬನುಮಯ್ಯ ಪ್ರೌಢಶಾಲೆಯ ಸಭಾಂಗಣದಲ್ಲಿ ಏರ್ಪಾಡಾಗಿದ್ದ ಸ್ವಾಮಿ ವಿವೇಕಾನಂದರ ಜನ್ಮೋತ್ಸವದಲ್ಲಿ ಭಾಗವಹಿಸಿದ್ದಾಗ ಅವರು ಶ್ರೀ ರಾಮಕೃಷ್ಣಾಶ್ರಮದ ಶ್ರೀ ಸಿದ್ದೇಶ್ವರಾನಂದರ ಕಣ್ಣಿಗೆ ಬೀಳುತ್ತಾರೆ. ಸ್ವಾಮೀಜಿಯವರ ಆಹ್ವಾನದ ಮೇರೆಗೆ ಅವರು ಆಗಾಗ್ಗೆ ಆಶ್ರಮಕ್ಕೆ ಹೋಗಿ ಬರುತ್ತ ಆಧ್ಯಾತ್ಮಿಕ ಸಾಧನೆಯ ಕಡೆಗೆ ಅವರ ಗಮನ ಹರಿಯುತ್ತದೆ. ಸುಮಾರು ಅದೇ ಸಮಯದಲ್ಲಿ **ಸ್ವಾಮಿ ವಿವೇಕಾನಂದ** ಎಂಬ ಕವಿತೆಯನ್ನು ರಚಿಸುತ್ತಾರೆ. ಆ ಕವಿತೆಯ ಏಳು ಪದ್ಯಗಳಲ್ಲಿ ಮೂರನ್ನು ಮಾತ್ರ ಉದ್ಧರಿಸಲಾಗಿದೆ:

"ಸ್ವಾಮಿ ವಿವೇಕಾನಂದನೆ ! ಬ್ರಹ್ಮಾನಂದನೆ
ನಿನಗೆ ಪರಮ ಮಂಗಳಂ ! ಓಂ ಓಂ ಮಂಗಳಂ ॥ಪ॥

ಪರಮಹಂಸರ ! ಪರಮಶಿಷ್ಯನೆ
ಆರು ಅರಿಗಳ! ವೀರ ವೈರಿಯೆ....ಶ್ರೀ...

ವಿಶ್ವ ಹೃದಯನೆ! ವಿಶ್ವದಾತ್ಮನೆ
ವಿಶ್ವಕಾಯನೆ! ನೀನೆ ವಿಶ್ವವು....ಶ್ರೀ"[೧೦]

ಆ ಹೊತ್ತಿಗಾಗಲೇ ವಿವೇಕಾನಂದರು ಅವರ ಜೀವನದ ಸರ್ವಸ್ವವಾಗಿರುವ, ಸ್ಫೂರ್ತಿ ಚೈತನ್ಯವಾಗಿರುವ ಸಂಗತಿ ಈ ಕವಿತೆಯಿಂದ ಸ್ಪಷ್ಟವಾಗುತ್ತದೆ.

ಹದಿಹರೆಯದಲ್ಲಿ ಆಧ್ಯಾತ್ಮ ಭಾವವು ಒಂದು ಶಕ್ತಿಯಾಗಿ ಪ್ರವಹಿಸುತ್ತಿದ್ದಂಥ ಕಾಲದಲ್ಲಿ ಬರೆದದ್ದು ಈ ಕವನ. ಸ್ವಾಮಿ ವಿವೇಕಾನಂದರ ಪ್ರಭಾವ ಅವರ ವ್ಯಕ್ತಿತ್ವದ ಭಾಗವೇ ಆಗಿ ನೆಲೆನಿಂತುಬಿಟ್ಟಿತು. ಅದರ ಬೆಳವಣಿಗೆಯನ್ನು ಸ್ವಲ್ಪ ಪರಿಶೀಲಿಸಬಹುದು.

ಕುವೆಂಪು ಭಾರತ ಸ್ವಾತಂತ್ರ್ಯ ಆಂದೋಲನದ ಸಂದರ್ಭದಲ್ಲಿ ವಿವೇಕಾನಂದರನ್ನು ಸ್ಫೂರ್ತಿಶಕ್ತಿಯಾಗಿ ಆಹ್ವಾನಿಸುವಂಥ ಒಂದು ಕವನವನ್ನು ಬರೆಯುತ್ತಾರೆ. ವಿವೇಕಾನಂದರನ್ನೇ ಕುರಿತು ಬರೆದ ಮೇಲಿನ ಕವನಕ್ಕಿಂತ ನಂತರದಲ್ಲಿ ಬರೆದ ಕವನ ಹೆಚ್ಚು ಆಳವಾದ ಚಿಂತನಪರತೆಯಿಂದ ಕೂಡಿದೆ.

"ಶ್ರೀ ವಿವೇಕಾನಂದ ಗುರುವರ, ನವಯುಗಾಚಾರ್ಯ,
ರಾಮಕೃಷ್ಣರ ಭೀಮಶಿಷ್ಯನೆ, ವೀರವೇದಾಂತಿ,
ಭಾರತಾಂಬೆಯ ಧೀರಪುತ್ರನೆ, ಸಾದುಭೈರವನೆ,
ಸ್ಥೈರ್ಯಚಲವೆ, ಧೈರ್ಯದಂಬಿಧಿ, ಜಯತು! ಜಯಜಯತು!"[೧೧]

ಇಲ್ಲಿ ಬಾಲ್ಯದ Like a great dazzling meteor didst thou come ಎಂಬಂತಹ ಬೆರಗನ್ನು ಸೃಷ್ಟಿಸುವ ಒತ್ತಾಯ ಕಾಣುವುದಿಲ್ಲ. ಬದಲಿಗೆ

"ಶ್ರೀ ವಿವೇಕಾನಂದ ಗುರುವರ, ನವಯುಗಾಚಾರ್ಯ,
ರಾಮಕೃಷ್ಣರ ಭೀಮಶಿಷ್ಯನೆ, ವೀರವೇದಾಂತಿ,
ಭಾರತಾಂಬೆಯ ಧೀರಪುತ್ರನೆ, ಸಾಧುಭೈರವನೆ,"[೧೨]

ಎಂಬ ಮಾತುಗಳಿವೆ. Thy brave devotee gives ; he'll! be a Gaint, Commanding earth and heaven; he ruleth fate! ಎಂಬ ಮಾತುಗಳ ಜೊತೆ ಕೆಳಗಿನ ಸಾಲುಗಳನ್ನು ಹೋಲಿಸಿ ನೋಡಬಹುದು:

"ನಿನ್ನ ಧೈರ್ಯ ಸ್ಥೈರ್ಯ ದೃಢತೆಯು, ನಿನ್ನ ಪವಿತ್ರಶಕ್ತಿ
ಭಾರತೀಯರಿಗಿಂದು ಬೇಕಾಗಿಹುದು. ದಿವ್ಯಾತ್ಮ !
ರುದ್ರನರ್ತನವೆಸಗು ಹೃದಯದಿ, ಬುದ್ಧಿ ಭೈರವನೆ,
ರುದ್ರಭೂಮಿಗಳಾಗಲೆಮ್ಮೀ ಕ್ಷುದ್ರ ಹೃದಯಗಳು!"[೧೩]

ಈ ಕವನದ ಭಾಷೆಯಲ್ಲಾಗಲಿ, ವಸ್ತುವಿನಲ್ಲಾಗಲಿ ಮೇಲೆ ಸೂಚಿಸಿದ ಕವನದ ಅದರ ಮಟ್ಟಕ್ಕೆ ಏರುವುದಿಲ್ಲ ಎಂದು ಕುವೆಂಪು ಅವರೇ ಹೇಳಿದ್ದಾರೆ. ಕಾಲಾನಂತರದಲ್ಲಿ ಒಬ್ಬ ವ್ಯಕ್ತಿಯನ್ನು ಕುರಿತಂತೆ ಕವಿಯಲ್ಲಿ ಮೂಡುವ ಭಾವನೆಗಳು, ಪಡೆದುಕೊಳ್ಳುವ ಅರ್ಥವ್ಯಾಪ್ತಿ ಹಾಗೂ ಅದನ್ನು ನಿರ್ವಹಿಸುವ ಕ್ರಮಕ್ಕೆ ಈ ಕವನಗಳು ಸಾಕ್ಷಿಯಾಗಿವೆ.

**'ಶ್ರೀ ವಿವೇಕಾನಂದ ಸಂಭೂತಿ'** ಎಂಬ ಸಾನೆಟ್ಟು, ಶ್ರೀ ರಾಮಕೃಷ್ಣರು ಸಮಾಧಿ ಸ್ಥಿತಿಯಲ್ಲಿ ಕಂಡ ಅದ್ಭುತ ದರ್ಶನವೊಂದನ್ನು ಕನ್ನಡಿಸುತ್ತದೆ. ಪರಮಹಂಸರು ವಿವೇಕಾನಂದರಿಗೆ ತಮ್ಮೆಲ್ಲ ತಪಃಶಕ್ತಿಯನ್ನು ಧಾರೆಯೆರೆದದ್ದಕ್ಕೆ, ಪಟ್ಟಶಿಷ್ಯತ್ವವನ್ನು ನೀಡಿದಕ್ಕೆ ಕಾರಣ ಇಲ್ಲಿದೆ. ಮಹಾಕಾವ್ಯದಿಂದ ಸಿಡಿದು ಬಂದ ಜ್ಯೋತಿರ್ ಖಂಡದಂತಿದೆ ಈ ಸಾನೆಟ್ಟು.

"ಶ್ರೀ ವಿವೇಕಾನಂದ ಸಂಭೂತಿ
ಸಮಾಧಿನಿರ್ವಿಕಲ್ಪಂ ನರಮಹರ್ಶಿ
ಅಲ್ಲಿ ಶಶಿಸೂರ್ಯರಿಗೆ ಹುಗಲಿಲ್ಲ; ತಾರಾಕೋಟಿ
ದೂರದೊಳೆ ನಿಂತಿಹವು, ಹೋಗಲಾರದೆ ದಾಟಿ,
ಕಾಲ್ಸೋತು! – ಆ ದಕ್ಷಿಣೇಶ್ವರ ಸುದೂರದರ್ಶಿ
ತಾಂ ಧ್ಯಾನಪಥದಿಂದೇರಿ, ಭವಲೋಕಮಂ ಮೀರಿ,
ಪಿಂತಿಕ್ಕಿ ಪಂಕ್ತಿಪಂಕ್ತಿಯ ಚಿನ್ಮಯ ಶರೀರರಂ
ದೇವರ್ಕಳಂ, ಬಳಿಸಾರ್ದನಾ ಮಹಾಮುನಿ ನರಂ
ಭಾವಲೋಕಾತೀತದೊಳ್ ನಿರ್ಗುಣದೊಳಾರಿ
ನಿರ್ವಿಕಲ್ಪ ಸಮಾಧಿಯೋಗದಿಂದಿರ್ದೆಡೆಗೆ!....

ಶಿಶುರೂಪಮಂ ತಾಳುತಾ ಘನೀಭೂತಜ್ಯೋತಿ
ಏರಿದುದು ಸುಮಕೋಮಲಂ ಸಿದ್ಧವಜ್ರನ ತೊಡೆಗೆ....
ರುಷಿಯಂ ಕೊರಳಂ ತನ್ನ ನಳಿದೋಳ್ಗಳಿಂದಪ್ಪಿ
"ಇಳಿದು ಬಾ ನನ್ನೊಡನೆ! –" ಆ ಕರೆಗುಣ್ಮಿದಾ ಪ್ರೀತಿ
ಧರೆಗವತರಿಸಿತಯ್ ಈ ನರೇಂದ್ರ ರೂಪಿಂದೊಪ್ಪಿ!"[೧೪]

೭.೧.೧೯೬೩ ರಲ್ಲಿ ರಚಿಸಿದ ಈ ಕವನವನ್ನು ಕುರಿತು ಕುವೆಂಪು ಅವರು ಹೀಗೆ ಹೇಳಿಕೊಂಡಿದ್ದಾರೆ. "ನನ್ನ ಹೃದಯದಲ್ಲಿ ನಡೆಯುತ್ತಿರುವ ವ್ಯಾಮೋಹದ ಮತ್ತು ವೈರಾಗ್ಯದ ತಿಕ್ಕಾಟಗಳಿಗೆ ಇವು ಪ್ರತಿನಿಧಿಗಳಾಗಿವೆ."

"Great Men, I stand before you now and then
With folded hands and humble knees ; I pray
That I may follow you in your great way,
Be it the path to Heaven or Ixion's den !
Again I plough the land which many a pen
Hath ploughed, and reap the precious corn which they
Have sowed ; the glebe still bears their foot-prints gay
That guide and lift me from this horrid glen."[15]

ಕುವೆಂಪು ಅವರು ಮೇಲಿನ ಕವನವನ್ನು ೨೯.೨.೧೯೨೪ರಲ್ಲಿ Lines ಎಂಬ ಶೀರ್ಷಿಕೆಯಲ್ಲಿ ರಚಿಸಿದ್ದಾರೆ. ಕವಿ ಕುವಂಪು ವಿಭೂತಿ ಪೂಜೆಯ ಪರವಾದ ಮನೋಧರ್ಮವನ್ನೂ ಕೈಕೊಂಡ ಅನುಷ್ಠಾನವನ್ನೂ ಧ್ವನಿಸುತ್ತದೆ. ಈ ಕವನದಲ್ಲಿ ವಿಭೂತಿಯೆಂದರೆ ಆಧ್ಯಾತ್ಮ ಎಂದು ಅರ್ಥ.

ನಿಸರ್ಗದ ವಿಸ್ಮಯದಂತೆಯೇ ಶ್ರೀ ಕುವೆಂಪು ರವರ ಸಮಗ್ರ ಜೀವನದ ಮೇಲೆ ಅತ್ಯಂತ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿರುವ ಶಕ್ತಿಗಳೆಂದರೆ ಶ್ರೀ ರಾಮಕೃಷ್ಣ ಪರಮಹಂಸರು ಮತ್ತು ಸ್ವಾಮಿ ವಿವೇಕಾನಂದರು. ಆ ಎರಡು ಮಹಾ ಚೇತನಗಳ ಚಿತ್ಕಲೆ ಅವರ ಮಾನಸಗರ್ಭವನ್ನು ಪ್ರವೇಶಿಸಿದಾಗಿನಿಂದ ಅವರ ಗತಿಗಮ್ಯಗಳು ಸುಸ್ಪಷ್ಟವಾಗುತ್ತದೆ; ಕಾಲಕ್ರಮೇಣ ಅದು ಅವರ ಜೀವನ ಸಮಸ್ತವನ್ನೆಲ್ಲ ವ್ಯಾಪಿಸಿಕೊಂಡಾಗ, ಅದೇ ಅವರ ಚೇತನವಾಗಿ ಪರಿಣಮಿಸಿದಾಗ ಅವರಿಗಾದ ಅನುಭವ ಉಪಮಾತೀತವಾದದ್ದು. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಲೆ ಮೈಸೂರಿನ ಸಾರ್ವಜನಿಕ ಗ್ರಂಥಾಲಯದಲ್ಲಿ ಶ್ರೀ ರಾಮಕೃಷ್ಣ – ವಿವೇಕಾನಂದ ಸಾಹಿತ್ಯ ಅವರ ಕಣ್ಣಿಗೆ ಬಿದ್ದ ಸಂದರ್ಭ ಅವರ ಪಾಲಿಗೆ ಅಮೃತ ಘಳಿಗೆಯಾಗುತ್ತದೆ. 'ಹೀಗೆ ನೋಡುತ್ತಿರುವಾಗಲೆ ನನಗೆ ನನ್ನ ಜೀವನದ ದಿಕ್ಕನ್ನೇ ತಿರುಗಿಸಿ, ನನ್ನ ಬದುಕನ್ನೆಲ್ಲ ಮೌಢ್ಯದಿಂದ ಅಮರ್ತ್ಯಕ್ಕೆತ್ತಿ ಬೀಸಿದ ಭಗವತ್ ಕೃಪಾ ಹಸ್ತರೂಪದ ಶ್ರೀ ರಾಮಕೃಷ್ಣ – ಸ್ವಾಮಿ ವಿವೇಕಾನಂದ ವಿಷಯಕವಾದ ಕೃತಿ ಶ್ರೇಣಿಯ ದರ್ಶನವಾದದ್ದು.[೧೬] 'ಆ ಸಮಯದಲ್ಲಿ ಅವರ ಚೇತನ

ವಿವೇಕಾನಂದರ ಭಾಷಣಗಳನ್ನೋದಿ ಅಗ್ನಿಪಕ್ಷಗಳನ್ನು ಬುದುರ್ಚಿ ಆಕಾಶಗಾಮಿಯಾಗುತ್ತಿತ್ತು' ಎಂದವರು ಹೇಳಿಕೊಳ್ಳುತ್ತಾರೆ. ಆ ಕ್ಷಣದಿಂದಲೇ ಆ ಗುರುಕೃಪೆಯ ಅವತರಣವನ್ನು ಅವರ ಎಲ್ಲ ಕೃತಿಗಳಲ್ಲಿಯೂ ಕಾಣಬಹುದಾಗಿದೆ.

೧೬.೯.೧೯೨೪ರಲ್ಲಿ ಬರೆದೊಂದು ಸಾನೆಟ್ಟೇ ಶ್ರೀ ರಾಮಕೃಷ್ಣರನ್ನು ಕುರಿತ ಮೊದಲ ಕೃತಿಯೆಂದು ತೋರುತ್ತದೆ. ಸಾನೆಟ್ ರೂಪವಲ್ಲದ ಬೇರೆ ಯಾವ ಕಾವ್ಯಾಂಶದ ವೈಶಿಷ್ಟ್ಯವೂ ಅದಕ್ಕಿಲ್ಲದುದರಿಂದಲೇ ಅದೆಲ್ಲಿಯೂ ಅಚ್ಚಾಗಿಲ್ಲ. 'ಗುರುದೇವ, ಅದ್ವೈತ ದೇವನಂ ಮರೆತಿಹೆವು, ಪರೆಯನಿವ, ಶೂದ್ರನಿವ, ಬೌದ್ಧನಿವ, ಕ್ರೈಸ್ತನಿವ, ತುರುಕನಿವ ಎಂಬ ಖಳವೇದವನು ಕಲಿತಿಹೆವು. ಶಿವನಾಮ ಎಂಬುದನು ಕಲಿಸೆನಗೆ' ಮುಂತಾದ ಭಾವಗಳು[೧೬] ಅದರಲ್ಲಿ ಅಭಿವ್ಯಕ್ತಗೊಂಡಿವೆ. ಕವಿಗಳ ನಿರ್ಜಾತಿಯ ನಿರ್ಮತೀಯ ಮನೋಭಾವ ಆಗಲೇ ಅವರ ಬಾಳಿನಲ್ಲಿ ರೂಪಿಕ್ಕುತ್ತಿದ್ದುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

ಶ್ರೀ ರಾಮಕೃಷ್ಣರನ್ನು ಕುರಿತು ಸಾನೆಟ್ ರಚಿಸುವುದಕ್ಕೆ ಮುಂಚೆಯೇ ಅವರು ೧೯೨೪ರ ಫೆಬ್ರವರಿ ತಿಂಗಳಲ್ಲಿ ಸ್ವಾಮಿ ವಿವೇಕಾನಂದ ಮೇಲೊಂದು ಸಾನೆಟ್ ರಚಿಸಿದ್ದುಂಟು. ಅದು ಇಂಗ್ಲಿಷಿನಲ್ಲಿದೆ. ಅದರ ಕೊನೆಯ ಆರು ಸಾಲುಗಳಿವು:

"Like a great dazzling meteor didst thou come
Enlightening all ; and flashed across the sky ;
Then wonder thrilled each slumbering heart, while dumb
All stood adoring thee with wrinkles eye !
Again and let again, Ascetic blest
And Guide Divine, thy Orient rays blaxe West !"[17]

ಈ ಕವಿತೆಯ ಬಹು ಮುಖ್ಯವಾದ ಅಂಶ ಪೌರಾತ್ಯ ಜ್ಞಾನವನ್ನು ಕುರಿತು ಕುವೆಂಪು ಅವರಿಗೆ ಇದ್ದ ಅಪಾರ ಗೌರವ. ಅದು ವಿವೇಕಾನಂದರ ಕುರಿತ ಗುರು ವಂದನಾಭಾವದಿಂದ ದಿವ್ಯವಾಗಿದೆ. Again and let again, ascetic, ascetic blest, and guide divine, thy Orient rays blaze West! ಎಂಬ ಮಾತಲ್ಲಿ ಇವೆರಡೂ ಭಾವ ತುಂಬಿಕೊಂಡಿದೆ.

ಈ ಕವಿತೆಯ ಪ್ರಾರಂಭದಲ್ಲಿ ಅವರು ವಿವೇಕಾನಂದರನ್ನು ವಿಶ್ವಗುರುವೆಂದು, ಸಾವಿಲ್ಲದ ಜ್ಯೋತಿಯೆಂದು, ಭೂಸ್ವರ್ಗಗಳ ಮಹಾಸೇನಾನಿಯೆಂದು ಸ್ತುತಿಸುತ್ತಾರೆ.

"Flower of philosophy, thou teacher great
Of cosmic creeds, O spriritual gaint,
O soldier of God, tho mighty-hearted saint,"[18]

ಅನುಮಾನಾಸ್ಪದ ವಿಧಿಯ ಅಧಿಪತಿಯೇ ಎಂಬ ಮಾತುಗಳಲ್ಲಿ ವಿವೇಕಾನಂದರ ಕುರಿತ ಅಪಾರ ಗೌರವವಷ್ಟೇ ಅಲ್ಲ, ಅವರ ವ್ಯಕ್ತಿತ್ವ ಕುರಿತಂತೆ ಚಿಕ್ಕ ವಯಸ್ಸಿನ ಕವಿಯಲ್ಲಿ ಮೂಡಿದ್ದ ಮಾನಸಿಕ ಚಿತ್ರವೂ ನಮ್ಮ ಮುಂದೆ ಪ್ರಕಾಶಿಸುತ್ತದೆ.

ಈ ಕೆಳಗಿನ Thoughts on great Men ಎಂಬ ಕವನ ಕೂಡ ಅಂತದ್ದೇ ಒಂದು ಉದಾಹರಣೆಯಾಗಿದೆ:

"Was a great blessing to the mother earth ;
Who came like flowers bedew'd come to the glen :
Great thinkers who redeemed us from the den
Of joys momentary and evil mirth :
Poets sweet who sang of Nature's inner worth,
And gave us joys too sweet and deep for pen.
......................their thoughts like flames
Burn every vice, and flow from every eye."[19]

ಬದುಕಿನಲ್ಲಿ ದೊರೆಯುವ ಫಲಗಳನ್ನು, ಬದುಕಿನ ನಡೆಯನ್ನು ಲೌಕಿಕ ಮತ್ತು ಪಾರಮಾರ್ಥಿಕ ಎಂಬ ಎರಡು ಶಾಖೆಗಳಲ್ಲಿ ಪ್ರಾಜ್ಞರು ಗುರುತಿಸುತ್ತ ಬಂದಿದ್ದಾರೆ. ಲೌಕಿಕದಿಂದ ಬಿಡುಗಡೆ ಹೊಂದಿ, ಆಧ್ಯಾತ್ಮಿಕದಲ್ಲಿ ಬದುಕಿನ ಅರ್ಥ ಕಂಡುಕೊಳ್ಳುವ ಪ್ರಯತ್ನಗಳನ್ನು ಹಲವು ಮಹನೀಯರು ಮಾಡಿದ್ದಾರೆ. ಉದಾಹರಣೆಗೆ ಹನ್ನೆರಡನೆಯ ಶತಮಾನದ ಬಸವಣ್ಣ ಲೌಕಿಕದಲ್ಲಿ ಗಟ್ಟಿಯಾಗಿ ನೆಲೆಯೂರಿಯೇ ಜೀವನದಲ್ಲಿ ಆಧ್ಯಾತ್ಮಿಕ ಜೀವನ ಕ್ರಮಕ್ಕೆ ಹೊಸ ಆಯಾಮ ತಂದುಕೊಟ್ಟಿದ್ದರೆ, ಇಪ್ಪತ್ತನೆಯ ಶತಮಾನದಲ್ಲಿ ಶ್ರೀರಾಮಕೃಷ್ಣ ಪರಮಹಂಸರು ಲೌಕಿಕ, ಆಧ್ಯಾತ್ಮಿಕಗಳೆರಡರಲ್ಲಿ ಸಮನ್ವಯ ಸಾಧಿಸುವ ಮಹತ್ಸಾಧನೆ ಮಾಡಿದರು. ಇದೇ ಸಮಯದಲ್ಲಿ ಶ್ರೀ ಅರವಿಂದರು "ಜೀವನವೆಲ್ಲವೂ ಯೋಗವೆ" ಎಂದು 'ಪೂರ್ಣಯೋಗ'ದ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದರು.

ಅತ್ಯಂತ ಪ್ರಖರ ವಿಚಾರವಾದಿ ಹಾಗೂ ಆಧ್ಯಾತ್ಮ ಪರಂಪರೆಗೆ ಹೊಸ ಅರ್ಥ ನೀಡಿದ ಸ್ವಾಮಿ ವಿವೇಕಾನಂದರು "ಯಾವ ಸಿದ್ಧಾಂತವನ್ನೇ ಆಗಲಿ, ಯಾವ ಮತ ತತ್ತ್ವವನ್ನೇ ಆಗಲಿ ಅಥವ ಯಾವುದೆ ಪಂಥ, ಚರ್ಚು ಅಥವಾ ದೇವಸ್ಥಾನವನ್ನೆ ಆಗಲಿ ಅವಲಂಬಿಸಬೇಡಿ. ಮಾನವನ ಅಸ್ತಿತ್ವದ ಸಾರವಾದ ದಿವ್ಯತೆಗೆ ಹೋಲಿಸಿದರೆ ಇವೆಲ್ಲ ಅಪ್ರಯೋಜಕವಾದವುಗಳು. ಈ ದೈವತ್ವವು ಮಾನವನಲ್ಲಿ ಹೆಚ್ಚು ಹೆಚ್ಚು ಪ್ರಕಾಶಗೊಂಡಷ್ಟೂ ಹೆಚ್ಚು ಶಕ್ತಿಯನ್ನು ಪಡೆದ ಉತ್ತಮೋತ್ತಮ ಸ್ಥಿತಿಯನ್ನು ಮುಟ್ಟುವನು. ಮೊದಲು ಆ ಆಧ್ಯಾತ್ಮಿಕತೆಯನ್ನು ಪಡೆಯಿರಿ. ಅದನ್ನು ನಿಮ್ಮದಾಗಿ ಮಾಡಿಕೊಳ್ಳಿ ಮತ್ತು ಯಾರನ್ನು ನಿಂದಿಸಬೇಡಿ. ಏಕೆಂದರೆ ಎಲ್ಲ ಮತಗಳಲ್ಲಿಯೂ, ಎಲ್ಲ ತತ್ತ್ವಗಳಲ್ಲಿಯೂ ಸತ್ಯವಿದೆ. ಧರ್ಮವೆಂದರೆ ಬರಿಯ ಮಾತಲ್ಲ ಅಥವಾ ಹೆಸರುಗಳಲ್ಲ ಅಥವಾ ಮತಗಳಲ್ಲ. ಆದರೆ ಅದು ಆಧ್ಯಾತ್ಮ-ಸಾಕ್ಷಾತ್ಕಾರ ಎಂಬುದನ್ನು ನಿಮ್ಮ

ಜೀವನದ ಮೂಲಕ ತೋರಿಸಿ. ಯಾರು ಸತ್ಯವನ್ನು ಪ್ರತ್ಯಕ್ಷ ನೋಡಿರುವರೋ ಅವರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು. ಯಾರು ಆಧ್ಯಾತ್ಮಿಕತೆಯನ್ನು ಗಳಿಸಿರುವರೋ ಅವರು ಮಾತ್ರ ಅದನ್ನು ಇತರರಿಗೆ ನೀಡಬಲ್ಲರು. ಮಾನವ ಕೋಟಿಯ ಮಹಾ ಗುರುಗಳಾಗಬಲ್ಲರು. ಅವರೇ ಜ್ಞಾನಶಕ್ತಿ"[೨೦] ಎಂದಿರುವುದು ಏಕಕಾಲಕ್ಕೆ ಆಧ್ಯಾತ್ಮ ಸಾಧಕರಿಗೂ, ಚಿಂತನಶೀಲರಿಗೂ ಮಾರ್ಗದರ್ಶನ ನೀಡುವಂತಹ ಸಂದೇಶವಾಗಿದೆ.

ಕುವೆಂಪು ಒಂದು ನಿಟ್ಟಿನಿಂದ ಆಧ್ಯಾತ್ಮ ಸಾಧನೆಗೆ ತೊಡಗಿದವರಾದರೂ ಅವರು ಮೂಲತಃ ಕಾಲಾನುಕ್ರಮದಲ್ಲಿ ಕವಿ, ಚಿಂತಕರು. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಿನಿಂದಲೇ ಕವಿತೆ ಬರೆಯಲು ತೊಡಗಿದ ಅವರು ಮಲೆನಾಡಿನ ಗ್ರಾಮೀಣ ಪ್ರದೇಶದ ಕೃಷಿಕ ಸಮುದಾಯದಿಂದ ಬಂದುದರ ಪರಿಣಾಮವಾಗಿ ವಿಸ್ಮಯದಿಂದ ನಿಸರ್ಗವನ್ನೂ ಕುತೂಹಲಾಸಕ್ತಿಯಿಂದ ಸುತ್ತಲಿನ ಬದುಕನ್ನು ನೋಡುತ್ತ ಬಂದವರು. ತಮ್ಮ ಪ್ರಥಮ ಕನ್ನಡ ಕವನ ಸಂಕಲನದಲ್ಲಿ ಕಾಡಿನ ಕವಿಯಾಗಿ 'ಕೊಳಲ'ನೂದಿದ ಕವಿಯೇ 'ಗೊಲ್ಲನ' ಗಾಥೆಯನ್ನು ಪಠಿಸಿದ್ದಾರೆ. ಪ್ರಕೃತಿ ಮಡಿಲಲ್ಲಿಯೇ ಆಧ್ಯಾತ್ಮಿಕ ಶ್ರುತಿ ಹನಿಯಾಗಿ ತೊಟ್ಟಿಕ್ಕಿ, ತೊರೆಯಂತೆ ತಿಳಿಯಾಗಿ ಹರಿದು ಬರುವುದನ್ನು ನಾವು ಅಲ್ಲಿನ ಕವಿತೆಗಳಲ್ಲಿ ಕಾಣಬಹುದು.

ಕುವೆಂಪು ಕಾವ್ಯರಚನೆಯ ಹಿನ್ನಲೆಯಲ್ಲಿಯೇ ಆಧ್ಯಾತ್ಮಿಕ ಚಿಂತನೆ ಮೂಡುತ್ತಿರುವಂತೆ ಕಂಡುಬರುತ್ತದೆ. ಪ್ರಕೃತಿಯ ಬಹಿರಂಗದ ಸೌಂದರ್ಯವನ್ನು ಕಂಡು ತನ್ಮತೆಯಿಂದ ಬಣ್ಣಿಸಲು ಪ್ರಾರಂಭಿಸಿದ ಕವಿ ಅದರ ಅಂತರಂಗದ ಆತ್ಮತೇಜಸ್ಸಿಗೂ ಗಮನ ಕೊಡುತ್ತಿರುವುದು ಮಹತ್ವದ ಸಂಗತಿಯಾಗಿ ಕಾಣುತ್ತದೆ. 'ಕಲಾಸುಂದರಿ' ಕವನ ಸಂಗ್ರಹಕ್ಕೆ 'ಮುನ್ನುಡಿ' ಬರೆದ ಕುವೆಂಪು "ಕಲಾಸುಂದರಿ ಸರಸಿಯಾದರೂ ಮಹಾತಪಸ್ವಿನಿ. ಆಕೆಯ ಬಹಿರಂಗದಲ್ಲಿ ತೇಜಸ್ಸಿರುವಂತೆ ಅಂತರಂಗದಲ್ಲಿ ತಪಸ್ಸಿದೆ... ಆಕೆ ಎಷ್ಟರಮಟ್ಟಿಗೆ ಭೋಗಿನಿಯೋ, ಅದಕ್ಕಿಂತಲೂ ಹೆಚ್ಚಾಗಿ ಯೋಗಿನಿ... ಆಕೆ ಮಾನಸರ ಆಲಸ ಸಮಯದ ನರ್ಮಮೂರ್ತಿಯಲ್ಲ, ಕಲೋಪಾಸಕರ ಹೃದಯ ಕುಟೀರದ ತಪೋಮೂರ್ತಿ. ಆಕೆಯಲ್ಲಿ ಕಾವ್ಯದ ರಮಣೀಯತೆಯೂ ತತ್ತ್ವದ ಸೂಕ್ಷ್ಮತೆಯೂ ಒಂದಾಗಿವೆ..." ಎನ್ನುತ್ತಾರೆ

ಹೀಗೆ 'ಕಲಾಸುಂದರಿ'ಯ ವಿಶೇಷತೆಗಳನ್ನು ವಿವರಿಸುವ ಕುವೆಂಪು ಆಧ್ಯಾತ್ಮಿಕ ಪರಿಭಾಷೆ ಯಲ್ಲಿಯೇ ಮಾತಾಡುತ್ತಿರುವುದನ್ನು ತಟ್ಟನೆ ಗುರುತಿಸಬಹುದು. ಮಾತು ಕುವೆಂಪು ಅವರ ವ್ಯಕ್ತಿತ್ವದ ಒಳಗಿನಿಂದಲೇ ಸ್ವಯಂಸ್ಫೂರ್ತಿಯಾದ ಮಾತುಗಳೆಂಬುದರಲ್ಲಿ ಸಂದೇಹವಿಲ್ಲ. ಆತ್ಮ ಸಾಕ್ಷಾತ್ಕಾರ ಪಡೆಯುವುದು ಒಂದು ತಪಸ್ಸೂ ಅಹುದು, ಯೋಗವೂ ಅಹುದು. ಆತ್ಮದ ಕಡೆಗೆ ಹೊರಳುವ ಪ್ರತಿಯೊಬ್ಬ ವ್ಯಕ್ತಿ ದೈವತ್ವವನ್ನು ಪರ್ಯಾಯವಾಗಿ ಒಪ್ಪಿಕೊಂಡೇ ಇರುತ್ತಾನೆ. ದೈವತ್ವವು ಪುರುಷ ರೂಪದಲ್ಲಿಯಾದರೂ ಇರಬಹುದು, ಸ್ತ್ರೀ ರೂಪದಲ್ಲಾದರೂ ಇರಬಹುದು. ಈ ರೂಪಗಳು ಮಾನವನ ಶ್ರದ್ಧೆಯನ್ನೇ ಆಧರಿಸಿರುತ್ತವೆ. ಕುವೆಂಪು ಎರಡೂ ರೂಪಗಳಲ್ಲಿ ಆ ದೈವತ್ವವನ್ನು ಗುರುತಿಸಿದ್ದು ಅವರ ಕವಿತೆಗಳಿಂದ ತಿಳಿದುಬರುತ್ತದೆ. ಮೊದಮೊದಲಿಗೆ ಕುವೆಂಪು

ಕಾವ್ಯ ಶ್ರದ್ಧೆ, ಪುರುಷ ರೂಪದ ಅಚಿಂತ್ಯ ಶಕ್ತಿಯನ್ನು ಆರಾಧಿಸಿದ್ದು, ನಂತರ ಬೇರೆ ಬೇರೆ ಸಂದರ್ಭಗಳಲ್ಲಿ ವಿವಿಧ ರೂಪಗಳನ್ನು ಗುರುತಿಸುತ್ತದೆ.

ಕುವೆಂಪು ಅವರ ಆಧ್ಯಾತ್ಮಿಕ ಸಾಧನೆ ಶುದ್ಧವಾಗಿ ಭಾರತೀಯ ಮನೋಧರ್ಮದ್ದು. ಅವರ ಶ್ರದ್ಧೆ ಅಥವಾ ಅಭೀಪ್ಸೆ ಬಾಲ್ಯದಿಂದಲೇ ಒಂದು ಆಕಾರ ಪಡೆಯಲು ಹವಣಿಸಿದೆ. ಕುವೆಂಪು ಅವರ ಆತ್ಮ ಕಥನವಾದ ನೆನಪಿನ ದೋಣಿಯಲ್ಲಿ ಅವರು ಆಡುವ ಮಾತುಗಳಲ್ಲಿ ಇದಕ್ಕೆ ಉದಾಹರಣೆಗಳು ಸಿಗುತ್ತವೆ. ಅವರು ವಿದ್ಯಾರ್ಥಿ ದೆಸೆಯಲ್ಲಿ 'ಭಗವದ್ಗೀತೆ'ಯನ್ನು ಅತ್ಯಂತ ಶ್ರದ್ಧೆಯಿಂದ ಓದಿದ್ದನ್ನು ನೆನಪಿನ ದೋಣಿಯಲ್ಲಿ ಕೃತಿಯ ಒಂದೆಡೆಯಲ್ಲಿ ತಿಳಿಸಿಕೊಟ್ಟಿದ್ದಾರೆ. ಆ 'ಭಗವದ್ಗೀತೆ' ಅನಿಬೆಸೆಂಟರಿಂದ ಅನುವಾದಿತವಾದ ಕೃತಿ. ನನ್ನ ಕಡೆಗಿರುವ ಈ 'ಭಗವದ್ಗೀತೆ' ಕಳೆದ ಶತಮಾನದ ಮೊದಲಲ್ಲಿ ಅಂದರೆ ೧೯೦೭ರಲ್ಲಿ ಪ್ರಥಮಾವರ್ತಿಯಾಗಿ ಪ್ರಕಟವಾದ ಕೃತಿ. ಸಂಸ್ಕೃತ ಮೂಲ ಅದರಲ್ಲಿದ್ದು, ಪ್ರತಿಯೊಂದು ಶ್ಲೋಕಕ್ಕೂ ಅನಿಬೆಸಂಟರು ಇಂಗ್ಲಿಷಿನಲ್ಲಿ ಅನುವಾದ ಕೊಟ್ಟಿದ್ದಾರೆ. ಅನುವಾದ ತುಂಬ ಸೊಗಸಾಗಿದೆ. 'ಭಗವದ್ಗೀತೆ' ಆಧ್ಯಾತ್ಮಿಕ ಸಾಧನೆಯನ್ನು ಸ್ಪಷ್ಟವಾಗಿ ಚಿತ್ರಿಸುವ ಒಂದು ಅನನ್ಯ ಕೃತಿ. 'ಭಗವದ್ಗೀತೆ'ಯ ೧೮ ಅಧ್ಯಾಯಗಳನ್ನು ಮೂರು ವಿಭಾಗಗಳಲ್ಲಿ ವಿಂಗಡಿಸಿ, ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ– ಈ ಮೂರು ಯೋಗಗಳನ್ನು ಅಲ್ಲಿ ಖಚಿತವಾಗಿ ಗುರುತಿಸಲಾಗಿದೆ'.

ಕುವೆಂಪು ಅವರ ಆಧ್ಯಾತ್ಮಿಕ ಸಾಧನೆಗೆ 'ಭಗವದ್ಗೀತೆ'ಯೊಂದೇ ಆಧಾರವಲ್ಲ. ಒಂದು ಹಂತದಲ್ಲಿ ಅದರಿಂದ ಪ್ರಯೋಜನ ಪಡೆದರೆಂದು ಮಾತ್ರ ಹೇಳಬಹುದು. ಇದಕ್ಕಿಂತ ಮುಖ್ಯವಾಗಿ ಅವರ ಆಧ್ಯಾತ್ಮಿಕ ಪೂರ್ಣ ದೃಷ್ಟಿಗೆ ಆದಿ, ಮಧ್ಯ ಹಾಗೂ ಅಂತಿಮ ಘಟ್ಟವಾದದ್ದು ಶ್ರೀ ರಾಮಕೃಷ್ಣ ಪರಮಹಂಸರ ಸಮನ್ವಯ ಯೋಗ.

೧೯೨೬ರಲ್ಲಿ ಅಂದರೆ ತಮ್ಮ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಸ್ವಾಮಿ ಸಿದ್ಧೇಶ್ವರಾನಂದರ ಆತ್ಮೀಯತೆಯಿಂದಾಗಿ ಶ್ರೀರಾಮಾಕೃಷ್ಣಾಶ್ರಮದಲ್ಲಿ ಪ್ರವೇಶ ಪಡೆದ ಮೇಲೆ ಅವರ ಭಕ್ತಿ ಒಂದು ಶಿಸ್ತಿಗೆ ಒಳಪಟ್ಟು ವೃದ್ಧಿಹೊಂದುತ್ತ ಹೋಗುತ್ತದೆ. ಶ್ರೀರಾಮಕೃಷ್ಣ ಪರಮಹಂಸರು, ಶ್ರೀ ಶಾರದಾ ಮಾತೆಯವರು, ಸ್ವಾಮಿ ವಿವೇಕಾನಂದರು ಅವರ ಆರಾಧ್ಯ ಮೂರ್ತಿಗಳಾಗುತ್ತಾರೆ. ಅದೇ ವರ್ಷ (೧೯೨೬ರಲ್ಲಿ) ಸ್ವಾಮಿ ಸಿದ್ಧೇಶ್ವರಾನಂದರೊಡಗೂಡಿ ಜೋಗ ಜಲಪಾತ ನೋಡಲು ಹೋದಾಗ ಅವರು ಇದ್ದಕ್ಕಿದ್ದಂತೆ ಮೈಲಿ ಬೇನೆಯ ಭೀಕರ ವ್ಯಾಧಿಗೆ ತುತ್ತಾಗಿದ್ದರ ವಿವರಣೆ ನೆನಪಿನ ದೋಣಿಯಲ್ಲಿದೆ. ಆ ಅಸಹನೀಯ ಪರಿಸ್ಥಿತಿಯಲ್ಲಿ ಅವರ ಶ್ರದ್ಧೆ ಇನ್ನಷ್ಟು ಗಟ್ಟಿಗೊಳ್ಳುತ್ತದೆ. ೧೯೨೯ರಲ್ಲಿ ಕಲ್ಕತ್ತಾ–ಬೇಲೂರ ಮಠಕ್ಕೆ ಹೋಗಿ ಸ್ವಾಮಿ ಶಿವಾನಂದರಿಂದ ದೀಕ್ಷೆ ಪಡೆದ ಮೇಲಂತೂ ಕುವೆಂಪು ಸಂಪೂರ್ಣವಾಗಿಯೇ ಆಧ್ಯಾತ್ಮ ಸಾಧಕರಾಗಿಬಿಡುತ್ತಾರೆ. ಅವರ ಬದುಕೇ ಒಂದು ನಿರ್ದಿಷ್ಟ ಪಥದಲ್ಲಿ ಸಾಗುತ್ತದೆ.

ಕುವೆಂಪು ಆಧ್ಯಾತ್ಮಿಕ ಸಾಧನೆಗೆ ಹೊಸನೀರು ಬಂದು ಸೇರಿದ್ದು ಶ್ರೀ ಅರವಿಂದರ 'ದಿವ್ಯಜೀವನ' ಎಂಬ ಉದ್ಗ್ರಂಥವನ್ನು ಓದಿದ ಮೇಲೆ. ಆ ವೇಳೆಗಾಗಲೇ ಕುವೆಂಪು ಅವರು ಕವಿಗಳಾಗಿ,

ಕಾದಂಬರಿಕಾರರಾಗಿ, ನಾಟಕಕಾರರಾಗಿ, ವಿಮರ್ಶಕರಾಗಿ ಬಹುದೂರ ಬಂದಿದ್ದರು. ಶ್ರೀರಾಮಾಯಣ ದರ್ಶನಂ ಕೂಡ ಅರ್ಧದಷ್ಟು ಮುಗಿದಿತ್ತು. ಈ ವಯಸ್ಸಿನಲ್ಲಿ ಶ್ರೀ ಅರವಿಂದರ ತತ್ತ್ವಜ್ಞಾನ ಆಯಸ್ಕಾಂತದಂತೆ ಅವರಲ್ಲಿ ಸೆಳೆದುಕೊಂಡಿತು. ಅವರ ಧೀಃತೃಷ್ಣೆಗೆ ಶಾಂತಿಯನ್ನೂ ಅದು ತಂದುಕೊಟ್ಟಿತೆಂದು **'ಶ್ರೀ ಅರವಿಂದರಿಗೆ'** ಎಂಬ ಕವಿತೆಯಲ್ಲಿ ಕುವೆಂಪು ಹೇಳಿಕೊಂಡಿದ್ದಾರೆ.

"ಪ್ರಾಚ್ಯಪಾಶ್ಚಾತ್ಯ ತತ್ತ್ವಜ್ಞಾನ ಖನಿಗಳಲಿ
ತೊಳತೊಳಲಿ ಹುಡುಕಿ ಬಹುವಜ್ರಗಳನಾಯ್ದು ನಾಂ
ಶ್ರೀಮಂತನಾಗಿರ್ದೊಡಂ, ಹೇ ಪೂರ್ಣಯೋಗೀಂದ್ರ
ಕೊನೆಗೆ ನಿನ್ನೀ ಮೇರುಕೃತಿಯ ದರ್ಶನ ಶಿಖರ
ಮೇರುವುನ್ನತಮತಿಯ ಮಾನಸ ಸರೋವರದಿ
ಪೂರ್ಣತೃಪ್ತಿಯ ನೀಂಟೆ ಶಾಂತವಾದುದು ನನ್ನ
ಧೀತೃಷ್ಣೆ................."೨೧

ಕುವೆಂಪು ಅವರ 'ಅಗ್ನಿಹಂಸ', 'ಕಿಂಕಿಣಿ' ಕೃತಿಗಳಲ್ಲಿ ಧ್ಯಾನಸ್ಥ ಮನಸ್ಸಿನ ವಿವಿಧ ಅನುಭಾವದ ಹೊಳಹುಗಳು ಇವೆ. 'ಕೊಳಲು' ಸಂಕಲನದಲ್ಲಿ ಪ್ರಾರ್ಥನಾ ರೂಪದ, ಧ್ಯಾನಾವಸ್ಥೆಯ, ಆತ್ಮಸಾಕ್ಷೀ ಪ್ರಜ್ಞೆಯ ಹಲವು ಕವಿತೆಗಳು ದೊರೆಯುತ್ತವೆ. ಪ್ರಕೃತಿ ವರ್ಣನೆಯಲ್ಲಿ ನಿಸರ್ಗಾನುಭಾವ ಇದ್ದರೆ, ಪ್ರೇಮಗೀತೆಗಳಲ್ಲಿ ದೈವಿಕ ಪ್ರಣಯವು ಇರುವದನ್ನು ಕಾಣಬಹುದು.

ನೇರವಾಗಿಯೇ ಆಧ್ಯಾತ್ಮಿಕ ಅಭೀಪ್ಸೆಯಿಂದ ಕೂಡಿದ ಕವಿತೆಗಳು **ಕೊಳಲು** ಸಂಗ್ರಹದಲ್ಲಿ ದೊರೆಯುತ್ತವೆ.

"ನಿನ್ನ ಬಾಂದಳದಂತೆ
ನನ್ನ ಮನವಿರಲಿ
ನಿನ್ನ ಸಾಗರದಂತೆ
ನನ್ನ ಎದೆಯಿರಲಿ

ನಿನ್ನ ಸುಗ್ಗಿಯ ತೆರದಿ
ನನ್ನ ಸೊಬಗಿರಲಿ
ನಿನ್ನ ಲೀಲೆಯ ತೆರದಿ
ನನ್ನ ಬಾಳಿರಲಿ

ನಿನ್ನಾತ್ಮದಾನಂದ
ನನ್ನದಾಗಿರಲಿ
ನಿನ್ನೊಳಿರುವಾ ಶಾಂತಿ
ನನ್ನೆದೆಗೆ ಬರಲಿ"೨೨

ಈ ಪ್ರಾರ್ಥನೆ ಕುವೆಂಪು ಅವರ ಭಾವದ ವೈಶಾಲ್ಯವನ್ನು ಸೂಚಿಸುವುದರ ಜೊತೆಗೆ ಶ್ರದ್ಧೆಯನ್ನು ಕುರಿತು ಸ್ಪಷ್ಟ ಚಿತ್ರಣವನ್ನೂ ಕೊಡುತ್ತದೆ. ಅದೇ ಸಂಕಲನದಲ್ಲಿರುವ 'ಎಲ್ಲಿಹೆ?' 'ಎಂತಿಹೆ?' ಎಂಬ ಕವಿತೆಗಳು ನಿಜವಾದ ಆತ್ಮಶೋಧಕನ ಹುಡುಕಾಟಗಳೇ. ಕುವೆಂಪು ಅವರಲ್ಲಿ ಮುಂದುವರಿದ ಈ ಶೋಧನೆ **ಕಿಂಕಿಣಿಯಲ್ಲಿ** ವ್ಯಾಕುಲದ 'ನಿರೀಕ್ಷೆ'ಯಾಗುತ್ತದೆ.

"ನೀನೈತರುವೆ ಎಂದು ಕಾತರದಿ ಕಾದೆ
ಹಾದಿಯ ತುದಿಯಲಿ ನೀ ಬರುವುದನು ಕಾಣಲೆಂದು
ಸಲಸಲವೂ ಎಲೆಮನೆಯ ಹೊರಗೆ ಹೋದೆ
ಕೊಂಕು ಕೊಂಕಾಗಿದ್ದ ಕೆಂಪಾದ ಹಾದಿ ದಿಗಂತದಲ್ಲಿ ಕಣ್ಮರೆಯಾಗಿತ್ತು
ನಿರ್ಜನವಾಗಿತ್ತು
...........................................
ಅನಂತ ನಿರೀಕ್ಷೆಯೇ ತಪಸ್ಸಾಯಿತೆನಗೆ!"[೨೩]

ಇದು ದೈವಿಕ ಅನುಭೂತಿಯಲ್ಲಿ ಶಬರಿಯ ಚಿತ್ರವನ್ನು ನಮ್ಮ ಕಣ್ಣು ಮುಂದೆ ತಂದು ನಿಲ್ಲಿಸುತ್ತದೆಯಾದರೂ ಅಷ್ಟಕ್ಕೆ ಇದನ್ನು ಮಿತಿಗೊಳಿಸುವಂತಿಲ್ಲ. ಆಧ್ಯಾತ್ಮಿಕ ಸಾಧನೆಯ ಪ್ರಾರಂಭದ ಅವಸ್ಥೆಯ ಸಂವೇದನೆಗಳಿವು. ಈ ಸಂವೇದನೆಗಳ ನಂತರ 'ಕಾಣ್ಕೆ'ಯೂ ಒಂದಿರುತ್ತದೆ. ಕುವೆಂಪು ಅವರ 'ನಿರೀಕ್ಷೆ' ಫಲಿಸಿ ಒಂದು ಸ್ಥಿತಿಗೆ ಬಂದಾಗ ಪಡೆದ ಅನುಭವವೂ ಭಿನ್ನ ರೀತಿಯದು.

'ಸಕಲ ತಪೋತರು ಪರಮಫಲ' ಪಡೆದವರೇ ಆದ ರಾಮಕೃಷ್ಣ ಪರಮಹಂಸ, ಅರವಿಂದ, ರಮಣ ಮಹರ್ಷಿ ಮೊದಲಾದವರು ಕುವೆಂಪು ಅವರಂತೆ ಲೌಕಿಕವನ್ನು ಆಧ್ಯಾತ್ಮಿಕತೆಯನ್ನು ಬೆರೆಸುತ್ತಲೇ ಬಂದವರು ಎಂದು ಹೇಳುವಂತಿಲ್ಲ. ಕುವೆಂಪು ಚಿಂತನಶೀಲತೆ ಇಲ್ಲಿ ಭಿನ್ನವೇ ಆದ ಕಾರ್ಯ ಮಾಡುತ್ತಿತ್ತು. ಕುವೆಂಪು ಪ್ರಖರ ವಿಚಾರವಾದಿಗಳು, ಸ್ವಾಮಿ ವಿವೇಕಾನಂದರ ವೈಚಾರಿಕ ಚಿಂತನೆಗಳ ವಾರಸುದಾರರೆಂದು ಹೇಳಿದರೂ ನಡೆಯುತ್ತದೆ. ಸ್ವಾಮಿ ವಿವೇಕಾನಂದರು ವೇದಾಂತ ಜಗತ್ತಿಗೆ ಭಕ್ತಯೋಗ, ಜ್ಞಾನಯೋಗ, ರಾಜಯೋಗಗಳನ್ನು ಬೋಧಿಸಿದಂತೆ ಲೌಕಿಕ ಜೀವನಕ್ಕೆ ಅಗತ್ಯವಿರುವ ಅನ್ನ, ಆಶ್ರಯ, ಅರಿವುಗಳ ಬಗ್ಗೆಯೂ ಖಡಾ ಖಂಡಿತವಾಗಿಯೇ ಮಾತನಾಡಿದರು. ಅವರು ಒಂದೆಡೆಯಲ್ಲಿ ಹೇಳುತ್ತಾರೆ: "ನಮಗೆ ಬೇಕಾಗಿರುವುದು ಕಬ್ಬಿಣದ ಸ್ನಾಯುಗಳು, ಉಕ್ಕಿನ ನರಗಳು. ಸಾಕಷ್ಟು ಕಾಲ ನಾವು ಅತ್ತಿದ್ದೇವೆ. ಇನ್ನು ಅಳುವುದು ಸಾಕು. ಆದರೆ ನಿಮ್ಮ ಕಾಲುಗಳ ಮೇಲೆ ಎದ್ದು ನಿಲ್ಲಿ. ಮನುಷ್ಯರಾಗಿ ನಮಗೀಗ ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ನಮಗೆ ಬೇಕಾಗಿರುವುದು ಮಾನವ ನಿರ್ಮಾಣ ಸಮಗ್ರ ಶಿಕ್ಷಣ. ಸತ್ಯದ ಒರೆಗಲ್ಲು ಇಲ್ಲದೆ ದೈಹಿಕವಾಗಿ, ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ ನಿಮ್ಮನ್ನು

ದುರ್ಬಲ ಮಾಡುವುದೇನಿದ್ದರೂ ಅದನ್ನು ವಿಷವೆಂದು ತಿರಸ್ಕರಿಸಿಬಿಡಿ. ಅದರಲ್ಲಿ ಜೀವವಿಲ್ಲ. ಅದು ಸತ್ಯವಾಗಿರಲಾರದು. ಸಬಲರನ್ನಾಗಿ ಮಾಡುವುದೇ ಸತ್ಯ; ಸತ್ಯ ಶುದ್ಧವಾದದ್ದು, ಸತ್ಯ ಸಮಸ್ತ ಜ್ಞಾನ."

ಕುವೆಂಪು ಅಂಥ ಶುದ್ಧ ಸತ್ಯವನ್ನು ಗಟ್ಟಿಯಾಗಿ ಹಿಡಿದುಕೊಂಡು 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ' ಎಂದು ಹೇಳಿದ್ದು. ಈ ಕೃತಿಯ ಮುನ್ನುಡಿಯ ಕೊನೆಯಲ್ಲಿ ಕುವೆಂಪು ಹೇಳುತ್ತಾರೆ: "... ಆತ್ಮಶ್ರೀಗಾಗಿ ನಿರಂಕುಶಮತಿಯಾಗುವ ಧೀರ ವಿದ್ಯಾರ್ಥಿ ಹತಾಶನಾಗುವುದಿಲ್ಲ. ಅವನು ವಿಜ್ಞಾನ ಮತ್ತು ಆಧ್ಯಾತ್ಮ (ಮತವನ್ನಲ್ಲ, ಮೌಢ್ಯವನಲ್ಲ, ಅಂಧಶ್ರದ್ಧೆಯನ್ನಲ್ಲ, ಅಂಧಾಚಾರವನ್ನಲ್ಲ) ಇವೆರಡನ್ನೂ ಕೆಚ್ಚಿನಿಂದ, ನಿಷ್ಠೆಯಿಂದ, ದೃಢಬುದ್ಧಿಯಿಂದ ಆಶ್ರಯಿಸಿ, ವಿಚಾರಾಧಿಯಾಗಿ ವೈಜ್ಞಾನಿಕ ದೃಷ್ಟಿ ಸಂಪನ್ನರಾಗಿ ಮುಂಬಂದು ತನಗೂ ಲೋಕಕ್ಕೂ ಕಲ್ಯಾಣವಾಗುವಂತೆ ಬಾಳುತ್ತಾನೆ."

ಕುವೆಂಪು ಅವರ 'ಪಾಂಚಜನ್ಯ' ಹಾಗೂ 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ' ಕವನ ಸಂಗ್ರಹಗಳಲ್ಲಿ ಲೋಕ ದೃಷ್ಟಿ ಅಧಿಕವಾಗಿದೆ ಎಂದು ಅನಿಸುತ್ತಾದರೂ 'ಪಾಂಚಜನ್ಯ'ದ ಪ್ರಥಮ ಮುದ್ರಣಕ್ಕೆ ಬರೆದ ಮುನ್ನುಡಿಯಲ್ಲಿ ಕುವೆಂಪು "ನಿಜವಾದ ಕಲಾವಿದನಿಗೆ ಸೌಂದರ್ಯದಂತೆ ರೌದ್ರವೂ ಆರಾಧನೆಯ ದೇವತೆಯೇ, ಯಾವುದನ್ನು ಬಿಟ್ಟು ಯಾವುದನ್ನು ಹಿಡಿದರೂ ಪೂರ್ಣ ಸತ್ಯವಾಗುವುದಿಲ್ಲ" ಎಂದಿದ್ದಾರೆ: ಪೂರ್ಣಸತ್ಯದ ದರ್ಶನದಲ್ಲಿ ಒಂದೆಡೆ ಶಾಂತಿಯಿದ್ದರೆ ಇನ್ನೊಂದೆಡೆ ರೌದ್ರತೆಯಿರುವುದಾದರೂ ಕವಿಯು ಕೊನೆಗೆ ಬಯಸುವುದು, ಅಂತಿಮವಾಗಿ ಕಂಡರಿಸುವುದು ಶಾಂತಿಯ ಸ್ವರೂಪವನ್ನೇ ಅಲ್ಲವೆ? 'ವಿವೇಕವಾಣಿ'ಯ ಮುನ್ನುಡಿಯಲ್ಲಿ ಕುವೆಂಪು ಅವರು 'ಪಾಂಚಜನ್ಯ'ದ ಮೂಲದ್ರವ್ಯ ಎಲ್ಲಿದೆಂಬುದನ್ನು ತಿಳಿಸಿಕೊಟ್ಟಿದ್ದಾರೆ. "ಪಾಂಚಜನ್ಯ ಎಂಬ ಕವನದಲ್ಲಿರುವ ಭಾವನೆಗಳೆಲ್ಲವೂ ಸ್ವಾಮಿ ವಿವೇಕಾನಂದರವೇ ಎಂಬುದು ಅವರ ಕೃತಿಗಳನ್ನು ಓದಿದವರಿಗೆ ಗೊತ್ತಾಗುತ್ತದೆ." ಇದು ಸ್ವಾಮಿ ವಿವೇಕಾನಂದರ ವಾಣಿಯ ಅನುರಣನವಾದ್ದರಿಂದ ಆಧ್ಯಾತ್ಮಿಕ ಪರಿಧಿಯಲ್ಲಿಯೇ ಮೂಡಿದ ಸಂದೇಶವಾಗುತ್ತದೆ.

ಕವಿಯ ಈ ಆಧ್ಯಾತ್ಮಿಕತೆ ಒಂದು ರೀತಿಯದ್ದಾದರೆ 'ನೂರು ದೇವರುಗಳನೆಲ್ಲ ನೂಕಾಚೆ ದೂರ, ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರಾ' ಎಂಬುದು ದೇಶಭಕ್ತಿಯ ನೂತನ ದೃಷ್ಟಿಯಾಗಿ ಪರಿವರ್ತಿತವಾಗುತ್ತದೆ. ನೇಗಿಲ ಹಿಡಿದು ಹೊಲದಲ್ಲಿ ಉಳುವ ರೈತ 'ನೇಗಿಲಯೋಗಿ'ಯಾಗಿ ಆಧ್ಯಾತ್ಮ ದೃಷ್ಟಿಯ ಕವಿಯ ಪ್ರತಿಭೆಗೆ ಕಂಡು ಬಿಡುತ್ತಾನೆ. 'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಎಂಬುದು ಒಂದು ಆರ್ಥಿಕ ನೀತಿ. ಅಥವಾ ಸಮಾಜವಾದದ ಸಿದ್ಧಾಂತ. ಇದು ಮಾನವ ಸಮಾನತೆ, ಯೋಗಿಯ ದರ್ಶನವೂ ಅಹುದು. 'ಮಾನವ ಜಾತಿ ತಾನೊಂದೆ ವಲಂ' ಎಂದು ಮಹಾಕವಿ ಪಂಪನು ಗುರುತಿಸುವಲ್ಲಿಯೂ ಅಂಥ ದರ್ಶನ ವಿಶೇಷವಿರುವುದನ್ನು ಕಾಣಬಹುದು. ಯಾಕೆಂದರೆ ಆತನು ಲೌಕಿಕ ಮತ್ತು ಆಗಮಿಕ ಎರಡೂ ಬದುಕನ್ನು ಅರಿತವನು. ಷಟ್‌ಸ್ಥಲ ಸಾಧನೆ ಮಾಡಿದ ಬಸವಣ್ಣ ತನ್ನ ಆಧ್ಯಾತ್ಮಿಕ ಎತ್ತರದಲ್ಲಿಯೇ

ನಿಂತು. 'ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ' ಸಿದ್ಧಾಂತವನ್ನು ಪ್ರತಿಪಾದಿಸಿದನು. ಇದು ವಿಶ್ವದ ನೈಜ ಆಧ್ಯಾತ್ಮ ಸಾಧಕರ ದರ್ಶನದ ಮಹತ್ಕಾಂಕ್ಷೆಯೆಂದು ಹೇಳಬಹುದು.

ವ್ಯಕ್ತಿಯ ಯೌಗಿಕ ಸ್ಥಿತಿಯ ಬಗ್ಗೆ 'ವಿಭೂತಿ ಪೂಜೆ'ಯಲ್ಲಿ ಅವರು ವಿವರಿಸಿದ್ದಾರೆ. ಸಚ್ಚಿದಾನಂದ ಲೀಲಾರ್ಥವಾಗಿ ಮಾಯೆಗವತರಿಸಿದ ಜೀವ, ತನ್ನ ಸ್ವಸ್ಥಾನ ಸಂಸ್ಥಾಪನ ಸಾಧನೆಯಲ್ಲಿ ತೊಡಗುತ್ತದೆ. ಸ್ವಾಭಾವಿಕವಾಗಿ, ಪ್ರಕೃತಿ ಸಿದ್ಧವಾಗಿ. ಆ ಸಾಧನೆ ಬೇರೆ ಬೇರೆಯ ಕೋಶಗಳಲ್ಲಿ ಆಯಾ ಕೋಶಗಳಿಗೆ ಅನುಗುಣವಾದ ರೀತಿಯಲ್ಲಿ, ರೂಪಗಳಲ್ಲಿ ಸಾಗುತ್ತದೆ. ಅದು ಅನ್ನಮಯದಲ್ಲಿ ವಿಕಾಸಗೊಳ್ಳುವಾಗ ನಿದ್ರಿತವೆಂಬಂತೆ ಸಾಗುತ್ತದೆ. ಪ್ರಾಣಮಯದಲ್ಲಿ ಸ್ವಪ್ನಮಯವೆಂಬಂತೆ, ಮನೋಮಯದಲ್ಲಿ ಜಾಗೃತವಾಗಿ, ಪ್ರಜ್ಞಾಪೂರ್ವಕವಾಗಿ, ಸ್ವ-ಸ್ವಪ್ರಯತ್ನಶೀಲವಾಗಿ, ತನ್ನರಿವಿಗೆ ತಾನೇ ವಿಷಯವಾಗಿ, ಆರಾಧ್ಯವಾಗಿ, ಆದರ್ಶವಾಗಿ, ಕರೆಯಾಗಿ, ಕೋರಿಕೆಯಾಗಿ, ಪ್ರಿಯವಾಗಿ, ಪೂಜ್ಯವಾಗಿ ಗೋಚರಿಸುತ್ತದೆ. ಹಾಗೆಯೇ ತಾನಿರುವ ಮಟ್ಟಕ್ಕೆ ಆ ಮೇಲಿರುವ ಮಟ್ಟ ವಿಭೂತಿ ಸ್ಥಾನವಾಗಿ ಪರಿಣಮಿಸುತ್ತದೆ. ವ್ಯಕ್ತಿಯು ತನ್ನ ಮುಕ್ತಿಯನ್ನು ತನ್ನ ಜೀವಿತೋದ್ದೇಶದ ಮೂಲಕವೇ ಸಾಧಿಸಿಕೊಳ್ಳಬೇಕೆಂಬ ಕಾಣ್ಕೆಯನ್ನು ತೋರಿಸುವ ಆಂಜನೇಯನ ಪರ್ವತ ಯಾತ್ರೆಯ ಸಂದರ್ಭದಲ್ಲಿ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಈ ಯೌಗಿಕ ದರ್ಶನವನ್ನು ಅವರು ಮಾಡಿಸಿದ್ದಾರೆ.

ಕುವೆಂಪು ನಾವು ತಿಳಿದುಕೊಂಡಂತೆ ಬರೀ ಕವಿಯಲ್ಲ, ನಾಟಕಕಾರರಲ್ಲ, ಕಾದಂಬರಿಕಾರರಲ್ಲ: ಅವರು ಉನ್ನತ ಶ್ರೇಣಿಯ ಆಧ್ಯಾತ್ಮ ಸಾಧಕರು. ಅಂತೆಯೆ ಅವರ ಬರವಣಿಗೆ ನವೀನ ದರ್ಶನದಿಂದ ದೀಪ್ತವಾಗಿವೆ. ಅವರ ಮಹಾಕಾವ್ಯ ಶ್ರೀ ರಾಮಾಯಣದರ್ಶನಂ ಅನ್ನಮಯ ಪ್ರಪಂಚದಿಂದ ಆನಂದಮಯ ಪ್ರಪಂಚಕ್ಕೆ ಏರುವ ಸಾಧನಾ ಪಥವನ್ನು ಸೂಚಿಸುತ್ತದೆ. ಕುವೆಂಪು ಅವರ ಹಲವಾರು ಲೇಖನಗಳು 'ದರ್ಶನ' ಸಮನ್ವಯವಾಗಿಯೇ ಸೃಷ್ಟಿಯಾಗಿವೆ. ಉದಾಹರಣೆಗೆ 'ಕವಿಯಲ್ಲಿ ವಿಭೂತಿ', 'ಪೂರ್ಣದೃಷ್ಟಿಗೆ ಗಾಂಧೀಜಿ', 'ಶ್ರೀ ಅರವಿಂದರು', 'ಟಾಗೋರ್' ಮುಂತಾದ ಲೇಖನಗಳನ್ನು ನೋಡಬಹುದು.

ಶ್ರೀ ಅರವಿಂದರು ತಮ್ಮ ಮೇರುಕೃತಿಯಾದ 'ದಿವ್ಯ ಜೀವನ'ದ ಎರಡನೆಯ ಸಂಪುಟದ ಹದಿನಾರನೆಯ ಅಧ್ಯಾಯದಲ್ಲಿ 'ಬ್ರಹ್ಮವೂ ಸತ್ಯ, ವಿಶ್ವವೂ ಸತ್ಯ ಎಂಬುದೇ ಪೂರ್ಣಜ್ಞಾನ. ಬ್ರಹ್ಮ ಸಾಕ್ಷಾತ್ಕಾರ ಎಷ್ಟು ಮಹತ್ವಪೂರ್ಣವೋ ಅಷ್ಟೇ ಮಹತ್ವಪೂರ್ಣ ಜಗತ್ತಿನ ಜೀವನ" ಎಂದಿದ್ದಾರೆ. ಕುವೆಂಪು ಅವರ ಬರವಣಿಗೆಯಲ್ಲಿ ಆಧ್ಯಾತ್ಮ ಮತ್ತು ಲೌಕಿಕಗಳೆರಡರ ಸತ್ಯವನ್ನೂ ನಾವು ಕಾಣದಿರೆವು.

ಆಧ್ಯಾತ್ಮಿಕತೆ ಲೌಕಿಕದಿಂದ ಸಿಡಿದು ನಿಲ್ಲವ ಹೂಣಿಕೆಯೇನಲ್ಲ. ಅದು ಲೌಕಿಕ ನೆಲೆಗಳನ್ನು ಭದ್ರಗೊಳಿಸುವ, ಸಹ್ಯಗೊಳಿಸುವ, ಮಾನವ ವಿಕಾಸದ ಇನ್ನೊಂದು ಮಜಲಿಗೆ ಕರೆದೊಯ್ಯುವ ಸಾಧನ ಪಥವಾಗಿದೆ. ಕುವೆಂಪು ದರ್ಶನ ಅಂಥ ಸಮಗ್ರ ಸಾಧನ ಪಥವೇ ಆಗಿದೆ. ಅವರ ದೃಷ್ಟಿಕೋನದ ಪರಿಚಯಕ್ಕಾಗಿ ಅವರದೇ ಮಾತುಗಳನ್ನು ಇಲ್ಲಿ ಗಮನಿಸಬಹುದು.

ರಸಾನುಭವ ಅಲೌಕಿಕ ಎಂದರೆ ಲೋಕದ ಸಂಬಂಧವನ್ನೆಲ್ಲ ಕಡಿದು ಕೊಂಡುಬಿಟ್ಟದ್ದು ಎಂದಲ್ಲ. ಲೋಕೋತ್ತರವಾದದ್ದು ಎಂದಷ್ಟೇ ಅರ್ಥ. ಸಂಪೂರ್ಣವಾಗಿ ಲೋಕದಿಂದ ಬೇರೆಯಾಗಿದ್ದಿರಲು ಸಾಧ್ಯವೇ ಇಲ್ಲ. ಕವಿ ಮನುಷ್ಯನಾಗಿ ಲೋಕದ ಮತ್ತು ಸಮಾಜದ ಒಂದು ಅಂಶವಾಗಿದ್ದಾನೆ; ಅವನ ಕೃತಿಯು, ಅದೆಷ್ಟೇ ನಿಯತಿಕೃತ ನಿಯಮ ರಹಿತದಂತೆ ತೋರಲಿ, ಲೋಕದ ಒಂದಂಶವೇ. ಈ ಮಾತು ಸಹೃದಯನಿಗೂ ಸಂಪೂರ್ಣವಾಗಿ ಅನ್ವಯವಾಗುತ್ತದೆ. ಮಾನವ ವ್ಯಾಪಾರಗಳೆಲ್ಲ, ಕಲೆಯದ್ದಾಗಲಿ ಕಾವ್ಯದ್ದಾಗಲಿ ಲೋಕದ್ದಾಗಲಿ, ಪರಸ್ಪೋರಪಜೀವಿಗಳೇ; ಒಂದರ ಪ್ರಭಾವ ಮತ್ತೊಂದರ ಮೇಲೆ ಬಿದ್ದೇ ತೀರುತ್ತದೆ; ಒಂದರ ಪರಿಣಾಮ ಮತ್ತೊಂದರ ಪರಿಣಾಮವನ್ನು ನಿರ್ಣಯಿಸುತ್ತದೆ. ನಮ್ಮ ಆಲೋಚನೆಯ ಸೌಕರ್ಯಕ್ಕಾಗಿ ಮಾಡಿಕೊಳ್ಳುವ ವಿಭಜನೆಯನ್ನು ವಸ್ತುವಿಗೂ ವರ್ಗಾಯಿಸಿದರೆ ಅಸತ್ಯವಾಗುವುದರ ಜೊತೆಗೆ ಅನಾಹುತವೂ ಆಗುತ್ತದೆ.

ಕುವೆಂಪು ('ರಸಾನುಭವದ ಅಲೌಕಿಕತೆ'; ರಸೋ ವೈ ಸಃ)

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೩೪೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨. ಅದೇ, ಪುಟ ೧೯೪

೩. ಅದೇ, ಪುಟ ೨೫೯

೪. ಅದೇ, ಪುಟ ೫೪೯

೫. ಕುವೆಂಪು ; ಸ್ವಾಮಿ ವಿವೇಕಾನಂದ ; ಪುಟ ೬–೭, ೭ನೇ ಮುದ್ರಣ ೨೦೦೫, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು.

೬. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೨೬೦–೨೬೧, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೭೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೮. ಅದೇ, ಪುಟ ೯೭೧.

೯. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೫೪೮, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೦. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೫೮೩, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೫೪೮–೫೪೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೨. ಅದೇ, ಪುಟ ೫೪೮–೫೪೯

೧೩. ಅದೇ, ಪುಟ ೫೪೮–೫೪೯

೧೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೫೨೬, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೫. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೭೩, ಕನ್ನಡ ವಿ.ವಿ.,ಪ್ರಸಾರಾಂಗ, ಹಂಪಿ.

* **ಇಕ್ಸಿಯಾನ್ ಡೆನ್ (Ixion)**

ಇಕ್ಸಿಯಾನ್ ಗ್ರೀಕ್ ಪುರಾಣದ ಪ್ರಕಾರ ಥೆಸ್ಸಾಲಿ ಪ್ರದೇಶ ರಾಜನು, ಅವನು ಒಲಂಪಿಯಾ ದೇವತೆಗಳ ರಾಜನಾದ ಜ್ಯೂಸ್ನ ಪತ್ನಿ ಹೇರಾಳನ್ನು ಮೋಹಿಸಿದ ಕಾರಣಕ್ಕೆ ಜ್ಯೂಸ್‌ಂದ ಶಿಕ್ಷಿಸಲ್ಪಟ್ಟನು, ಅವನನ್ನು ಒಂದು ಚಕ್ರಕ್ಕೆ ಬಂಧಿಸಲಾಗುತ್ತದೆ. ಆ ಚಕ್ರ ನಿರಂತರವಾಗಿ ತಿರುಗುತ್ತಲೇ ಇರುತ್ತದೆ.

೧೬. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೧೩೦ ಮತ್ತು ೨೦೬, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೭. ಅದೇ, ಪುಟ ೫೩೬.

೧೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೭೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೯. ಅದೇ, ಪುಟ ೯೭೧.

೨೦. ಅದೇ, ಪುಟ ೯೭೨.

೨೧. ಸ್ವಾಮಿ ವಿವೇಕಾನಂದ ; ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ ಸಂ–೨, ಪು ೪೭೯, ೪ನೇ ಮುದ್ರಣ ೨೦೦೬, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು.

೨೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ៦೧೪, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೩. ಅದೇ, ಪುಟ ೪೧.

೨೪. ಅದೇ, ಪುಟ ೭೪೯.

* * * * *

# ಅಧ್ಯಾಯ – ೫

## ಕುವೆಂಪು ಕವಿತೆಗಳಲ್ಲಿ ಸಮಷ್ಟಿಯ ಪರಿಕಲ್ಪನೆ

೫.೧ ಸಾಮಾಜಿಕ ಚಿಂತನೆ

೫.೨ ರಾಷ್ಟ್ರೀಯತೆಯ ವಿಚಾರಗಳು

೫.೩ ಸ್ಥಳೀಯತೆಯ ವಿಚಾರಗಳು

# ಕುವೆಂಪು ಕವಿತೆಗಳಲ್ಲಿ ಸಮಷ್ಟಿಯ ಪರಿಕಲ್ಪನೆ

ಕುವೆಂಪು ಅವರ ದೃಷ್ಟಿಯಲ್ಲಿ ಸಮಾಜವೆಂದರೇನು? ಮನುಷ್ಯರ ಸಮುದಾಯವಷ್ಟೆ, ಮನುಷ್ಯ ಮನುಷ್ಯನಂತಾದಾಗಲೇ ಸಮಾಜ ಸುಧಾರಣೆಯಾಗುತ್ತದೆ ಎಂಬ ನಿಲುವನ್ನು ತಳೆದವರು. ಸ್ವಾತಂತ್ರ ನಂತರ ಭಾರತದ ಬಿಕ್ಕಟ್ಟುಗಳನ್ನು ಯಾವುದೇ ಮುಚ್ಚುಮರೆಯಿಲ್ಲದೆ ಮಾತನಾಡಿದ ಕುವೆಂಪು ಸ್ವಾತಂತ್ರ್ಯ ಚಳುವಳಿಗಾಗಿಯಷ್ಟೇ ಹೋರಾಡಲಿಲ್ಲ ಎಂಬುದನ್ನು ಗಮನಿಸಬಹುದು. ರಾಷ್ಟ್ರ ಪ್ರೇಮ ಕವನಗಳನ್ನು ಎಲ್ಲ ಕಾಲಕ್ಕೂ ಸಲ್ಲುವಂತೆ ರಚಿಸಿರುವಂತೆಯೇ, ಭಾರತದ ಸ್ಥಿತಿಗತಿಯನ್ನು ಕುರಿತು ಅವರಾಡಿರುವ ಮಾತುಗಳು ಇಂದಿಗೂ ಪ್ರಸ್ತುತವಾಗಿದೆ. ಇದು ಕುವೆಂಪು ಅವರ ರಾಷ್ಟ್ರ ಪ್ರಜ್ಞೆಯನ್ನು ತಿಳಿಸುತ್ತದೆ. ಇಲ್ಲಿ ಕವಿಯ ಧ್ಯಾನಸ್ಥ ಮನಸ್ಸು, ಸೌಂದರ್ಯ ಸೂಚಕ ವಸ್ತು, ಚಿತ್ರಗಳನ್ನು ರಸಯೋಗಿ, ಗುರುವಿಗೆ ಸೂಚಿಸುತ್ತದೆ. ಅದೇ ರೀತಿ ಅವರು ಬಾಲ್ಯದ ದಿನಗಳಲ್ಲಿ ಆಡಿ ಬೆಳೆದ ಹಳ್ಳ, ತೊರೆ, ನದಿಗಳ ಹಾಗೂ ತಮ್ಮ ಮಿತ್ರರೊಂದಿಗೆ ಆಟವಾಡಿದ ಸಾನಿಧ್ಯವನ್ನು ಅನಿಭವಿಸಿದ ರೋಮಾಂಚನವನ್ನು ಅವರ ಕವನಗಳಲ್ಲಿ ಕಾಣುತ್ತೇವೆ.

## ೫.೧. ಸಾಮಾಜಿಕ ಚಿಂತನೆ

ಕವಿ ಪರಿಸರದ ಶಿಶು. ನಿಸರ್ಗ ಮತ್ತು ಸಮಾಜಗಳು ಅವನನ್ನು ತೀಡಿ ತಿದ್ದುತ್ತವೆ, ರೂಪಿಸುತ್ತವೆ. ಅವನು ಸಮಾಜದ ಒಂದು ಭಾಗವಾಗಿ, ಅದರ ನಡುವೆಯೇ ಬಾಳಬೇಕಾಗಿರುವುದರಿಂದ ಅವನು ಸಾಕ್ಷೀಪ್ರಜ್ಞೆಯಿಂದ ಅದರ ಹೊರಗೊಳಗುಗಳನ್ನು ಪರಿಕಿಸಬಲ್ಲನು. ಸಮಾಜದ ಆಗುಹೋಗುಗಳ ಬಗ್ಗೆ ಕಳಕಳಿ, ಕಳವಳ ಕಾತರತೆಯಿದ್ದಷ್ಟೂ ಅದರ ಬಗೆಗಿನ ಅವನ ಪ್ರಜ್ಞೆ ಸಾಂದ್ರವಾಗುತ್ತದೆ. ಅದು ಅಷ್ಟೇ ಸಾಂದ್ರವಾಗಿ ಸಾಹಿತ್ಯದ ಮೂಲಕ ಕಾವ್ಯವಾಗಿ ಅಭಿವ್ಯಕ್ತಿಯನ್ನು ಪಡೆಯುತ್ತದೆ.

ಕುವೆಂಪು ಅವರು ತಮ್ಮ ಕಾವ್ಯ, ಕಥೆ, ಕಾದಂಬರಿ, ನಾಟಕ, ಪ್ರಬಂಧ ಸಾಹಿತ್ಯ ಮುಂತಾದ ತಮ್ಮ ಸಮಸ್ತ ಸಾಹಿತ್ಯದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ನೆಲೆಯ ಅಸಮಾನತೆ ಮತ್ತು ಶೋಷಣೆಯನ್ನು ಗುರುತಿಸಿದ್ದಾರೆ. ಕನ್ನಡಿಗರ ಪ್ರಜ್ಞಾವಲಯಕ್ಕೆ ವಿಚಾರಕ್ರಾಂತಿಯ ಕರೆ ನೀಡಿದ ಕುವೆಂಪು ಹುಸಿಸಂಸ್ಕೃತಿಯ ಅಪಾಯದ ಬಗ್ಗೆ ಬರೆಯುತ್ತ ಶ್ರಮಸಂಸ್ಕೃತಿಯ ಸತ್ವ ಮತ್ತು ಮಹತ್ವವನ್ನು ಬೆಳಕಿಗೆ ಹಿಡಿದು ಕನ್ನಡಿಗರಲ್ಲಿ ಸಾಮಾಜಿಕ, ಸಾಂಸ್ಕೃತಿಕ ಜಾಗೃತಿ ಮೂಡಿಸಲು ವಿಚಾರವನ್ನು ಧಾರೆಯೆರೆದಿದ್ದಾರೆ.

ಮೇಲ್ವರ್ಗದ ಶ್ರೀಮಂತರ ಪರವಹಿಸಿದ್ದ ಆಗಿನ ಬ್ರಿಟಿಷ್ ಸರ್ಕಾರದ ಸ್ವಾರ್ಥನಡೆ, ತಳವರ್ಗದವರಿಗೆ ಸ್ವಂತ ಬದುಕು ಇರಬಹುದೆಂಬ ಕಿಂಚಿತ್ ಅರಿವಿಲ್ಲದ ಜಮೀನ್ದಾರರ ವರ್ತನೆಗಳನ್ನು ಕುವೆಂಪು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕುವೆಂಪು ಅವರ ಸಾಮಾಜಿಕ ಪ್ರಜ್ಞೆ ಎಲ್ಲ ವರ್ಗಗಳನ್ನು ಕುರಿತದ್ದು. ಜಮೀನ್ದಾರ ರೈತ ಮನೆತನದ ಕುವೆಂಪು ರೈತನ ಕಷ್ಟ ಸುಖಗಳು, ದುಡಿಮೆಯ ನಿಷ್ಠೆ, ಶ್ರಮಗಳನ್ನು ಹತ್ತಿರ ನೋಡಿಬಲ್ಲವರು. ಅದು ಅವರ ಮೊದಲ ಕವನವಾದ 'ಅಮಲನ ಕಥೆ'ಯಲ್ಲೇ ವ್ಯಕ್ತವಾಗುತ್ತದೆ. ಸೃಷ್ಟಿ ಸೌಂದರ್ಯಕ್ಕೆ ಮೋಹಿತನಾಗುವ ಕವಿ ಅದರ ರಹಸ್ಯ ಸಂದೇಶಗಳನ್ನು ವಿಶ್ವಕ್ಕೆ ತಿಳಿಸುವಂತೆ, ಲೌಕಿಕ ವ್ಯಾಪಾರದ ಕಡೆಗೂ ಗಮನಕೊಡಬೇಕಾದ ಜವಾಬ್ದಾರಿಯ ಬಗ್ಗೆ ಮಾತನಾಡಿದ್ದಾರೆ. ಅವರ ಪ್ರಕಾರ ಕವಿ ರಸಿಕನಂತೆ, ಕಲಿಯೂ ಆಗಿರಬೇಕು. ಷೆಲ್ಲಿಯ "Poets are the unacknowledged legislators of the world" ಎಂಬ ಮಾತನ್ನು ಸಮರ್ಥಿಸುತ್ತ, ಕವಿಯ ಕೆಲಸ ಮಹತ್ತಾದುದಕ್ಕಿಂತ ಕಡಿಮೆಯದೇನಲ್ಲ ಎಂದಿದ್ದಾರೆ.

ಕುವೆಂಪು ಅವರು ೨೪.೩.೧೯೨೫ರಲ್ಲಿ ಬೀದಿ ಬದಿಯಲ್ಲಿ ಕಡಲೆಕಾಯಿ ಮಾರುವ ಮುದಿ ತಾಯಿಯೊಬ್ಬಳನ್ನು ಕುರಿತು ಬರೆದ ಕವನ The Ground-nut Seller. ಈ ಕವನವು ಒಂದು ಕರುಣರಸ ಭರಿತ ಕವನ. ಆ ಮುದಿ ತಾಯಿಯನ್ನು ಕಾಣುವ, ಕಂಡರಿಸುವ ಬಗೆಯೇ ಅವರ ಬಾಲ್ಯದಲ್ಲೇ ಅವರು ಹೊಂದಿದ್ದ ಮನೋಭಾವಕ್ಕೆ ಸಾಕ್ಷಿ. ಆ ಮುದಿ ತಾಯಿಯ ವರ್ಣನೆ ಯಾವ ಪ್ರಜ್ಞಾವಂತನನ್ನೂ ಕ್ಷಣ ತಲ್ಲಣಗೊಳಿಸುವ ಶಕ್ತಿಯುಳ್ಳದ್ದು. ಜೊತೆಗೆ ಹಳ್ಳಿಗಾಡಿನ ತನ್ನ ಮನಸ್ಸು ಶಹರವಾಸಿಗಳನ್ನು ಕಠೋರಗೊಳಿಸಿದ ಅಲ್ಲಿಯ ಜಗತ್ತು ಇವೆಲ್ಲವನ್ನೂ ಹೇಳುತ್ತದೆ. ಅವಳು ಮುದಿಯಲ್ಲ, ಮುದಿತನಕ್ಕೆ ದೂಡಲ್ಪಟ್ಟವಳು.

ಕುವೆಂಪು ಅವರು ತಾವು ಶಾಲೆಗೆ ಓಡಾಡುತ್ತಾ ಇದ್ದ ಹಾದಿಯ ಬದಿಯಲ್ಲಿ ಒಬ್ಬ ಮುದಿತಾಯಿಯು ಬಿಸಿಲಿನಲ್ಲಿ, ಹಾಸಿಕೊಂಡ ಹರಕು ಗೋಣಿಯ ಮೇಲೆ ಹುರಿದ ನೆಲಗಡಲೆಕಾಯಿಯನ್ನು ಗುಪ್ಪೆ ಹಾಕಿಕೊಂಡು, ತಾನೂ ಬೇಯುತ್ತಾ, ಪಕ್ಕದಲ್ಲಿ ಆಡುವ ತನ್ನೊಂದು ಕೃಶ ಶರೀರದ ಮಗುವಿಗೂ ತನ್ನ ನೆರಳಿನ ಆಶ್ರಯವೀಯುತ್ತಿರುವ ಚಿತ್ರ ಅತ್ಯಂತ ಕರುಣಾಜನಕವಾದಂತದ್ದು. ಕುವೆಂಪು ಅವರ ಸಾಮಾಜಿಕ ಪ್ರಜ್ಞೆ ಚೇತನಗೊಂಡಿರುವುದು ಹಲವರ ಜೀವನದ ಅರಿವಿನ ಆಧಾರದ ಮೇಲೆಯೇ. ಈ ಚಿತ್ರವನ್ನೊಂದಿಷ್ಟು ಗಮನಿಸಿ ನೋಡುವ.

> "Pale and patient, wearied and spent
> The old mother sits in the sun ;
> The men of the city with little pity
> Pass by her one by one."[1]

ಅವಳಿಲ್ಲಿ ಏಕಾಂಗಿಯಲ್ಲ. ಅವಳ ಮಗುವೂ ಇದೆ. ಅದು ಬುದ್ಧಿ ಬೆಳೆದ ಮಗುವಲ್ಲ. ತಾಯ ಕಷ್ಟವನರಿಯದೆ ಆಡುವ ಕಂದ ಅದು.

"And beside her on the rags her child
Blind to its mother's labour plays mild."[2]

ಆಕೆ ಕರುಣೆಯ ಮಾತೆ. ಅವಳಿಗೆ ಮಕ್ಕಳು ಬೇಕು. ಅವುಗಳ ನಲಿವು ಕಲಿಕೆ ಎಲ್ಲ ಬೇಕು. ಆದ್ದರಿಂದಲೇ

"When I walk the street she fails not to greet
Her dear son with a sweet smile ;"[3]

ಈ ಏನೂ ಮಾಡಲಾಗದ ಬಾಲಕ ಅಸಹಾಯಕತೆಯಲ್ಲಿ ಅವಳನ್ನು ನೆನೆದುಕೊಳ್ಳುತ್ತಾನೆ. ಏಕೆಂದರೆ ಅವಳದು ಆಳದೊಲವಿಂದ ಮಿನುಗುವ ಕಣ್ಣವಳು ಅವಳು. ಅವಳೆನ್ನ ಕನಸ ದೇವತೆ ಎಂದು ಆಕೆಯನ್ನು ಕುವೆಂಪು ದೈವತ್ವಕ್ಕೇರಿಸುತ್ತಾರೆ. ದೀನನಲ್ಲಿ ದೇವರನ್ನು ಕಾಣುವ ಈ ಬಗೆ ಅನನ್ಯವಾಗಿದೆ.

"For her I've shed dear tears on my bed
And walked daily a sun-burnt mile.
From the depths of love her dark eyes gleam,
And she is the angel of my dream!"[4]

ಕುವೆಂಪು ಅವರು ಬೇಸಿಗೆ ರಜೆಯಲ್ಲಿ ತಮ್ಮ ಊರಿಗೆ ಹೋಗಿ ಪ್ರಕೃತಿಯನ್ನು ಆಸ್ವಾದಿಸಿಕೊಂಡು ತಮ್ಮ ಸ್ನೇಹಿತರೊಡನೆ ನಲಿಯುತ್ತಾ ಕಾಲ ಕಳೆಯುತ್ತಾರೆ. ರಜೆ ಮುಗಿದು ಕಾಲೇಜಿಗೆ ವಾಪಸ್ಸಾಗಬೇಕೆಂದಾಗ ಅವರ ಮನಸ್ಸಿನಲ್ಲಾದ ಬೇಸರವನ್ನು ಅವರು ಒಂದು ಬಗೆಯ ಹಾಸ್ಯ-ವಿನೋದದ ಧಾಟಿಯಲ್ಲಿ Happy-Go-Lucky ಕವಿತೆಯಲ್ಲಿ ವಿವರಿಸುತ್ತಾರೆ. ಈ ಕವಿತೆ ಅದೆಷ್ಟು ಲವಲವಿಕೆಯ ಸರಳ ರೇಖಾತ್ಮಕ ಕವಿತೆ ಎಂದರೆ ಇದಕ್ಕೆ ಪ್ರತ್ಯೇಕ ವಿವರಣೆ ಬೇಕೆನಿಸುವುದಿಲ್ಲ.

"Hang the teachers, damn the schools
And burn the sense-less books!
Scientists? A set of crazy fools
With dark and hungry looks!

Away with Muse and her mad sons
Who eat and roam and dream :
Poetry! A collection of their funs ;
Deception is their theme!
A set of lunatics are they

Who hypnotize for money ;
Joy, beauty, love, virtue and play
Are mere names for Villainy !"[5]

ಮೇಲಿನ ಕವನವನ್ನು ಇನ್ನೊಂದು ಮಗ್ಗುಲಿನಿಂದಲೂ ಪರಿಶೀಲಿಸಬಹುದು. ವಿದ್ಯಾಭ್ಯಾಸದ ಕ್ರಮವೇ ಅಸಂಗತ ಎಂದು ಅವರಿಗೆ ತೋರಿದೆ. ವಿಜ್ಞಾನ, ಕಾವ್ಯ ಎಲ್ಲವೂ ಅಸಂಗತವೇ. ಹಣಕ್ಕಾಗಿ ದುಡಿವ ಉಪಾಧ್ಯಾಯರು ಹಣಕ್ಕಾಗಿ ವಶೀಕರಣ ಮಾಡುವವರು ಎನ್ನುತ್ತಾರೆ. ಯಾವ ಮುಸುಕನ್ನು ವಿದ್ಯಾಭ್ಯಾಸ ತೆಗೆಯಬೇಕೋ ಅದೇ ಮುಸುಕುಗಳನ್ನು ಹಚ್ಚುತ್ತಿವೆ ಒಂದರಮೇಲೊಂದರಂತೆ. ಅದೇ ಕುವೆಂಪು ಅವರು ತಮ್ಮ ಕಾಲೇಜಿನ ಪಾಠ ಪ್ರವಚನಗಳನ್ನು ಮತ್ತು ತಮ್ಮ ಅಧ್ಯಾಪಕರನ್ನು ಕುರಿತು ಸದ್ಭಾವನೆಯಿಂದ ಅವರನ್ನು ಪ್ರಶಂಸೆ ಮತ್ತು ಗೌರವಗಳನ್ನೂ ವ್ಯಕ್ತಪಡಿಸುವ ಒಂದು ಕವನವಿದೆ. Lines written In the Deserted Lecture Hall ಎಂಬ ಈ ಕವಿತೆ ೧೪.೧.೧೯೨೩ರಲ್ಲಿ ರಚಿತವಾಗಿದೆ.

"Oft when I tread alone
This deserted Lecture Hall
I hear from ages gone
Some beings' distant call!
I feel I enter some land
Mysterious and serene;
And ah some ethereal hand
Holds me from behind unseen!"[6]

ಇಂಥದೇ ಭಾವವನ್ನು ಪ್ರಕಟಿಸುವ ಸಾಲುಗಳು ಕುವೆಂಪು ಅವರು ೯.೧೨.೧೯೨೩ರಲ್ಲಿ ಬರೆದ To-The University of Mysore ಎಂಬ ಒಂದು ಸಾನೆಟ್ಟಿನಲ್ಲಿವೆ

"Thy priests are lovely beings ; them the poet
Doth love and eulogize. The Judgment Day."[7]

ಮುಂದೆ ಕುವೆಂಪು ಅವರು ಮೈಸೂರು ವಿಶ್ವವಿದ್ಯಾಲಯದ ಎಂಟ್ರೆನ್ಸ್ ಪರೀಕ್ಷೆಯನ್ನು ಆಗ ತಾನೆ ಮುಗಿಸಿಕೊಂಡು ಕಾಲೇಜು ಸೇರಿದ ಪ್ರಾರಂಭದಲ್ಲಿ, ಕಾಲೇಜಿನ ಯೂನಿಯನ್ನಿನಲ್ಲಿ ಪ್ರೊಫೆಸರ್ ವಿ.ಎಲ್.ಡಿಸೋಜರವರ ಚೊಚ್ಚಲು ಭಾಷಣ ಏರ್ಪಡಿಸಲಾಗಿತ್ತು. ಆಗ ಕುವೆಂಪು ಅವರು ಭಾಷಣದ ನಂತರ ಡಿಸೋಜ ಅವರಿಗೆ ಒಂದು ಪ್ರಶ್ನೆಯನ್ನು ಕೇಳುತ್ತಾರೆ: 'ಬ್ರಿಟಿಷ್ ಸಾರ್ವಜನಿಕರ ಮನಸ್ಸಿನಲ್ಲಿ ಮೈಸೂರಿಗಿರುವ ಸ್ಥಾನವೇನು?'[೮] ಎಂದು ಆ ಪ್ರಶ್ನೆಗೆ ಡಿಸೋಜ ಅವರು 'ಶೂನ್ಯ' ಎಂದು ಉತ್ತರಿಸುತ್ತಾರೆ. ಅದನ್ನು ಅವರು ನೆನಪಿನ ದೋಣಿಯಲ್ಲಿ ಹೇಳಿಕೊಂಡಿದ್ದಾರೆ. ಆ ಉತ್ತರವನ್ನು ಕೇಳಿ ಕುವೆಂಪು ಅವರಿಗೆ ಅವಮಾನದ ಪರಮಾವಧಿಯಂತೆ

ಭಾಸವಾಯಿತು. ಅದರ ವಿರುದ್ಧ ಅವರೊಂದು ಲೇಖನ ಬರೆಯುತ್ತಾರೆ. ಅದರ ಕಾವು ಮೈಸೂರರಸರವರೆಗೂ ಹೋಗಿತ್ತು. ಕನ್ನಡವೆಂದರೆ ಕುವೆಂಪು ಅವರಿಗೆ ಅಂತಹ ಹೆಮ್ಮೆಯಿತ್ತು. ಅವರ ಸವಿಸ್ತಾರ ಓದು ಆ ಪ್ರಜ್ಞೆಯನ್ನು ಅವರಲ್ಲಿ ಮೂಡಿಸಿತ್ತು.

ಸ್ವದೇಶಿ ಪ್ರೇಮಿಯಾದ ಕುವೆಂಪು ಅವರಿಗೆ ಆ ಉತ್ತರ ಅವರ ಮನಸ್ಸಿನಲ್ಲಿ ಒಂದು ವಿಶಿಷ್ಟವಾದ ಸಂಚಲನ ಭುಗಿಲೆದ್ದಿತು. ಆಗ ಅವರು ನಾವು ಏನನ್ನೇ ಸಾಧಿಸಿದರೂ ಅದನ್ನು ಜಗತ್ತೇ ಕೊಂಡಾಡುವಂತಾಗಬೇಕು. ನಾವು ಕಷ್ಟಪಟ್ಟು ದುಡಿದ್ದದ್ದು, ಸಾಧಿಸಿದ್ದು ನಮ್ಮಲ್ಲಿಯೇ ಕೊನೆಯಾಗದೇ ಪ್ರಪಂಚದ ಕೇಂದ್ರ ಬಿಂದುವಾಗಬೇಕು ಎಂಬ ಮನಸ್ಥಿಗೆ ಬರುತ್ತಾರೆ.

ಕುವೆಂಪು ೧೭.೭.೧೯೨೪ರಲ್ಲಿ Maharaja's College ಎಂಬ ಕವನವನ್ನು ರಚಿಸಿದ್ದಾರೆ. ಈ ಕವಿತೆ ತಾವು ಕಲಿತ ಮಹಾರಾಜಾ ಕಾಲೇಜಿನ ಬಗ್ಗೆ ಅವರಿಗಿದ್ದ ಗೌರವವನ್ನು ತೋರಿಸುತ್ತದೆ.

"Calm and majestic rise
These pensive towers aloft
On this speckled dreamy plain
Grave and serene! The breath
That whistles thro' these halls
Seems tremendously wise
And saturated with lore ;
Here is wisdom's dignity
And heaven's serenity."[9]

ಇನ್ನೊಂದು ಕವಿತೆಯನ್ನೂ ಇಲ್ಲಿ ಪರಿಶೀಲಿಸಬಹುದು: ಇದು ಕಾಲೇಜಿನ ಜೊತೆಗೆ ತಮ್ಮ ಉಪಾಧ್ಯಾಯರನ್ನು ಸಹ ಕುರಿತದ್ದಾಗಿದೆ.

"The sweet muse of Laksmeesha
And Pampa's lovely poems
Oft have echoed from these hearts!
Many many my pen fails
To name them all. Poesy
And Science and Philosophy ,
Virtue and Love and Beauty,
The sacred sense of Duty
All sprout from these great halls.

Heaven's sweetest grace on thee,
O Fane of Liberty!

Break! Break! sweet shell of the ocean
Of knowledge and emotion!
Let thy hearts dazzle the earth
With their orient beams!
Break! Break!, thou frolic-some Spring
With songs and acclamations
And waving decorations;"[10]

ಈ ಸಾಲುಗಳಲ್ಲಿ ಆಂಗ್ಲ ಕವಿಗಳಾದಂತಹ, ಪರಮ ಆಪ್ತನೂ ಆದ ಷೆಲ್ಲಿ, ಕವಿಋಷಿಯಾದ ವರ್ಡ್ಸ್‌ವರ್ತ್, ಮಾಂತ್ರಿಕನಾದಂತಹ ಶೇಕ್ಸ್‌ಪಿಯರ್ ಈ ಕವಿಗಳ ಅಮೃತಶಿಲೆಯ ಎದೆಯಿಂದ ಸುರಿದ ಕಾವ್ಯಾಮೃತವು ಹೃದಯಕ್ಕೆ ಹತ್ತಿರ ಮತ್ತು ಬಲು ಪ್ರಿಯವಾಗಿರುವ ಕಾಲದಲ್ಲಿ, ಕುವೆಂಪುರವರಿಗೆ ಕನ್ನಡದಲ್ಲಿ, ಇಂಗ್ಲಿಷಿನಲ್ಲಿ ಸಾಧ್ಯವಾಗುವಂತೆ, ಉದಾತ್ತ ಭಾವಗಳನ್ನು ಉನ್ನತ ಆಲೋಚನೆಗಳನ್ನು ಹೇಳಲು ಸಾಧ್ಯವಾಗುವುದಿಲ್ಲ. ಆ ಭಾಷೆಯ ಮಟ್ಟ ಬಹಳ ಕೀಳು. ಅಲ್ಲದೆ ಅದರಲ್ಲಿರುವ ಛಂದಸ್ಸೂ ಹಳೆಯ ಕಂದಾಚಾರದ ಛಂದಸ್ಸು, ವೃತ್ತ, ಕಂದ ಇತ್ಯಾದಿ. ಇಂಗ್ಲಿಷಿನಲ್ಲಿರುವ ಛಂದೋ ವೈವಿಧ್ಯ ಇಲ್ಲವೆ ಇಲ್ಲ ಎಂದು ಪರಿಗಣಿಸಿದ ಸಂದರ್ಭದಲ್ಲಿ, ಪ್ರಸ್ತುತ ಕವನದಲ್ಲಿ ಕುವೆಂಪು ಅವರು ಕನ್ನಡ ಕವಿಗಳಾದ ಪಂಪ, ಲಕ್ಷ್ಮೀಶ ಕವಿಗಳ ಉಪಮೆಗಳ ವಿಸ್ತಾರ, ವೈವಿಧ್ಯ ಹಾಗೂ ಸೌಂದರ್ಯಗಳನ್ನು ಆಸ್ವಾದಿಸಿ ಅವರ ಕುರಿತು ಮೇಲಿನ ಕೆಲವು ಸಾಲುಗಳಲ್ಲಿ ಉಲ್ಲೇಖಿಸಿದ್ದಾರೆ. ಇಲ್ಲಿಯೂ ಸಹ ಇಂಗ್ಲಿಷ್ ಕವಿಗಳೇ ಮೇರುಸ್ಥಾನದಲ್ಲಿದ್ದಾರೆಯಾದರೂ ಕನ್ನಡದ ಕವಿಗಳನ್ನು ಕುವೆಂಪು ಗೌರವಿಸಿ ಅಪ್ಪಿಕೊಳ್ಳುವದನ್ನು ಮರೆತಿಲ್ಲ, ಇದೆಲ್ಲಾ ಕುವೆಂಪು ಅವರಿಗೆ ತಮ್ಮ ವಿಜ್ಞಾನದ ಕೊರಡಿಯಲ್ಲಿ ಚಿಗುರಿದ ಸಾಲುಗಳು.

ಕುವೆಂಪು ಅವರು ಈ ಕೆಳಗಿನ ಕವನವನ್ನು Lines ಎಂಬ ಶೀರ್ಷಿಕೆಯಲ್ಲಿ ೧೪.೧.೧೯೨೫ರಲ್ಲಿ ರಚಿಸಿದ್ದಾರೆ. ಈ ಕವನವನ್ನು ಅವರು ಒಂಟಿತನ ಅನುಭವಿಸುತ್ತಾ, ಒಂದು ಖಾಲಿ ಪ್ರವಚನ ಕೋಣೆಯಲ್ಲಿ ಕುಳಿತು ಬರೆದಿರುವರು. ಕುವೆಂಪು ಮೈಸೂರಿಗೆ ಅಧ್ಯಯನಕ್ಕಾಗಿ ಬಂದಾಗ ಒಂದು ರೀತಿಯ 'ಒಂಟಿತನ' ಅವರನ್ನು ಗಾಢವಾಗಿ ಕಾಡಿತ್ತು; ಅವರ 'ನೆನಪಿನ ದೋಣಿಯಲ್ಲಿ' ಕೃತಿಯಲ್ಲಿ ಈ ಒಂಟಿತನದ ಪ್ರಸ್ತಾಪ ಅನೇಕ ಕಡೆ ಕಾಣಿಸುತ್ತದೆ. ಜೊತೆಗೆ ಭಿನ್ನ ಪರಿಸರಕ್ಕೆ ಸುಲಭವಾಗಿ ಹೊಂದಿಕೊಳ್ಳಲಾಗದ ಅಸಹಾಯಕತೆಯನ್ನೂ ಆ ಸಂದರ್ಭ ಸೃಷ್ಟಿಸಿತ್ತು. ಆದ್ದರಿಂದಲೇ ಕವಿ ಯಾವುದಕ್ಕೋ ಹಂಬಲಿಸುತ್ತಾನೆ. ಈ ಹಂಬಲ ಚಿತ್ರವಾಗುವ ಬಗೆಯನ್ನಿಲ್ಲಿ ಗಮನಿಸಬಹುದು.

"Oft when I tread alone

This deserted Lecture Hall

I hear from ages gone

Some beings' distant call!

I feel I enter some land"[11]

Mysterious and serene;- ನಿಗೂಢತೆಯು, ಅಲ್ಲಿನ ಶಾಂತಿಯೂ ಶಾಂತಿಯನ್ನು ಕೊಡುವಂಥದ್ದಲ್ಲ, ಒಬ್ಬಗೆಯ ಭಯಕ್ಕೆ ಕಾರಣವಾಗುವಂಥದು. ಮತ್ತೆ ಸಮಾಧಾನದ ಸ್ಥಿತಿಯನ್ನು ಏರ್ಪಡಿಸಿಕೊಳ್ಳುತ್ತಾರೆ: And ah some ethereal hand, Holds me from behind unseen![12] – ಈ ಕೈ ಕಾವ್ಯದ ಕೈ ಇರಬಹುದೇ? ಅಹುದೆನ್ನಬಹುದಾದ ವಿಚಾರಕ್ಕೆ ಇಲ್ಲಿ ಸಾಕ್ಷಿಯು ಒದಗಿ ಬರುತ್ತದೆ. ಕವಿತೆಯ ಮುಂದಿನ ಭಾಗ ನೋಡೋಣ:

Leave me, dear Friends, let me be alone[13] ಎಂದು ಕುವೆಂಪು ಅವರು ೧೦.೪.೧೯೨೪ರಲ್ಲಿ ರಚಿಸಿರುವ Hours of Inspiration ಎಂಬ ಕವಿತೆಯಲ್ಲಿ ಮೊರೆಯಿಡುವುದರಲ್ಲಿ ಒಂದು ಆಟಪಾಠಗಳಾಚೆಯ ಭಿನ್ನಹವಿದೆ. ಅದೇಕೆಂದರೆ ಅವರನ್ನು ಸಂತಸದ ಯಾವುದೋ ಒಂದು/ಕಾವ್ಯದ ಮಧುರ ಲೋಕದಿಂದೆನ್ನ ಕರೆಯುತಿಹುದು. ಅದು ಅವರಿಗೆ ಮಹತ್ವದ್ದಾಗಿದೆ. ಅದನ್ನವರು ತಮ್ಮ ಆಂತರ್ಯದ ಧ್ವನಿಯನ್ನಾಗಿ ಮಾಡಿಕೊಳ್ಳಬೇಕಾಗಿದೆ ಮತ್ತು ಅವರು ಅದರ ಮಾಯೆಯ ಮುಸುಕನ್ನು ಹರಿಯಲಾಗದ ಸ್ಥಿತಿಯಲ್ಲಿಗೆ ತಲುಪಿದ್ದಾರೆ.

"Some fountain of joy to me unknown

Has begun to flow thro' those strange lands;

It carries me; I am in its hands!

Inevitable I must go

To what-ever regions it shall flow!

Leave me, dear Friends, let me be alone."[14]

ಕವಿ ಕುವೆಂಪು ಅವರು ಇಂಥದ್ದೇ ಮನಸ್ಥಿತಿಯಲ್ಲಿ ಬರೆದಂತಹ ಮತ್ತೊಂದು ಕವನ **ಹೋಗುವೆನು**. ಇದರ ಮೊದಲ ಭಾಗ ಮಲೆಯ ನಾಡಿನ ನೈಸರ್ಗಿಕ ಚೆಲುವನ್ನು ಸ್ತುತಿಸಿದರೆ ಅದರ ಮುಂದಿನ ಭಾಗ ಅಲ್ಲಿನ ಮುಕ್ತತೆಯನ್ನು ಸ್ವಾತಂತ್ರ್ಯವನ್ನು ಕೀರ್ತಿಸುತ್ತದೆ.

"ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;

ಮಲೆಯ ನಾಡಿಗೆ, ಮಳೆಯ ಬೀಡಿಗೆ, ಸಿರಿಯ ಚೆಲುವಿನ ರೂಢಿಗೆ

ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆಯ ಕಾಡಿಗೆ

ಹಸುರು ಸೊಂಪಿನ ಬಿಸಿಲು ತಂಪಿನ ಗಾನದಿಂಪಿನ ಕೂಡಿಗೆ

ಅಲ್ಲಿ ಇಂತಿರಬೇಕು, ಇಂತಿರಬಾರದೆಂಬುವುದಿಲ್ಲವೈ;
ಅಲ್ಲಿ ಹೊರೆ ಹೊಣೆಯಿಲ್ಲ; ಶಾಸ್ತ್ರದ ವಿಧಿ ನಿಶೇಧಗಳಿಲ್ಲವೈ;
ಜಾತಿಗೀತಿಯ ವೇದಭೇದದ ಕಟ್ಟುಕಟ್ಟಳೆ ನಿಲ್ಲದೈ
ಅಲ್ಲಿ ಪ್ರೀತಿಯೆ ನೀತಿ; ಧರ್ಮಕೆ ಬೇರೆ ಭೀತಿಯೆ ಸಲ್ಲದೈ”[೧೫]

ಕವಿ ಇಲ್ಲಿ ಮಾರ್ಮಿಕವಾಗಿ ತಾನಿರುವ ಜಗತ್ತಿನಲ್ಲಿರುವ ಅಸಮಾನತೆಯನ್ನು, ವಿಧಿ, ನಿಷೇಧಗಳನ್ನು, ತಾರತಮ್ಯಗಳನ್ನು, ನೀತಿ–ಧರ್ಮಗಳ ಹೆಸರಿನಲ್ಲಿ ನಡೆಯುವ ದಬ್ಬಾಳಿಕೆಯನ್ನು ಕುರಿತು ಹೇಳಿದ್ದಾರೆ. ತನ್ನ ಒಲುಮೆಯ ಗೂಡಾದ ಮಲೆನಾಡಿಗೆ ಹೋಗಬೇಕೆನ್ನುವುದು– ಅಲ್ಲಿಯ ಬಗೆಗಿನ ಪ್ರೀತಿಯಿಂದ ಎಂಬುದು ಒಂದು ನೆಲೆಯಾದರೆ, ಇಲ್ಲಿಯ ಅಸಹನೀಯ ಸ್ಥಿತಿಯ ಒತ್ತಾಯವೂ ಅದಕ್ಕೆ ಕಾರಣ ಎಂಬುದು ಇನ್ನೊಂದು ನೆಲೆ.

ಕುವೆಂಪು The Orphan’s Dream ಎಂಬ ಶೀರ್ಷಿಕೆಯ ಕವನವನ್ನು ೮.೨.೧೯೨೫ರಲ್ಲಿ ರಚಿಸಿದ್ದಾರೆ. ಅವರು ಒಮ್ಮೆ ಮೈಸೂರಿನ ಸಂತೆ ಪೇಟೆಯ ಬೀದಿಯಲ್ಲಿ ನಡೆದು ಹೋಗುತ್ತಿರುವ ಸಮಯದಲ್ಲಿ, ಅಲ್ಲೇ ಮಲಗಿ ನಿದ್ರಿಸುತ್ತಿದ್ದ ಅನಾಥನನ್ನು ಕುರಿತು ಬರೆದ ಕವನ. ಮೊದಲ ಭಾಗದಲ್ಲಿ ಕುವೆಂಪು ಅವರು ಮೇಲಿನ ಕವಿತೆಯಲ್ಲಿನ ವಿನ್ಯಾಸವನ್ನು ಬಳಸಿದ್ದಾರೆ: ಇದೊಂದು ಸ್ಥಿತಿಯ ವರ್ಣನೆ.

“Reclining on his bony arm
Sits the orphan boy half dead;
Pale is his face and every charm
From his very Soul is fled.

His eyes gleam but not a spark of gladness
From them flits, save those of acute sadness!”[16]

ಸಾವು ಒಂದು ಬಗೆಯ ಎಮಾನ್ಸಿಪೇಶನ್ (Emancipation) ಅಂದರೆ ವಿಮೋಚನೆ ಎಂದು ಬಗೆಯುವ ಕವಿ ಮನ ಅದಕ್ಕೆ ತಕ್ಕ ವಾತಾವರಣವನ್ನೂ ಕಲ್ಪಿಸುತ್ತಾರೆ. ಇಲ್ಲಿನ ನಿದ್ರೆ ಹಸಿವಿನ ನಿದ್ರೆಯಂತೆ ವರ್ಣಿಸಲ್ಪಟ್ಟಿದ್ದರೂ ಸಾವಿಗೆ ಸನಿಹದ್ದು. ಅದಕ್ಕೇ ಶಾಂತಿಯ ಸ್ವರ್ಗಲೋಕದ ಕನಸ ಕಾಣುವುದು ಅವನಿಗೆ ಸಾಧ್ಯವಾಗುತ್ತದೆ. ಹಸಿದಲ್ಲದೆ ಬೇರೆ ಯಾರಿಗೂ ಆ ಬಗೆಯ ಅನುಭವ ಒದಗುವ ಸಂಭವವಿಲ್ಲ.

“But soon sad hunger’s storm doth rage
And the traffic of his soul;
Oblivious sleep descends to assuage
The wild storm of his sad soul:

And oh! soon he lays him down and sees

In his dream the Paradise of Peace!"[17]

ಕವಿ ಕುವೆಂಪು ಅವರು ಬಡತನವನ್ನು ಕಾಣುವ ಚಿತ್ರಗಳು ಇಂಥವೇ, ಇವೆಲ್ಲ ತುಂಬಾ ಕರುಣಾಜನಕವಾಗಿದೆ. ಒಬ್ಬ ನಿರ್ಗತಿಕ ಅನಾಥ ಬಾಲಕನನ್ನು ಕಂಡು ಅವರ ಸಾಮಾಜಿಕ ನ್ಯಾಯದ ಪರವಾದ ಆತ್ಮಪ್ರಜ್ಞೆ ಸ್ಫುಟಗೊಳ್ಳುವುದನ್ನು ಚಿಕ್ಕಂದಿನಲ್ಲಿಯೇ ಗಮನಿಸಬಹುದು. ಅವರು ಗಮನಿಸುವುದು ಬಡವನಲ್ಲಿಯೂ ಸಹ ಸಿರಿವಂತರಂತೆಯೇ ಕನಸುಗಳು ಹೊಮ್ಮುತ್ತವೆ, ಆದರೆ ಆ ಕನಸುಗಳು ಸಾರ್ಥಕವಾಗುವ ಮೊದಲೇ ಸೊರಗಿ ಮಣ್ಣಾಗಿ ಹೋಗುತ್ತವೆ.

ಕುವೆಂಪು ಅವರ Vigil over the Dead ಎಂಬ ಶೀರ್ಷಿಕೆಯ ಕವಿತೆ ೨೩.೨.೧೯೨೫ರಲ್ಲಿ ರಚಿಸಿದ ಒಂದು ಸಾನೆಟ್ಟು. ಇದೊಂದು ಸಾವಿನ ನಂತರದ ದೃಶ್ಯವನ್ನು ಚಿತ್ರಿಸುವ ಕವಿತೆ. ಇಲ್ಲಿ ಸಾವಿನ ಖಟ್ಲೆಗೆ ಅನಿವಾರ್ಯ ಜಯ ದೊರಕಿದೆ ಎನ್ನುವಲ್ಲಿ ವಿಪರ್ಯಾಸದ ಬದುಕನ್ನು ಚಿತ್ರಿಸಿರುವ ಕ್ರಮ ಪರಿಣಾಮಕಾರಿಯಾಗಿದೆ.

ಜೀವಂತವಿರುವವರು, ಸತ್ತವರು, ನಿಂತುಹೋದಿರುಳು/ಕ್ಷೀಣ ಆಡುವ ಬೆಂಕಿ ಹೊಯ್ದಾಡುವ ತೆರೆ/ಆಕಳಿಸುವ ಮುದುಕಿ– ಓಹ್! ಈ ಎಲ್ಲ ದೃಶ್ಯ – ಈ ಚಿತ್ರಗಳು ಕಟ್ಟಿಕೊಡುವ ಅನುಭವ ಸಾವಿನ ಬರ್ಬರತೆಯನ್ನು ಇಮ್ಮಡಿಗೊಳಿಸಿವೆ. ಜೊತೆಗೆ ಕವಿಮನದಲ್ಲಿನ ಅಸಂಖ್ಯ ಚಿತ್ರಗಳ ಸಂತೆಯಲ್ಲಿ ಸಂದುಹೋಗಿವೆ.

"Hushed is the night, still is the breath,

The lamentation's done;

He's gone forever, the cause of death

Is inevitably won.

The living, the dead, the stilly night,

The flickering fire and the screen,

The yawning hag and the very sight

All seem like a painted scene!"[18]

ಸ್ಮಶಾನವೆಂಬುದು ಬದುಕಿನ ಯಾತ್ರೆ ಮುಗಿಸಿದವರ ಅಂತಿಮ ನಿಲ್ದಾಣ. ಹುಟ್ಟು–ಸಾವುಗಳ ನಡುವೆ ನಡೆದಿದೆ ನಮ್ಮ ಬದುಕು. ದುಖವಿಲ್ಲದೆ ಸುಖದ ಕಲ್ಪನೆಯಿಲ್ಲ, ಸಾವು ಎಂಬುದು ಇರುವುದರಿಂದಲೇ ನಮಗೆ ಜೀವನವು ಪ್ರಿಯವೂ ಮಧುರವೂ ಆಗಿ ಕಾಣುತ್ತದೆ –ಎಂಬುದೆಲ್ಲ ನಿಜವೆಂದು ತೋರಿದರೂ ವಿದಾಯದ ನೋವು ಮನಸ್ಸಿನಲ್ಲಿ ಹುತ್ತಗಟ್ಟುತ್ತದೆ.

ಕುವೆಂಪು ಅವರು The Lunatic's Ode ಎಂಬ ಶೀರ್ಷಿಕೆಯ ಕವನವನ್ನು ೧೮.೩.೧೯೨೫ ರಲ್ಲಿ ರಚಿಸಿದ್ದಾರೆ. ನಮ್ಮ ಸಮಾಜದ ಕಟ್ಟು ಪಾಡುಗಳ, ಸಂಕುಚಿತ ಮನೋಭಾವನೆಗಳ

ದೌರ್ಬಲ್ಯವನ್ನು ಕುರಿತು ರಚಿಸಿದ ಈ ಕವಿತೆಯಲ್ಲಿ ಮತಿವಂತ ವಿವೇಕದ ಸಂತತಿಯಾದ ಮಾನವ ಕಟ್ಟಿಕೊಂಡ ಸಮಾಜದ ಆಲೋಚನಾ ಕ್ರಮವನ್ನು ಕುರಿತು ತಮ್ಮ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಒಂದು ಬಗೆಯಲ್ಲಿ ರಿಲ್ಕ್ ಕವಿಯ ಕೆಲವು ಪದ್ಯಗಳನ್ನು ನೆನಪಿಸುವ ಕವಿತೆ ಇದು.

"O shun this Lunatic's Ode,
Ye Reason's progeny wise :"[19]

ಮತಿವಂತ ವಿವೇಕಿ ಸಮಾಜ ನೋಡಬೇಕಿರುವುದು ಹುಚ್ಚ ಕವಿಯ ಹಾಡನ್ನಲ್ಲ. ಹೊರಗೆ ಏನೇನೋ ಬದಲಾವಣೆಗಳು ಸಿಡಿಯುತ್ತಿವೆ. ಅದು ಇಲ್ಲೇ. ಅದನ್ನರಿತು ಹಾಡುವವನ ಸ್ವರ್ಗ ಇಲ್ಲೇ ಇದೆ. ಇದೂ ದೇವನ ಸಗ್ಗವೇ. Your fiery theories explode, his eternal Paradise.[20] ಇಲ್ಲಿ ಹಾಡುವವನೆಂತಿರುವ ಕಾಣಿ:

"Whose radiance lights
the rainbow-bubble of his
charmed eyes!

Naught we lose and naught we gain,
Our wisdom is but a boast;
we seek the ocean in vain
Standing on its very coast;
Let the wise grope in light;
Fools, darkness is our beacon post!"[20]

ನಾವು ಕಳೆದೆವೆಂಬುದು, ಗಳಿಸಿದೆವೆಂಬುದು ನಮ್ಮ ವಿವೇಕ ಭಾವಿಸುವ ಪರಿ. ಇದು ಅಸತ್ಯ. ಕತ್ತಲೆಂಬ ಕೈಗಂಬ ಹಿಡಿದು ಸಾಗರವ ಹುಡುಕುತ್ತಿರುವುದು ಅದರ ದಡದಲ್ಲೇ ನಿಂತು ಎಂಬ ಮಾತು ನಮ್ಮೆಲ್ಲ ನಂಬಿಕೆಗಳ ಬುಡವನ್ನು ಅಲ್ಲಾಡಿಸಿ ಹೊಸ ನೋಟ ನೋಡಲು ಕರೆ ಕೊಡುವಂತಿದೆ. ಈ ಸಾಲುಗಳು ಹುಚ್ಚನ ಪರಿಕಲ್ಪನೆಯನ್ನು ಸಮರ್ಥವಾಗಿ ನಮ್ಮ ಮುಂದಿಡುತ್ತವೆ.

'ಕೊಳಲು' ಕುವೆಂಪು ಅವರ ಮೊದಲ ಕವನ ಸಂಕಲನ. ಈ ಕೊಳಲು ಕೃಷ್ಣನ ಕೊಳಲಲ್ಲ; ಕಾಡಿನ ಕೊಳಲು; ಗೊಲ್ಲನ ಕೊಳಲು. ಆದರೆ ಆ ಕೊಳಲಿನಲ್ಲಿ ಬೃಂದೆಯ ನಂದನ ಕಂದನಿದ್ದಾನೆ. ಕುವೆಂಪು ಅವರಲ್ಲಿ ಪದೇ ಪದೇ ಏಕೆ ಬರುತ್ತಾರೆ ಎಂಬ ಪ್ರಶ್ನೆ ಕಾಡದಿರದು. ನಮ್ಮ ಇವತ್ತಿನ ಕಲ್ಪನೆಯ ಧರ್ಮ ಮತಗಳು ಬದಲಾಗಿ ಹೊಸ ಯುಗಧರ್ಮವೊಂದು ರೂಪಿತವಾಗಬೇಕು ಎಂದು ಬಯಸಿದ ಕುವೆಂಪು ಮನುಷ್ಯನ ಸಣ್ಣತನಗಳ ನಿವಾರಣೆಗೆ ಹುಡುಕಿದ ಎಡೆಗಳಲ್ಲಿ

ನಿಸರ್ಗವೂ ಒಂದು. ಕುವೆಂಪು ಪರಿಭಾವಿಸಿದ ಮೌಲ್ಯಗಳು ಮಾನವರನ್ನು ಕೂಡಿಸಿ ಬಾಳಿಸುವತ್ತ ನಡೆಯುತ್ತವೆ. ಗುಂಪುಗಾರಿಕೆಗೆಂದೂ ಇವು ತೊಡಗುವುದಿಲ್ಲ; ಅದೇನಿದ್ದರೂ ರಾಜಕೀಯದ ಕರ್ಮ ಎಂದು ಅವರು ಸ್ಪಷ್ಟವಾಗಿ ಹೇಳಿದ್ದರು. ಈ ಹಿನ್ನೆಲೆಯಲ್ಲಿ ನಾಗರಿಕತೆಯ ಪಾಠ ಕಲಿತ ಟಿಪಿರ ಗೌಡ ಕಿಂದರಿ ಜೋಗಿಗೆ ಮೋಸಮಾಡುವ ಮಕ್ಕಳ ಕವಿತೆಯನ್ನೂ ಗಮನಿಸಬಹುದು.

ನಿಸರ್ಗವೆನ್ನುವುದು ವಿಮಾನದಲ್ಲಿ ಕೂತು ಹಾರಿ ಅನುಭವಿಸುವುದಲ್ಲ. ಅದೊಂದು ಪಾದಪೂರಿ ನಡೆವ ಯಾನ. ಅನಿಯಂತ್ರಿತವಾಗಿ, ಅಪೂರ್ವ ಶಾಂತಿಯನ್ನು ಸುಖದಿಂದ ಆಸ್ವಾದನೆ ಮಾಡುವುದನ್ನು ಗುರಿಯಾಗಿಸಿ, ಆ ಮೂಲಕ ಮನಸ್ಸನ್ನು ನಿಸರ್ಗದೇವಿಯಲ್ಲಿ ಪ್ರತಿಷ್ಠಾಪನೆ ಮಾಡುವವರು ಕುವೆಂಪು. The Cowherd's Flute ಎಂಬ ಕವನವನ್ನು ಈ ನಿಟ್ಟಿನಲ್ಲಿ ಗಮನಿಸಬಹುದು.

"Traveler, a moment pause,
Pass not this dale with haste;

Or listen as you slowly pass,
The flute of this jovial waste.

Behold how his fingers roll
By power of music driven!
Traveler, does it not console
A heart to misery given?..."[21]

ಕುವೆಂಪು ಅವರ ಮಹತ್ವದ, ಪ್ರಸಿದ್ಧ ಕವನ ನೇಗಿಲ ಯೋಗಿ ರೈತನ ದುಡಿಮೆಯ ನಿಷ್ಠೆಯನ್ನು ಅಭಿಮಾನದಿಂದ ಹಾಡಿ ಹೊಗಳುವ ಕವನ. ಈ ರೈತ, ಕೂಲಿಕಾರ ಮುಂತಾದವರ ಬಗ್ಗೆ ಕುವೆಂಪು ಕವಿತೆಗಳಿವೆ. Laborer's Cottage ಎಂಬ ಕವನ ಇದೇ ಬಗೆಯಲ್ಲಿರುವುದನ್ನು ಗಮನಿಸಬಹುದು.

"Remote from towns and haunts of men,
upon the wild sequestered glen,
Beyond the reach of envious ken
And all destructive hands,
Alone amid the regions wild
Where man is ever undefiled
There like a simple nature's child
The Labourer's cottage stands.
If on the cottage floor you stand.

Your eyes survey the smiling land
Whose splendor wrought by nature's hand
Allures each each nature's child;
Around, the green-clad mountains rise;
Beneath, the green-clad pasture lies;
Above, there spread the silent skies,
and make a heaven in the wild."[22]

ನೀರವ ಪ್ರಶಾಂತ ಪ್ರಕೃತಿ ಸೌಂದರ್ಯದ ವಾತಾವರಣವನ್ನು Remote from towns and haunts of men, upon the wild sequestered glen ಎಂದು ಚಿತ್ರಿಸುತ್ತಲೆ, ನೀರವ ಪ್ರಶಾಂತ ಪ್ರಕೃತಿ ಸೌಂದರ್ಯ ಕ್ಕೆ ಕಾರಣವನ್ನೂ ಕವಿ ಸೂಚಿಸುತ್ತಾರೆ:

"Beyond the reach of envious ken
And all destructive hands,
Alone amid the regions wild

Where man is ever undefiled"[23] – ಇರುವುದರಿಂದ ಎಂಬ ವಿವರಣೆ ಮನುಷ್ಯನ ಭಸ್ಮಾಸುರ ಪ್ರವೃತ್ತಿಯನ್ನು ಬಿಚ್ಚಿಡುತ್ತದೆ. ಅಂದೇ ಕುವೆಂಪು ಮನುಷ್ಯನ ದುಷ್ಟತನಕ್ಕೆ ಏನೇನೆಲ್ಲಾ ಬಲಿಯಾಗಬೇಕೆಂಬುದರ ಕುರಿತು ಯೋಚಿಸುತ್ತಿದ್ದರು. ಒಂದು ಈ ಟಿವಿ ಸಂದರ್ಶನದಲ್ಲಿ ಕಾಡು ತಾಯಿಯ ರೂಪದಲ್ಲಿ ಕುವೆಂಪು ಅವರಿಗೆ ಕಂಡಿತ್ತು ಎಂದು ತೇಜಸ್ವಿ ಹೇಳುತ್ತಾರೆ. ತೇಜಸ್ವಿ ಕಾಡನ್ನು ಕುರಿತು ಅದು ಮೊದಲು ಓಪನ್ ಟ್ರೆಷರಿಯಾಗಿತ್ತು, ಅದನ್ನು ನುಂಗಿದೆವು. ಮೊದಲು ಕಾಡು ನಮಗೆ ಅಬೇಧ್ಯವಾಗಿತ್ತು. ಮನುಷ್ಯ ಅದನ್ನು ವಶಪಡಿಸಿಕೊಳ್ಳಲು ಹರಸಾಹಸ ಪಡುತ್ತಿದ್ದ. ಈಗ ಮನುಷ್ಯನೇ ಕಾಡನ್ನು ಕಾಪಾಡಬೇಕಾದ ಸನ್ನಿವೇಶವನ್ನು ಅವನು ಸೃಷ್ಟಿಸಿದ್ದಾನೆ ಎಂದು ವಿಷಾದ ಪಡುತ್ತಾರೆ.

ಆ ಬಡ ಶ್ರಮಿಕಜೀವಿಯ ಬದುಕನ್ನು ಅನಾವರಣಗೊಳಿಸುವ ಕವನವಿದು. ದುಡಿಮೆಯ ಬಗ್ಗೆ ಕವಿಗೆ ಇರುವ ಗೌರವ, ಅಭಿಮಾನವನ್ನು, ಶ್ರಮಿಕ ಜೀವಿಯ ಬಗ್ಗೆ ಕವಿಗಿರುವ ಸಹಾನುಭೂತಿ, ಅನುಕಂಪ, ಪ್ರಶಂಸೆಗಳನ್ನು ಸೂಚಿಸುವ ಕವನ ಕುವೆಂಪು ಎಂದಿಗೂ ಬಡವನ ಪರವಾದ, ರೈತನ ಪರವಾದ ನಿಲುವು ಹೊಂದಿದ್ದರೆಂಬುದಕ್ಕೆ ಸೂಚನೆಯಾಗಿದೆ ಈ ಕವನ.

Ambition ಎಂಬ ಶೀರ್ಷಿಕೆಯಲ್ಲಿ ಕುವೆಂಪು ಅವರು ೭.೩.೧೯೨೫ ಮತ್ತು ೧೨.೧೦.೧೯೨೪ರಲ್ಲಿ ಬರೆದಂತಹ ಕವನವು ಕೀರ್ತಿಶನಿಯನ್ನು ಕೇಂದ್ರದ ವಸ್ತುವಾಗಿಸಿಕೊಂಡಿದೆ. ಕುವೆಂಪು ಅವರಿಗೆ ಕೀರ್ತಿಗಿಂತಲೂ ಹೆಚ್ಚು ಪ್ರಿಯವಾದದ್ದು ಸತ್ಯ. ಸತ್ಯ ಹೇಳಿದರೆ ಕಲುಷಿತವಾಗುವ ಕೀರ್ತಿ ದುರ್ಬಲರಲ್ಲಿ ಭ್ರಷ್ಟಾಚಾರದ ವಸ್ತುವಾಗುತ್ತದೆ. ಅದಕ್ಕೇ 'ಕೀರ್ತಿಶನಿ' ಎಂಬ ಅವರ ಸಾನೆಟ್ಟಿನಲ್ಲಿ ಅವರು ಅದನ್ನು ತೊಲಗಾಚೆ ಎಂದಿದ್ದರು.

"O Poet, uproot the plant of fame before
Its roots transfix deep in thy bosom's dale."[24]

ಕಾವ್ಯದ ಅನುಸಂಧಾನದಲ್ಲಿ ತೊಡಗುವ ಕವಿ ಪಡೆದುಕೊಳ್ಳಬೇಕಾದುದು ಖ್ಯಾತಿಯ ಬದಲಿಗೆ ಕವಿಹೃದಯದ ಕಲ್ಪನಾ ಶಕ್ತಿಯನ್ನು ಎನ್ನುವ ಕವಿ ಕವಿಗೆ ಸ್ವಾಗತಿಸಲು ಹೇಳುವುದು ಹೀಗೆ - chanting –maid of weakness born I thy door, Must e'er be open to receive such lore.[25] ಈ ಭಾವಕ್ಕೊಂದು ಗುರಿಯಿದೆ. ಅದರ ಫಲಶ್ರುತಿಯೂ ಇದೆ.

"That makes thee infinite I muse not fail
To slit temptations dark, lest it should quail
Before the awe of Heaven's infinite roar!"[26]

– ಅಬ್ಬಾ ಎನ್ನಿಸುವಷ್ಟು ಗಂಭೀರವಾದ ಕ್ಷುದ್ರ ಆಮಿಶಗಳ ಸಿಗಿವ ತನ್ನ ಕಾಯಕದಲ್ಲಿ ಕಾವ್ಯಸೃಷ್ಟಿಯು ಎಂದೂ ಸೋಲದಿರಲೆನುವೆ ಎನ್ನುವ ಸಾತ್ವಿಕ ಕೆಚ್ಚು ಮನಮುಟ್ಟುವಂತೆ ಇಲ್ಲಿ ಪ್ರಕಟವಾಗಿದೆ. ಕೀರ್ತಿ ಕಲುಷಿತವಾಗುವುದಿರಲಿ ಅಪಕೀರ್ತಿಯೇ ಬಂದರೂ ಸತ್ಯ ಹೇಳುವುದನ್ನು ಬಿಡುವುದಿಲ್ಲ ಎನ್ನುತ್ತಾರೆ.

ಕುವೆಂಪು ಅವರ ಮತ್ತೊಂದು ಕವನ **ಯಶೋಲಕ್ಷ್ಮಿ** ಇವಳು ಕೀರ್ತಿ ಶನಿಯಂತೂ ಅಲ್ಲವೇ ಅಲ್ಲ. ಆದ್ದರಿಂದಲೇ ಇಂಥ ಲಕ್ಷ್ಮಿಯನ್ನು ಕರೆಯಲು ಕುವೆಂಪು ಮುಂದಾಗುವುದು:

"ವ್ಯೋಮ ಗೋಪುರ ಶಿಖರದಿಂದಿಳಿದು ಬಾ, ಹೇ ಅಮೃತೆ,
ಮಣುದೆನ್ನ ಮುಡಿಗುಡಿಗೆ: ಶಿವೇ ನೀಂ ತಪೋರೂಪಿಣಿ;
ಚಿರಧವಳೆ; ಪುಣ್ಯಮಯಿ; ಲಜ್ಜಾಕರೆ; ಋತಾನ್ವಿತೆ;
ಭಗವದಾಶೀರ್ವಾದ ಮೇಣ್ ಕೃಪಾ ಸ್ವರೂಪಿಣಿ!"[೨೭]

ಕುವೆಂಪು ರಚಿಸಿದ Music ಒಂದು ಸಾನೆಟ್ಟು, ಒಂದು ಸಂಸ್ಕೃತ ಸೂಕ್ತಿಯಿದೆ – 'ಕಲಾವಿಹೀನಃ ಸಾಕ್ಷಾತ್ ಪಶುಃ ಪುಚ್ಛವಿಶಾಣಹೀನಃ' ಅಂದರೆ ಸಾಹಿತ್ಯ, ಸಂಗೀತ ಮತ್ತು ಕಲೆಯ ಜ್ಞಾನ ಇಲ್ಲದವನು ಕೋಡು–ಬಾಲ ಇಲ್ಲದ ಪಶುವಿಗೆ ಸಮಾನ. ಕುವೆಂಪು ಅವರಿಗೆ ಸಂಗೀತ ಘನ ಗಂಭೀರ. ಅದಕ್ಕೆ ದಿವ್ಯ ಶಕ್ತಿಯಿದೆ: 'ಮತ್ತದನು ನುಡಿವ ಚೇತನವು ನೋಟದಾಚೆಗೆ ಸಾಗುವವು.' ಈ ಮಾತು ಅದನ್ನೇ ಧ್ವನಿಸುತ್ತದೆ. ಅದು ಅನಂತದ ಕೊರಳು, ಆನಂದದ ಆತ್ಮ ಎಂಬ ಮಾತುಗಳಲ್ಲಿ ಅಡಗಿದ ಆರಾಧನಾ ಭಾವವನ್ನು ಸೂಕ್ಷ್ಮವಾಗಿ ಗಮನಿಸಬೇಕು.

"Joy's sweet consort, voice of Eternity,
Ecstasy's soul, thy power is infinite!
The trees, the houses and the very light
That smiles around me, and humanity

With all its painted glorious melt in thee
And reel and fade away! The vina bright,
And the playing spirit pass beyond my sight,"

And thou alone survives in deep ecstasy![28] – ಅದು ಖಾಸಗಿಯಾದದ್ದೂ ಹೌದು. ಕೇಳುಗನ ರಸಪಾಕವನ್ನು ಆಧರಿಸಿ ಅದು ಒಳಪ್ರವೇಶವನ್ನು ಮಾಡುವುದು. ಸ್ವೀಕರಿಸುವ ಮನಸ್ಸು ಮಾತ್ರವೇ ಉಳಿಯುವುದು Deep ecstasyಯಲ್ಲಿ.

ಕವಿ ಏಕಾಂಗಿಯಲ್ಲ, ಏಕೆಂದರೆ ಜಗತ್ತಿನ ಸೂಕ್ಷ್ಮಾತಿ ಸೂಕ್ಷ್ಮವಾದ ವಸ್ತುವಿನಲ್ಲೂ ಅವನು ಅಸಾಮಾನ್ಯವಾದದನ್ನು ಕಾಣುವ ಶಕ್ತಿ ಅವನಿಗಿರುತ್ತದೆ. ತನ್ನ ಆಲೋಚನಾ ಕ್ರಮದಿಂದಾಗಿ ಜಗತ್ತನ್ನೇ ತನ್ನೆದುರು ಸೃಷ್ಟಿಸುವ ಪ್ರಬಲವಾದ ಶಕ್ತಿ ಅವನಿಗಿರುತ್ತದೆ. ಇನ್ನೊಂದು ಕಡೆ ಅದೇ ಕವಿ ಅಂದಿನ ಚಿಂತನ ಸ್ವರೂಪಕ್ಕೂ, ಧ್ಯಾನಶೀಲತೆಗೂ ಗವಾಕ್ಷವಾಗಿರುವ ಒಂದು ಸಾನೆಟ್‌ನ್ನು ರಚಿಸಿದ್ದಾರೆ. A Night Piece (ರಾತ್ರಿಯಲ್ಲಿ) ಎಂಬ ಶೀರ್ಷಿಕೆಯ ಈ ಕವಿತೆಯನ್ನು ೧೦.೧೨.೧೯೨೩ರಲ್ಲಿ ರಚಿಸಿದ್ದಾರೆ. ರಾತ್ರಿಯಲ್ಲಿ ಸಾಮಾನ್ಯವಾಗಿ ನಮ್ಮಲ್ಲಿನ ಯಾವ ವಿಶೇಷತೆಯನ್ನು ಕಾಣಲಾಗುವುದಿಲ್ಲ. ಆದರೆ ಒಂದೊಂದು ಹಗಲು, ಒಂದೊಂದು ಇರುಳು ಕವಿಗೆ ಬೇರೆ ಬೇರೆಯೇ. ಪ್ರತಿದಿನದ ಭಾವದ ಮೇಲೆ ಅವರ ಆಲೋಚನೆಗಳು ಹುಟ್ಟುತ್ತಿರುತ್ತವೆ. ಬೇರೆ ಬೇರೆ ಓದಿಗೆ ಅವರು ತಮ್ಮನ್ನು ಒಡ್ಡಿಕೊಂಡಾಗಲೆಲ್ಲ ಅವರ ಭಾವ ಕೋಶ ಹಿಗ್ಗುತ್ತಿತ್ತು. ಅದನ್ನು ಕುರಿತ ಯೋಚನೆ ಅದು ಪ್ರಸ್ತುತಕ್ಕೆ ಎಷ್ಟು ಸಮಂಜಸ ಎಂಬ ಕಡೆಗೆ ಕುವೆಂಪು ಅವರನ್ನು ಒಯ್ದಿರಬೇಕು. ಓದಿನಿಂದ ತನ್ನ ಮೇಲೆ ಉಂಟಾದ ಪರಿಣಾಮವನ್ನು ಕುವೆಂಪು ಹಲವೆಡೆ ಹೇಳಿಕೊಂಡಿದ್ದಾರೆ. ಕವಿ ಆ ವಯಸ್ಸಿಗಾಗಲೇ ಬಹಳವಾಗಿ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರ ಚಿಂತನೆಗಳಲ್ಲಿ ಮುಳುಗಿದ ಕಾರಣ ಅವರಲ್ಲಿ ಸಂಕರ್ಷಣ–ವಿಕರ್ಷಣಗಳುಂಟಾಗಿ ಭಾವಲಹರಿಗಳು ಅಭಿವ್ಯಕ್ತಿಗಾಗಿ, ತಕ್ಕ ತೇವದ ನೆಲಕ್ಕಾಗಿ ಸುಳಿದಾಡುತ್ತಿದ್ದವು ಎನ್ನಬಹುದು. ಕವಿಯ ಪ್ರಕೃತಿ ಪ್ರೇಮ ಮತ್ತು ಆಧ್ಯಾತ್ಮ ಚಿಂತನೆಗಳ ಲಹರಿಗಳು ಅವರ ಎಲ್ಲಾ ಕವಿತೆಗಳಲ್ಲಿ ಪ್ರಕಾಶಗೊಳ್ಳುವುದಕ್ಕೆ ಇದೇ ಕಾರಣಕ್ಕೆಂದು ಹೇಳಬಹುದು.

"Oft in the solitary glen of soul
I slit serene and sweet, to contemplate
On birth and death, on fetters strong of fate
And that Beyond where lies eternal goal.
The world is sweet! Ignorance makes it foul;...."[29]

ಈ ಉಧೃತ ಕವಿತೆಯ ಸಾಲುಗಳು ಕುವೆಂಪು ಅವರ ಆಧ್ಯಾತ್ಮಿಕ ದೃಷ್ಟಿಕೋನವು ಚಿನ್ಮಯವೂ ಆಧ್ಯಾತ್ಮವೂ ಆಗಿದೆ ಎನ್ನುವುದನ್ನೂ ಸಂಕರ್ಷಣ ವಿಕರ್ಷಣವನ್ನೂ ಕುರಿತು ಮಾತಾಡುವಂತಿವೆ.

ಶ್ರೀ ರಾಮಕೃಷ್ಣರ ಸಮನ್ವಯ ತತ್ವ ಮತ್ತು ವಿವೇಕಾನಂದರ *"ಏಳಿ, ಎಚ್ಚರಗೊಳ್ಳಿ, ಗುರಿಮುಟ್ಟುವ ತನಕ ನಿಲ್ಲದಿರಿ"* ಎಂಬ ಅಮರ ಸಂದೇಶ ಕುವೆಂಪು ಅವರ ಮೇಲೆ ಮಾಡಿದ ಪರಿಣಾಮವೆಂತಹುದು? ರಾಮಕೃಷ್ಣರ ಜನ್ಮವಾದ ಸಮಯದಲ್ಲಿ ಭಾರತದ ಪರಿಸ್ಥಿತಿ ಹೇಗಿತ್ತು ಎಂಬುದನ್ನು ಅವರ ಪುಸ್ತಕದ ಪೀಠಿಕಾ ರೂಪದ ಅಧ್ಯಾಯಗಳಲ್ಲಿ ಕಾಣಬಹುದಾಗಿದೆ. ಆ ದಿನಗಳಲ್ಲಿ ಹಳೆಯದೆಲ್ಲ ಪವಿತ್ರವೆಂಬ ಗೊಡ್ಡು ನಂಬಿಕೆ ಭಾರತೀಯರಲ್ಲಿ ಬೆಳೆದಿತ್ತು. ಪೌರಾಣಿಕ ಜ್ಞಾನವನ್ನೇ ವಿಜ್ಞಾನವೆಂದು ನಂಬಿ, ಮೇಲು-ಕೀಳೆಂಬ ತಾರತಮ್ಯವನ್ನು ಬೆಳೆಸಿಕೊಂಡು, ಸಹಗಮನವೇ ಮುಂತಾದ ಭೀಷಣ ಪದ್ಧತಿಗಳನ್ನು ಅನುಸರಿಸುತ್ತಾ, ಕಲಿಯುಗವನ್ನು ಅಧರ್ಮದ, ವಿನಾಶದ ಯುಗವೆಂದು ಹಳಿಯುತ್ತಾ ಕಾಲಕಳೆಯುವವರೇ ಹೆಚ್ಚಾಗಿದ್ದ ಕಾಲವದು. ಜಡತ್ವದಿಂದ ಭಾರತೀಯರನ್ನು ಬಡಿದೆಬ್ಬಿಸಲು ವಿವೇಕಾನಂದರಂಥ ವರ್ಚಸ್ವೀ ಸನ್ಯಾಸಿಯೋರ್ವನ ನಿರಂಕುಶ ಮತಿಯ ಅಗತ್ಯವೂ ಬಹಳವಾಗಿತ್ತು. ಪ್ರಪಂಚವು ಸರಿಯಾಗಿಯೇ ಇದೆ ಆದರೆ ನಾವು ಸರಿಯಾದ ಜ್ಞಾನವಿಲ್ಲದೆ ನಮ್ಮ ಮೂರ್ಖತನವು ಅದನ್ನು ಹಾಳುಗೆಡವುತ್ತಿದೆ ಎಂದು ಕವಿಯು ಭಾವಿಸಿದ್ದರು.

ಅಲೆಕ್ಸಾಂಡರ್ ಪೋಪ್ ಕವಿಯ ಕವನ ಸುಖೀ ಮಾನವ (The Happy Man) ಕವನದಿಂದ ಪ್ರೇರಿತರಾದ ಕುವೆಂಪು Blessedness ಎಂಬ ಕವಿತೆಯನ್ನು ೧೯೨೩ರಲ್ಲಿ ರಚಿಸಿದ್ದಾರೆ.

"Blessed is he who loveth all
Regarding neither caste or state,
Who at the tune of honor's call
Remains as great;

Who sheds his tears for other's woe,
Who purely smiles at other's joy;
Whose heart is same when high and low
Pure as boy;..."[30]

ಕುವೆಂಪು ಪೋಪ್‌ರ ಸುಖೀ ಮಾನವ ಕಲ್ಪನೆಯ ಮೂಲಾಂಶವನ್ನು ಹಾಗೆ ಇರಿಸಿಕೊಂಡು, ಮೂಲಭೂತವಾದದಲ್ಲಿ ಸಿಲುಕಿ ಮಾನವೀಯ ಮೌಲ್ಯಗಳನ್ನು ಕಳೆದುಕೊಂಡು ಬದುಕುತ್ತಿರುವ ಪೀಳಿಗೆಗಳಿಗೆ ದುಃಖಿತ ಜೀವನದ ಕಾರಣಗಳನ್ನು ಹುಡುಕಿ ಅದಕ್ಕೆ ಪರಿಣಾಮಕಾರಿಯಾದ ಹಾಗೂ ಸಮಂಜಸವಾದ ಪರಿಹಾರವನ್ನು ಮೇಲಿನ ಕವಿತೆಯಲ್ಲಿ ಸೂಚಿಸಿದ್ದಾರೆ. ಪೋಪ್ ತನ್ನ ಕವಿತೆಯಲ್ಲಿ ಸುಖೀ ಜೀವನ ನಡೆಸಲಿಕ್ಕೆ ದಿಕ್ಕನ್ನು ತೋರಿಸಿದರೆ, ಕುವೆಂಪು ನಮ್ಮನ್ನು ಆ ದಿಕ್ಕಿಗೆ ಕರೆದೊಯ್ಯುತ್ತಾರೆ; ನಾವರಿಯದ ಆದರೆ ನಮಗೆ ಬೇಕಿರುವ ಸಾಮಗ್ರಿಯನ್ನು ಹುಡುಕಿ ನಮ್ಮ ಮುಂದೆ ಇಟ್ಟಿದ್ದಾರೆ. ಮನುಷ್ಯನು ತನ್ನ ಜಾತಿ, ಮತ, ಪ್ರತಿಷ್ಠೆಗಳನ್ನು ತ್ಯಜಿಸಿ, ಪ್ರೀತಿಯ ಬೀಜವನ್ನು ಬಿತ್ತುತ್ತಾ ಅದನ್ನು ಪ್ರೀತಿಯ ಮರವಾಗಿ ಬೆಳೆಸಬೇಕು, ಹೊರತು ವಿಷವೃಕ್ಷವನ್ನಾಗಿ

ಅಲ್ಲ. ಬೇರೆಯವರ ಕಷ್ಟ ಸುಖಗಳಿಗೆ ತಾನು ಬೆಂಬಲವಾಗಿ ನಿಂತು ಅವರ ಸಂತೋಷದಲ್ಲಿ ತನ್ನ ಸಂತೋಷವನ್ನು ಕಾಣಬೇಕು. ಮನುಷ್ಯನ ಬದುಕಿನಲ್ಲಿ ಯಾವುದೇ ಏರಿಳಿತಗಳು ಬಂದರೂ ಕುಸಿಯದೆ ಮಗುವಿನ ಮುಗ್ಧತೆಯನ್ನು ನಮ್ಮ ಹೃದಯದಲ್ಲಿ ಸದಾ ಕಾಪಾಡಿಕೊಂಡು ಬಾಳಬೇಕು ಎಂದು ಹೇಳುವ ಕುವೆಂಪು ಈ ಕವಿತೆಯಲ್ಲಿ ಮಾನವನ ಕಣ್ಣುಗಳನ್ನು ಸಂಗತತೆಯ ಬದುಕಿನತ್ತ ತೆರೆಸುವ ಪ್ರಯತ್ನ ಮಾಡುತ್ತಿದ್ದಾರೆ.

ಕುವೆಂಪು All things Begin where they shall end ಎಂಬ ಶೀರ್ಷಿಕೆಯ ಕವನವನ್ನು ೧೯೨೩ರಲ್ಲಿ ರಚಿಸಿದ್ದಾರೆ. ಈ ಕವಿತೆಯ ರಚನಾ ಪ್ರಕ್ರಿಯೆಯನ್ನು ಕುವೆಂಪು ಅವರು ಹೀಗೆ ಬರೆಯುತ್ತಾರೆ– 'ತರುಣ ಕವಿಯ ಚಿಂತನ ಪ್ರಪಂಚದಲ್ಲಿ ಆಗ ನಡೆಯುತ್ತಿದ್ದ ಆಲೋಚನೆಗಳ ಮತ್ತು ಭಾವನೆಗಳ ಮಂಥನ ಸ್ವರೂಪ ಪ್ರದರ್ಶನವಾಗುತ್ತಿದೆ.[೩೧] ಈ ಕವಿತೆಯಲ್ಲಿ ವಿಜ್ಞಾನ ಮತ್ತು ಆಧ್ಯಾತ್ಮದ ಸಮ್ಮಿಲನ ಉಂಟಾಗಿದೆ. ವಿಜ್ಞಾನ ಮತ್ತು ಆಧ್ಯಾತ್ಮ ಇವೆರಡನ್ನೂ ಕೆಚ್ಚಿನಿಂದ, ನಿಷ್ಠೆಯಿಂದ ದೃಢಬುದ್ಧಿಯಿಂದ ಆಶ್ರಯಿಸಿ, ತಮ್ಮ ಜೀವನದ ಕಾಲ ಚಕ್ರದ ವಿಚಾರಾದಿಯಾಗಿ ವೈಜ್ಞಾನಿಕ ದೃಷ್ಟಿಯಿಂದ ಈ ಕವನವನ್ನು ರಚಿಸಿದ್ದಾರೆ.

"The Sun soars high up in the east
Across the blue he sails;
And in the west he sinks again,
Not even a day he fails.
All things begin where they shall end;
Destruction only helps to mend:
and why not I when shall die
Be born again to swim this main?"[32]

ಸೃಷ್ಟಿಯ ಕ್ರಿಯೆಗಳು ನಿರಂತರವಾದವುಗಳು. ಅದು ಕುವೆಂಪು ಅವರ ಮನಸ್ಸು ಆದಿ ಶಂಕರರ ದಾರ್ಶನಿಕತೆಯನ್ನು ಒಪ್ಪಿಕೊಂಡಿತ್ತು. ಅವರು ಎಂದೂ ಮಧ್ವಾಚಾರ್ಯರ ತತ್ವವನ್ನು ಒಪ್ಪಿರಲಿಲ್ಲ. ಅದನ್ನು ಇವರು ಕರ್ಮಠ ಎಂದು ಕರೆಯುತ್ತಿದ್ದರು. ರಾಮಕೃಷ್ಣರ ಪ್ರಭಾವದಿಂದಲೇ ಇದ್ದೀತು, ರಾಮಕೃಷ್ಣ ಮಠ ಪರಂಪರೆಯು ಶಂಕರ ಭಾಷ್ಯಗಳನ್ನು ಒಪ್ಪಿ ಅನುಸರಿಸಿದಂತೆ ಕುವೆಂಪು ಸಹ ಶಂಕರರಿಂದ ಪ್ರಭಾವಿತರಾಗಿದ್ದರು.

ಅದ್ವೈತ ಎನ್ನುವುದು ನೆಹರು ಅವರ Discovery of India ದಲ್ಲಿ ಬರುವಂತೆ ಸೃಷ್ಟಿಗೆ ಮೊದಲೂ ಏನೂ ಇರಲಿಲ್ಲ, ಇದ್ದದ್ದು ಬ್ರಹ್ಮವೊಂದೇ. ಆತ್ಮವೆನ್ನುವುದು ನಾಶವಾಗತಕ್ಕಂತದಲ್ಲ. ಬ್ರಹ್ಮದಿಂದ ಬಂದ ಅದು ಬ್ರಹ್ಮನನ್ನೇ ಸೇರುತ್ತದೆ. ಜೀವಾತ್ಮ ಪರಮಾತ್ಮನೆಂಬುವ ಕಿಚ್ಚಿನಲ್ಲಿ ಹುಟ್ಟುವಂತಹ ಒಂದು ಕಿಡಿ. ಅದು ಬೂದಿಯಾದರೂ ಮರಳುವುದು ತನ್ನ ಮೂಲಕ್ಕೆ. ಕುವೆಂಪು ಇದನ್ನೇ ಎಲ್ಲ ಕೊನೆಗಾಣುವಲ್ಲಿ ಎಲ್ಲದರ ಉದಯ, ನಾಶವೆಂಬುದು ಪುನರ್‌ಸೃಷ್ಟಿಗೆ

ಮಾಡುವುದು ಅನುವು ಎಂದು ಬರೆಯುತ್ತಾರೆ. ಇಲ್ಲಿ ಸೃಷ್ಟಿ ಎನ್ನುವುದು ನಿರಂತರ ಕ್ರಿಯೆ, ಸೂರ್ಯ, ಚಂದ್ರರಾದಿ ಪ್ರತಿ ದಿನವೂ ಉದಯಿಸುವುದು ಮತ್ತು ಮುಳುಗುವುದು ಅಂದರೆ ಹುಟ್ಟು ಸಾವುಗಳು ನಿರಂತರ ಕ್ರಿಯೆಯಾಗಿವೆ, ಸೃಷ್ಟಿಯು ತನ್ನ ನಿರಂತರತೆಯನ್ನ ತೋರಿಸುವಂಥಹ ವಿಧಾನವಿದು. ಅದಕ್ಕೆ ನಾನೇನು ಹೊರತಲ್ಲ ನಾನೂ ಕೂಡ ಈ ಸೃಷ್ಟಿಯ ಪ್ರಕ್ರಿಯೆಯ ಒಂದು ಭಾಗ, ನಾನು ಕೂಡ ಪುನರ್‌ಸೃಷ್ಟಿಯಾಗುತ್ತೇನೆ ಮತ್ತೇ ಬೇರಾವುದೋ ಜನ್ಮ ತಾಳಿ ಹುಟ್ಟುತ್ತೇನೆ ಎಂಬ ವಿಚಾರವನ್ನು ಕವಿ ಧ್ವನಿಸುತ್ತಿದ್ದಾರೆ.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೫೪, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨. ಅದೇ, ಪುಟ ೯೫೪.

೩. ಅದೇ, ಪುಟ ೯೫೪.

೪. ಅದೇ, ಪುಟ ೯೫೪.

೫. ಅದೇ, ಪುಟ ೯೬೮.

೬. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೪೯೦, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೭೫, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೮. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೪೪೦, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೯. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೯೭, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೦. ಅದೇ, ಪುಟ ೯೯೭–೯೯೮.

೧೧. ಕುವೆಂಪು ; ಕುವೆಂಪು ಸ. ಕಾವ್ಯ ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೩೨, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೨. ಅದೇ, ಪುಟ ೯೩೨.

೧೩. ಅದೇ, ಪುಟ ೯೮೮.

೧೪. ಅದೇ, ಪುಟ ೯೮೮.

೧೫. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೬೬೭, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೬. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೩೬, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೭. ಅದೇ, ಪುಟ ೯೩೬.

೧೮. ಅದೇ, ಪುಟ ೯೪೩.

೧೯. ಅದೇ, ಪುಟ ೯೪೩.

೨೦. ಅದೇ, ಪುಟ ೯೪೩.

೨೧. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೨೦೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೨. ಅದೇ, ಪುಟ ೨೨೦.

೨೩. ಅದೇ, ಪುಟ ೨೨೦.

೨೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೪೪, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೫. ಅದೇ, ಪುಟ ೯೪೪.

೨೬. ಅದೇ, ಪುಟ ೯೪೪.

೨೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೫೦೯, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೮. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೫೨, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೯. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೨೨೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೩೦. ಅದೇ, ಪುಟ ೨೧೦–೨೧೧.

೩೧. ಅದೇ, ಪುಟ ೨೦೮.

೩೨. ಅದೇ, ಪುಟ ೨೦೮.

* * * * * *

## ೫.೨. ರಾಷ್ಟ್ರೀಯತೆಯ ವಿಚಾರಗಳು.

ಭಾರತ ಎದುರಿಸಿದ ಸಮಸ್ಯೆಗಳಲ್ಲಿ ವಸಾಹತುಶಾಹಿಯು ಒಂದು. ಇದರಿಂದ ಸ್ವಾತಂತ್ರ್ಯ ಸಂಪಾದನೆಯನ್ನು ಮಾಡುವುದು ನಾಡಿನ ಒಂದು ಅತಿ ಮುಖ್ಯ ಅಗತ್ಯವಾಗಿತ್ತು. ಸ್ವಾತಂತ್ರ್ಯ ಸಂಗ್ರಾಮಕ್ಕೆ ದುಮುಕಿದ ಹಲವರು ನೇರ ಪ್ರತಿರೋಧಕ್ಕೆ ಇಳಿದಿದ್ದರೆ ಮತ್ತಷ್ಟು ಜನ ಅದರಲ್ಲು ಸಾಹಿತಿಗಳು ಜನರನ್ನು ಎಚ್ಚರಗೊಳಿಸುವತ್ತ ದುಡಿದರು. ಅವರ ಪ್ರಖರ ನಿಲುವು ಇನ್ನಷ್ಟು ಮತ್ತಷ್ಟು ಸಂಗ್ರಾಮವು ತೀವ್ರಗೊಳ್ಳುವಂತೆ ಮಾಡಿತು.

ದೇಶೀಯ ಸಂಸ್ಕೃತಿಯೊಂದರ ಮೇಲೆ ಎರಗಿದ ವಿಶ್ವದ ರಾಜಕೀಯ ಚಿಂತನೆಗಳ ಆಕ್ರಮಣ ಗಳಿಗೆ ಹಾಗೂ ಅವುಗಳಿಂದ ಎದುರಾದ ಗೊಂದಲಗಳಿಗೆ ಸಾಹಿತ್ಯ ಮುಖಾಮುಖಿಯಾಗಬೇಕಾದ ಜರೂರನ್ನು ಒತ್ತಿ ಹೇಳುತ್ತಿದೆ. "ಪಾಂಚಜನ್ಯ", "ಕೋಗಿಲೆ ಮತ್ತು ಸೋವಿಯಟ್ ರಷ್ಯಾ" ಕವನ ಸಂಕಲನಗಳ ಮನೋಧರ್ಮ ಇಂಥ ಜರೂರುಗಳಿಂದ ಕೂಡಿದೆ.

'ಪಾಂಚಜನ್ಯ' ಶೀರ್ಷಿಕೆಯನ್ನುಳ್ಳ ಕವಿತೆ ಆ ಕಾಲದ ಯುವ ಸಂವೇದನೆಯನ್ನು ಸ್ವಾತಂತ್ರ್ಯ ಸಮರಕ್ಕೆ ಅಣಿಗೊಳಿಸುವ, ನವಭಾರತ ನಿರ್ಮಾಣಕ್ಕೆ ಅಗತ್ಯವಾದ ಮನೋಭೂಮಿಕೆಯನ್ನು ಬಿತ್ತುವ ಧೋರಣೆಯುಳ್ಳದ್ದಾಗಿದೆ. ಈ ಬಗೆಯ ಧೋರಣೆಗಳಲ್ಲಿ ಭಾರತೀಯ ನವೋದಯ ರಾಷ್ಟ್ರೀಯತೆಯ ಪರಿಕಲ್ಪನೆಗಳು ಪ್ರಕಟವಾಗುತ್ತವೆ. ವಿಜ್ಞಾನ ಹಾಗೂ ಪಾಶ್ಚಾತ್ಯ ವಿಚಾರಧಾರೆಯ ಸಂಸರ್ಗದಿಂದ ಎಚ್ಚೆತ್ತ ಭಾರತೀಯ ಸಂವೇದನೆ ಶೋಧಿಸಿಕೊಳ್ಳುತ್ತಿದ್ದ ಪ್ರಜ್ಞೆಯನ್ನು ಈ ಕವಿತೆಯಲ್ಲಿ ಕಾಣುತ್ತೇವೆ. ಶತ್ರುವಿನೊಂದಿಗೆ ಹೋರಾಟಕ್ಕೆ ಅಗತ್ಯವಾದ ಮನಸ್ಥಿತಿಯನ್ನು ದೇಶದ ಮೂಲೆಮೂಲೆಯಲ್ಲೂ ಎಚ್ಚರಿಸುತ್ತಿದ್ದ ನೆಲೆಗಳು ಇಲ್ಲಿ ಮೈಪಡೆಯುತ್ತವೆ. ಆ ನೆಲೆಗಳು ಯಾವ ಬಗೆಯವು ಎಂಬುದು ಈ ಕೆಳಗಿನ ಕವಿತೆಯ ಸಾಲುಗಳಲ್ಲಿಯೇ ವ್ಯಕ್ತವಾಗುತ್ತದೆ.

"ಭರತಖಂಡದ ಹಿತವೆ
ನನ್ನಹಿತ ಎಂದು,
.................................
ನುಗ್ಗು ಮುಂದಕ್ಕೆ, ವೀರ
ಸಗ್ಗದಾ ನೆಲೆಗೆ!
ನೋಡದೋ ನೋಡಲ್ಲಿ:
ದರ್ಪರಥದಡಿಯಲ್ಲಿ
ಹೊರಳುತಿರುವಳು ತಾಯಿ
ನೆತ್ತರಿನ ಪುಡಿಯಲ್ಲಿ!"[೨]

ಜಾತಿ, ಮತ, ದೇಶಗಳ ಅಂತರಗಳನ್ನು ಮರೆತು, ಭರತಮಾತೆಯ ಮುಕ್ತಿಯೇ ತನ್ನ ಮುಕ್ತಿ ಎಂದು ಪ್ರತಿಯೊಬ್ಬನೂ ತಿಳಿದು, ಸ್ವಾತಂತ್ರ್ಯ ಸಮರಕ್ಕೆ ಸಿದ್ಧವಾಗಬೇಕಾದ ಅನಿವಾರ್ಯತೆಯನ್ನು ಇಲ್ಲಿ ಕಾಣುತ್ತೇವೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಶ್ರೀ ಸಾಮಾನ್ಯನನ್ನು ಕ್ರಿಯಾಶೀಲವಾಗುವಂತೆ ಪ್ರೇರೇಪಿಸುವ ಇಂಥ ಪ್ರಕ್ರಿಯೆ 'ಕುಮಾರವ್ಯಾಸ'ನು ಹಾಡಿದನೆಂದರೆ ಕವಿತೆಯಲ್ಲಿ ಪ್ರಕಟಗೊಂಡಿರುವ ಸ್ವರೂಪ ಗಮನೀಯವಾದುದಾಗಿದೆ. ಮೇಲುನೋಟಕ್ಕೆ ಈ ಕವಿತೆ ಕುಮಾರವ್ಯಾಸನ ಕಾವ್ಯಾಸ್ವಾದನೆಯಂತೆ ಕಾಣುತ್ತದೆ. ಆದರೆ ಆಳದಲ್ಲಿ ಭಾರತದ ಸ್ವಾತಂತ್ರ್ಯ ಸಮರಕ್ಕೆ ಅಣಿಗೊಳಿಸುವ ಮನೋಭೂಮಿಕೆಯನ್ನೇ ಕುರಿತದ್ದಾಗಿದೆ.

ದೇಶ ದಾಸ್ಯಕ್ಕೆ ಒಳಗಾದ ಕಾರಣಗಳ ಅನ್ವೇಷಣೆ **ಇಂದಿನ ದೇವರು** ಕವಿತೆಯಲ್ಲಿ ಪ್ರಕಟವಾಗುತ್ತದೆ. ಪುರೋಹಿತಶಾಹಿ ಒಡ್ಡಿದ ಮೌಢ್ಯತೆಯಿಂದ ಜಡಶಿಲೆಗಳಿಗೆ ಪೂಜೆಗೈದು ದುಸ್ಥಿತಿಗೊಳಗಾದ ತನ್ನ ತಪ್ಪಿನ ಅರಿವನ್ನು ಕಾಣುತ್ತಲೆ, ತನ್ನ ದೈವದ ಅನ್ವೇಷಣೆ ಇಲ್ಲಿ ಎದುರಾಗುತ್ತದೆ. 'ನೂರು ದೇವರನೆಲ್ಲ ನೂಕಾಚೆ ದೂರ, ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಭಾರ' ಎನ್ನುವಲ್ಲಿ ಈ ಅನ್ವೇಷಣೆ ಮೈಪಡೆಯುತ್ತದೆ. ಇಂಥ ಅನ್ವೇಷಣೆಯಿಂದ ಪಾರಂಪರಿಕ ಜಡಮೌಲ್ಯಗಳಿಗೆ ತೋರುವ ತಿರಸ್ಕಾರ ಮತ್ತು ತನ್ನಲ್ಲಿ ತುಂಬಿಕೊಳ್ಳುವ ಅತ್ಮಸ್ಥೈರ್ಯ ತನ್ನ ಮತ್ತು ಭಾರತಾಂಬೆಯ ಅಸ್ತಿತ್ವದ ಬಗೆಗೆ ಚಿಂತಿಸುವಂತೆ ಮಾಡುತ್ತದೆ.

"ಭಾರತಿಯೆ ನಮಗಿಂದು ಜೀವನದ ದೇವತೆಯು,
ವಿಶ್ವರೂಪಿಣಿಯವಳು, ವಿಶ್ವಮುಖಿಯೈ!
ನಮ್ಮೆಲ್ಲರಂಗಗಳೆ ನಮ್ಮಂಬೆಯಂಗವೈ,
ನಮ್ಮ ಸ್ವತಂತ್ರ್ಯದೊಳೆ ನಮ್ಮಮ್ಮ ಸುಖಿಯೈ!

ಇಂದೊ ನಾಳೆಯೊ ದಾಸನೀಶನಾಗಲೇಬೇಕು,
ಎಂದಿಂದೆ ಎದ್ದೇಳು ; ನಾಳಯನೆ ಹೋಕು!
ನಾವೆ ದೇವತೆಗಳೈ! ಭಾರತವೆ ಸ್ವರ್ಗವೈ!
ಭಾರತಾಂಬೆಯೆ ನಮಗೆ ದೇವಿಯೈ, ಜನನಿ!"[೨]

ಈ ಮೇಲಿನ ಭಾಗದಲ್ಲಿ ಭಾರತಾಂಬೆಯನ್ನು ದೇವತೆಯನ್ನಾಗಿ ಕಾಣುವ, ಅವಳ ಸ್ವಾತಂತ್ರ್ಯದಲ್ಲಿಯೆ ತನ್ನ ಸುಖವನ್ನು ಕಾಣುವ ಆಶಯಗಳಿವೆ. ಸ್ವಾತಂತ್ರ್ಯದಿಂದ ಶ್ರೀ ಸಾಮಾನ್ಯನು ದೈವತ್ವಕ್ಕೆ ಏರುವ, ಭಾರತ ಸ್ವರ್ಗವಾಗುವ ಆಶಯವನ್ನು ಈ ಕವಿತೆ ತೀವ್ರವಾಗಿ ಪ್ರಕಟಿಸುತ್ತದೆ. ಅಂದರೆ 'ಇಂದೊ ನಾಳೆಯೊ ದಾಸನೀಶನಾಗಲೆ ಬೇಕು' ಎಂಬುದು ಇಲ್ಲಿಯ ಆಶಯ.

ಬ್ರಿಟಿಷ್ ಸಾಮ್ರಾಜ್ಯಶಾಹಿ ದೆಸೆಯಿಂದ ದೇಶಕ್ಕೆ ಒದಗಿದ ದುಸ್ಥಿತಿಗಳನ್ನು 'ಕಾಳರಾತ್ರಿ', 'ಭರತಮಾತೆ', 'ಭರತಮಾತೆಗೆ', 'ಭಾರತ ತಪಸ್ವಿನಿ' ಕವಿತೆಗಳಲ್ಲಿ ವಿಶ್ಲೇಷಿಸಲಾಗಿದೆ. 'ಕಾಳರಾತ್ರಿ' ಪ್ರತಿಮೆಯು ದೇಶಕ್ಕೆ ಒದಗಿದ ದುಸ್ಥಿತಿಯನ್ನು, ಅದರ ಕರಾಳತೆಯನ್ನು ಸಂಕೇತಿಸುತ್ತದೆ. ದೇಶೀಯ ಅನನ್ಯತೆಗಳಿಗೆ ಎದುರಾದ ಆಘಾತಗಳಿಂದ ಇಲ್ಲಿನ ಬದುಕು ತಲ್ಲಣಗೊಂಡಿದ್ದು ಇಂಥ ಕವಿತೆಗಳಲ್ಲಿ ಕಾಣುತ್ತದೆ.

ಈ ಸ್ವಾತಂತ್ರ್ಯ ಸಂಗ್ರಾಮ ಮತ್ತದರ ಲಕ್ಷ್ಯದ ಹಂಬಲ ಎಲ್ಲ ಭಾರತೀಯ ಕಾವ್ಯದಲ್ಲಿ ಅತ್ಯಂತ ತೀವ್ರವಾಗಿ ಮೈಪಡೆಯುತ್ತದೆ. ಸ್ವಾತಂತ್ರ್ಯ ಹೋರಾಟಕ್ಕೆ ಅತ್ಯಗತ್ಯವಾದ ಮನೋಭೂಮಿಕೆಯನ್ನು ಜನರಲ್ಲಿ ಮೂಡಿಸಿ ಅವರು ಎಚ್ಚೆತ್ತುಕೊಳ್ಳುವಂತೆ ಪ್ರೇರೇಪಿಸುವುದರ ಕಡೆಗೆ ಕಾವ್ಯ ತುಡಿಯುತ್ತದೆ. ಹಾಗೆ ತುಡಿಯುತ್ತಲೆ ಸ್ವಾತಂತ್ರ್ಯ ಸಂಪಾದನೆಗೆ ಅಗತ್ಯವಾದ ತರುಣ ಶಕ್ತಿಯ ಗಮನ ಸೆಳೆಯುವಲ್ಲಿ ಕ್ರಿಯಾಶೀಲವಾಗುತ್ತದೆ ಎಂದು ಭಾವಿಸುವುದು ಅಪೇಕ್ಷಣೀಯವಲ್ಲ. ಆದರೆ ವಸಾಹತು ಸಂಸ್ಕೃತಿಯ ಆಕ್ರಮಣಶೀಲ ನೆಲೆಗಳನ್ನು, ಅದರ ಕ್ರೌರ್ಯದ ಬಗೆಗಳನ್ನು ವಿಶ್ಲೇಷಣೆಗೆ ಗುರಿಪಡಿಸುವ ಕಾವ್ಯವೂ ಅದೇ ದಿಕ್ಕಿನಲ್ಲಿ ತುಡಿಯುತ್ತಿದೆ ಎಂದು ಭಾವಿಸುವುದು ಸರಿಯಾಗುತ್ತದೆ.

೧೯೨೪ಕ್ಕೆಲ್ಲ ಕುವೆಂಪು ಅವರ ಏಲಿಯನ್ ಹಾರ್ಪ್ ಕವನ ಸಂಕಲನ ಪ್ರಕಟಿಸಿದ್ದ ಕುವೆಂಪು ಕವಿಮನ ಈ ಸಂಗ್ರಾಮದೆಡೆಗೆ ಹೇಗೆ ತುಡಿದಿತ್ತು ಎನ್ನುವುದನ್ನು ಇಲ್ಲಿ ಚರ್ಚಿಸಲಾಗಿದೆ. ಉದಾಹರಣೆಗೆ ನಾವು Jallianwala-Bagh ಕವಿತೆಯನ್ನು ನೋಡಬಹುದು.

ಜಲಿಯನ್‌ವಾಲಾ ಭಾಗ್ ಹತ್ಯಾಕಾಂಡ ನಡೆದು ಇಂದಿಗೆ (೧೩.೪.೨೦೧೯) ೧೦೦ ವರ್ಷಗಳಾದವು. ೧೯೧೯ರ ಏಪ್ರಿಲ್ ೧೩ರಂದು ನಡೆದ ಈ ಹತ್ಯಾಕಾಂಡ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಅಧ್ಯಾಯ. ಕುವೆಂಪು ಅವರ ಜಲಿಯನ್‌ವಾಲಾ ಭಾಗ್ ಹತ್ಯಾಕಾಂಡ ಎಂಬ ಈ ಇಡೀ ಕವಿತೆ ಕರುಳ ಬಳ್ಳಿಯ ನೆಲೆಯುಳ್ಳದ್ದಾಗಿದೆ. ಇದರಲ್ಲಿ ಮಾತೃಹೃದಯದ ಅಳಲಿದೆ. ಜೊತೆಗೆ ಕಂದನ ಕೊಂದ ಪಾತಕಿಯ ಸಂಹಾರಕ್ಕೆ ನರಕದಧಿಪತಿಗಳು ಮೇಲಿಂದ ಇಳಿದು ಬರಬೇಕೆಂಬ ಕೇಳ್ಕೆಯಿದೆ. 'ಜಲಿಯನ್‌ವಾಲಾ ಭಾಗ್' ಹತ್ಯಾಕಾಂಡವು ಬ್ರಿಟಿಷರ ಆಳ್ವಿಕೆಯಲ್ಲಿ ನಡೆದ ಅತ್ಯಂತ ಕಟು ಕ್ರೂರವೂ ಭೀಕರವೂ ಆದ ನರಹತ್ಯೆ. ಜಲಿಯನ್‌ವಾಲಾ ಬಾಗ್ ಎಂಬ ಮೈದಾನದಲ್ಲಿ ಬ್ರಿಟಿಷ್ ಸರಕಾರದ ಅಮಾನವೀಯ ಕಾನೂನಿನ ವಿರುದ್ಧ ಪ್ರತಿಭಟಿಸಲು ಸುಮಾರು ೨೦,೦೦೦ಕ್ಕಿಂತಲೂ ಹೆಚ್ಚು ಜನ ನಿಶ್ಶಸ್ತ್ರರಾಗಿ ಸೇರಿದ್ದರು. ಸುತ್ತಲೂ ಎತ್ತರದ ಗೋಡೆಗಳಿಂದ ಆವೃತವಾಗಿದ್ದ ಕಿರಿದಾದ ಪ್ರವೇಶದ್ವಾರವನ್ನು ಹೊಂದಿದ್ದ ಈ ಮೈದಾನಕ್ಕೆ ಬೈಸಾಕಿ ಹಬ್ಬದ ಸಂತೋಷದಲ್ಲಿದ್ದ ಅಮೃತಸರ್‌ನ ಸುತ್ತಲಿನ ಊರುಗಳ ಜನ ಸೇರಿದ್ದರು. ಪಂಜಾಬ್‌ನ ಲೆಫ್ಟಿನೆಂಟ್ ಗವರ್ನರ್ ಮೈಕೆಲ್ ಇಡ್ವೈಯರ್‌ನ ಸುಪರ್ದಿಯಲ್ಲಿ, ಸೇನೆಯ ಕರ್ನಲ್ ರೆಜಿನಾಲ್ಡ್ ಡಯರ್ ಸಭೆಗೆ ಬಂದಿದ್ದ ಅಮಾಯಕ ಜನರನ್ನು ಬಲಿ ತೆಗೆದುಕೊಳ್ಳಲು ಮೊದಲೇ ಸಂಚು ರೂಪಿಸಿದಂತಿತ್ತು. ಗುಂಪು ಸೇರುವುದನ್ನು ತಡೆಯದ ಡಯರ್‌ನ ಸೈನ್ಯ

ಜನ ಮೈದಾನದಲ್ಲಿ ಸೇರುವವರೆಗೂ ಸುಮ್ಮನಿದ್ದು, ಮೊದಲೇ ಇಕ್ಕಟ್ಟಾದ ಏಕೈಕ ದಾರಿಗೆ ಅಡ್ಡವಾಗಿ ಗನ್ನುಗಳೇ ತುಂಬಿದ್ದ ತನ್ನ ಜೀಪನ್ನು ಅಡ್ಡವಿರಿಸಿದ್ದ. ಡಯರ್ ನೇತೃತ್ವದ ಸುಮಾರು ೫೦ ಜನ ಶಸ್ತ್ರಸಹಿತ ಸೈನಿಕರು ಜನರಿಗೆ ಕನಿಷ್ಟಪಕ್ಷ ಚದುರಲು ಎಚ್ಚರಿಕೆಯನ್ನೂ ನೀಡದೆ ನೇರವಾಗಿ ಗುಂಡಿನ ಸುರಿಮಳೆಗರೆದರು. ಜನರು ಮೈದಾನದಿಂದ ಹೊರಹೋಗುವಂತೆಯೂ ಇಲ್ಲ. ನೋಡ ನೋಡುತ್ತಿದ್ದಂತೆಯೇ ನೂರಾರು ಜನ ನೆಲಕ್ಕುರುಳಿದರು. ಗಾಯಗೊಂಡವರ ಆಕ್ರಂದನ ಮುಗಿಲು ಮುಟ್ಟಿತು. ಗುಂಡಿನ ದಾಳಿಯಿಂದ ಪಾರಾಗಲು ಓಡುವಾಗ ಕಾಲ್ತುಳಿತಕ್ಕೆ ಸಿಕ್ಕಿ ಮರಣ ಹೊಂದಿದವರು ನೂರಾರು ಜನ. ಕೆಲವರು ಎತ್ತರದ ಗೋಡೆಯನ್ನು ಹಾರಲು ಹೋಗಿ ಡಯರ್‌ನ ಸೈನಿಕರ ಗುಂಡಿಗೆ ಬಲಿಯಾದರು. ಮೈದಾನದಲ್ಲಿ ಪಕ್ಕದಲ್ಲಿದ್ದ ಬಾವಿಯೊಳಗೆ ಹಾರಿ ಪ್ರಾಣ ಉಳಿಸಿಕೊಳ್ಳಬಹುದೆಂದು ಹಾರಿದವರೂ ಬದುಕುಳಿಯಲಿಲ್ಲ. ೧೬೫೦ ಸುತ್ತುಗಳ ಗುಂಡು ಹಾರಿಸಿದ ಬ್ರಿಟಿಷ್ ಸೈನಿಕರು ಅಕ್ಷರಶಃ ರಾಕ್ಷಸರಾಗಿ ವರ್ತಿಸಿದ್ದರು. ಆ ಬಳಿಕ ಡಯರ್ ಅಮೃತಸರ ನಗರದಲ್ಲಿ ಕರ್ಫ್ಯೂವಿಧಿಸಿ ಸೈನ್ಯ ನಿಯೋಜಿಸಿ ಬೀದಿಗಳಲ್ಲಿ ಜನ ತಿರುಗಾಡಿದರೆ ಗುಂಡು ಹಾರಿಸುವ ಆದೇಶ ನೀಡಿದ. ಇದರಿಂದ, ಗಾಯಗೊಂಡು ಮೈದಾನದಲ್ಲಿ ಬಿದ್ದಿದ್ದವರನ್ನು ಆಸ್ಪತ್ರೆಗೆ ಸೇರಿಸಲೂ ಸಾಧ್ಯವಾಗದೆ ನೂರಾರು ಜನ ರಾತ್ರಿಯೆಲ್ಲಾ ರಕ್ತ ಹರಿದು ಪ್ರಾಣ ಕಳೆದುಕೊಂಡರು. ಕ್ರೌರ್ಯ ಮೆರೆದ ಡಯರ್ ಆಗಲಿ, ಪಂಜಾಬ್‌ನ ಗವರ್ನರ್ ಆಗಲಿ ಈ ಘಟನೆಯ ಬಗ್ಗೆ ಪಶ್ಚಾತಾಪದ ಸಣ್ಣ ಸೆಲೆಯನ್ನೂ ಕಾಣಿಸಲಿಲ್ಲ. ಈ ಘಟನೆ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಒಂದು ರಕ್ತರಂಜಿತ ಕ್ರೌರ್ಯ ಮಾತ್ರವಾಗಿ ಉಳಿಯದೆ ಭಗತ್‌ಸಿಂಗ್, ಉಧಮ್ ಸಿಂಗ್ ಮೊದಲಾದ ಕ್ರಾಂತಿಕಾರಿ ತರುಣರು ಭರತ ಭೂಮಿಯನ್ನು ರಕ್ತಪಿಪಾಸು ಬ್ರಿಟಿಷ್ ಕೈಗಳಿಂದ ಬಿಡುಗಡೆಗೊಳಿಸುವ ಸಂಕಲ್ಪಗೈಯಲು ಕಾರಣವಾದುದು ಚರಿತ್ರೆಯ ಪುಟಗಳಲ್ಲಿ ದಾಖಲಾದ ಸತ್ಯ. ಆ ಕ್ರೋಧದಿಂದ ಉದ್ಭವಿಸಿದ ಕವಿ ಹೃದಯದ ಅಭಿಶಾಪ ಈ ಕವನದಲ್ಲಿ ಮೂರ್ತಿವತ್ತಾಗಿದೆ.

> "Hell, open wide thy lakes of fire!
> Blaze forth thy eternal ire!
> Belch hideous torches from the caves"[3]

ಈ ಜನರಾದರೋ ಎಂಥವರು, ನೋಡಿ, ಅಲ್ಲಿ ಸೇರಿದ್ದವರು ನಿಶ್ಶಸ್ತ್ರರಾಗಿದ್ದ ಸತ್ಯಾಗ್ರಹಿಗಳು. ನೋಡ ನೋಡುತ್ತಿದ್ದಂತೆಯೇ ನೂರಾರು ಜನ ನೆಲಕ್ಕುರುಳಿದರು. ಗಾಯಗೊಂಡವರ ಆಕ್ರಂದನ ಮುಗಿಲು ಮುಟ್ಟಿತು. ಗುಂಡಿನ ದಾಳಿಯಿಂದ ಪಾರಾಗಲು ಓಡುವಾಗ ಕಾಲ್ತುಳಿತಕ್ಕೆ ಸಿಕ್ಕಿ ಮರಣ ಹೊಂದಿದವರು ನೂರಾರು ಜನ. ಮನುಕುಲ ಕಂಡ ಕರಾಳ ಹಿಂಸಾಕಾಂಡದಲ್ಲಿ ಪ್ರಾಣ ಕಳೆದುಕೊಳ್ಳುತ್ತಿದ್ದ ಅಮಾಯಕರ ಮರಣಾಕ್ರಂದನ ಕೇಳಿಸುತ್ತದೆ.

"Dismal and dark over the graves
Of heart-less tyrants, hellish knaves
Who lick the blood of human wounds
Like cruel, horrid, hellish hounds,
And open fire on guiltless souls,
And lynch the noblest men in goals!"[4]

ಅಂತಹ ನಾಗರೀಕರ ಮೇಲೆ ಬ್ರಿಟೀಷ್ ಪ್ರಭುತ್ವ ಗುಂಡಿನ ಮಳೆ ಸುರಿಸಿತ್ತು. ಇಲ್ಲಿ ಕವಿ ಬ್ರಿಟೀಷ್ ಅಧಿಕಾರಿಗಳನ್ನು ಮತ್ತು ಅವರ ಸೈನ್ಯವನ್ನು ಒಂದು ಕ್ರೂರ ಸೀಳುನಾಯಿಗೆ ಹೋಲಿಸಿ ನರ ಮನುಷ್ಯರ ರಕ್ತ ಕುಡಿಯುವ ನರಭಕ್ಷಕರವರು ಎಂದು ಸಂಭೋದಿಸುತ್ತಿದ್ದಾರೆ. ಅಲ್ಲಿ ಹರಿದಿದ್ದು ದೇಶಭಕ್ತರ ರಕ್ತದ ಓಕುಳಿ. ಭಾರತಮಾತೆಯ ಬಂಧಮುಕ್ತಿಯ ಸಂಗ್ರಾಮದಲ್ಲಿ ಮಾತೆಯ ಮಡಿಲಿಗೆ ಅರ್ಪಿತವಾದ ಅಮೂಲ್ಯ ಕುಸುಮಗಳು ಅವರು. ಇಂಥವರು ಕ್ಷಮಾರ್ಹರಲ್ಲ ಆದ್ದರಿಂದಲೇ ಕವಿಯ ಪ್ರಾರ್ಥನೆ ಮುಂದುವರಿದಿದೆ:

"Tear them to pieces, O ye Fates,
And scatter them beside the gates
Of in and Death! Let hell consume
Them all, in one embrace of gloom :
Let that be their eternal doom!"[5]

ಈ ಅಹವಾಲು ಕಾರ್ಯವನ್ನು ಮುಗಿಸಲೇಬೇಕೆಂಬ ಸಿಟ್ಟಿನಿಂದ ಕೂಡಿರುವುದು. ಕವಿ ವಿಧಿಗೆ ತಾಕೀತು ಮಾಡುತ್ತಿದ್ದಾರೆ ಆ ನರಭಕ್ಷಕರನ್ನು ಹರಿದು ಚಿಂದಿಮಾಡಿಬಿಡು, ಅವರನ್ನು ಆಪೋಶನ ತೆಗೆದಿಕೋ ನನ್ನಲ್ಲಿರುವ ಆ ಕಿಚ್ಚು ನಿನ್ನಲ್ಲುಂಟೇನೆಂದು ಕೇಳುವ ಕವಿ ಹೃದಯದ ಮಾತು ಕೇಳಿ:

"O Hell, hast thou eternal fire
To annihilate satanic Dyer?
O Ixion, can thy mighty wheel
Torture the hound that did not feel
For babes limb-strewn, shot-down, and gory,
The modern gastlier Mohammud Ghory?

Let deadlier weapons on him be used
For all the hellish power he abused!

O heavenly guns, belch stygian fire

From your entrails on hell-doomed Dyer"6

ಡೈಯರನ ಗುಣಗಳನ್ನು ಬಣ್ಣಿಸುವ ಕ್ರಮವೇ ಆಡಳಿತಶಾಹಿಯ ಮೇಲೆ ಬಂದಿರುವ ಸಿಟ್ಟಿನ ಬೆಂಕಿಗೆ ಎಣ್ಣೆ, ತುಪ್ಪ ಸುರಿಯುವಂಥದು:

"The foe of virtue, friend of vice
Who plucked the children off their eyes;
The source of all un-thought-of crimes,
The demon of all times and climes!
What darker hell and Stygian fire
Reside in thee, O Hell doomed Dyer?"7

ಈ ಕವಿತೆ ಯಾರಲ್ಲಾದರೂ ಶೋಕವನ್ನೂ, ಆ ಶೋಕರಸದಿಂದ ಉತ್ಪನ್ನವಾದ ಕ್ರೋಧವನ್ನೂ ಉಂಟು ಮಾಡಬಲ್ಲುದು. ಕವಿಯ ಈ ಕೆಲಸ ಸಂಗ್ರಾಮಕ್ಕೆ ಇಳಿಯುವಂಥದೇ, ಪ್ರೇರಿಸುವಂಥದೇ ಆಗಿದೆ.

ಸ್ವಾರಸ್ಯದ ಸಂಗತಿಯೆಂದರೆ ಸ್ವಾತಂತ್ರ್ಯ ಸಂಗ್ರಾಮವನ್ನೂ ಒಳಗೊಂಡಂತೆ, ನಂತರದಲ್ಲೂ ನಡೆಯುತ್ತಿದ್ದ ಭಾಷಿಕ ಚಳುವಳಿ, ಏಕೀಕರಣ ಚಳುವಳಿಯಂಥ ಯಾವುದೇ ಮಹತ್ವದ ಚಳುವಳಿಗಳಲ್ಲಿ ಭೌತಿಕವಾಗಿ ಕುವೆಂಪು ಭಾಗವಹಿಸಲಿಲ್ಲ. ಆದರೆ ಪ್ರಮುಖವಾದ ಚಳುವಳಿಗಳೆಲ್ಲಾ ಅವರು ಅಂತಃಶಕ್ತಿಯಾಗಿ ಚಳವಳಿಗಾರರಿಗೆ ಸ್ಫೂರ್ತಿ ಚಿಲುಮೆಯಾಗಿದ್ದವರು. ಜಾಥಾ, ಮೆರವಣಿಗೆಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸದಿರುವುದನ್ನೆ ಬಹುದೊಡ್ಡ ಕೊರತೆಯೆಂದು ಗುರುತಿಸುವ ಅಗತ್ಯವಿಲ್ಲ. ಅವರು ಕೂಡ ಕೆಲ ಚಳುವಳಿಗಳಲ್ಲಿ ಭಾಗವಹಿಸಿದ್ದಾರೆ, ಭಾಗವಹಿಸಿದಂತಹ ಎರಡು ಪ್ರಮುಖ ಚಳುವಳಿಗಳೆಂದರೇ, ಒಂದನೆಯದು– ಫೆಬ್ರವರಿ ೨೨ ೧೯೨೧ರಲ್ಲಿ ಶ್ರೀ ಗೌರೀಶಂಕರ ಮಿಶ್ರ ಅವರು ಮೈಸೂರಿಗೆ ಆಗಮಿಸಿದ್ದರು, ಅಲ್ಲಿ ಅವರ ಬಹಿರಂಗ ಭಾಷಣ ಕೇಳಲು ಕುವೆಂಪು ಮತ್ತವರ ಸ್ನೇಹಿತರು ತೆರಳಿದ್ದರು, ಆಗ ಅವರ ಭಾಷಣ ಎಷ್ಟು ಉತ್ತೇಜಕ ಮತ್ತು ಸ್ಫೂರ್ತಿಕರವಾಗಿತ್ತೆಂದರೆ ಹೈಸ್ಕೂಲಿನಲ್ಲಿ ಓದುತಿದ್ದ ಪುಟ್ಟ ಕುವೆಂಪು ಅವರಂತಹ ಎಷ್ಟೋ ತರುಣೋಪಾದಿಯಲ್ಲಿ ತಮ್ಮ ತಮ್ಮ ಟೋಪಿ ಕೋಟುಗಳನ್ನು ಬೆಂಕಿಗೆ ಎಸೆದುಬಿಟ್ಟಿದ್ದರು (ವಿದೇಶಿ ವಸ್ತ್ರ ದಹನ), ಎರಡನೆಯದು– ಕುವೆಂಪು ಅವರು ಮೊದಲನೆಯ ವರ್ಷದ ಬಿ.ಎ. ತರಗತಿಯಲ್ಲಿ ಓದುತ್ತಿದ್ದಾಗ ೧೯೨೪ನೆಯ ಡಿಸೆಂಬರ್ ತಿಂಗಳ ಉತ್ತರಾರ್ಧದಲ್ಲಿ ಬೆಳಗಾಂನಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ ನಡೆಯುತ್ತದೆ, ಆ ಅಧಿವೇಶದ ಅಧ್ಯಕ್ಷತೆಯನ್ನು ಮಹಾತ್ಮ ಗಾಂಧೀಜಿಯವರು ವಹಿಸಿರುತ್ತಾರೆ, ಆ ಸಮಾವೇಶಕ್ಕೆ ಕುವೆಂಪು ಮತ್ತು ಅವರ ಸ್ನೇಹಿತರು ತೆರಳುತ್ತಾರೆ ಅಲ್ಲಿ ಅವರುಗಳು ಗಾಂಧೀಜಿಯವರ ಮಾತುಗಳನ್ನು ಕೇಳಿ ಬಹಳವಾಗಿ

ಪ್ರೇರಿತರಾಗಿರುತ್ತಾರೆ, ಅವರ ಮಾತುಗಳಲ್ಲಿಯೇ ಹೇಳಬೇಕೆಂದರೆ– ಅವರು ಅಂದೇ ಸ್ವಾತಂತ್ರ್ಯ ದೀಕ್ಷೆಯನ್ನು ತೊಟ್ಟು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮ್ಮಿಕ್ಕುವ ಭಾರತೀಯ ಸಮಷ್ಟಿ ಚೈತನ್ಯದ ಅಗ್ನಿಸ್ಪರ್ಶ ತಮ್ಮ ಕವಿಚೇತನಕ್ಕೂ ತಗುಲಿತ್ತೆಂದು. ಇದಾದ ಮೇಲೆ ಅವರು ಇನ್ನಾವ ಚಳುವಳಿಗಳಿಗೆ ಹೋಗಿರುವ ಉಲ್ಲೇಖವಿಲ್ಲ, ಆದರೆ ಕುವೆಂಪು ಚಳುವಳಿಗಳಲ್ಲಿ ಭೌತಿಕವಾಗಿ ಒಂದು ಅಂತರವನ್ನು ಇಟ್ಟುಕೊಂಡಿದ್ದರೂ, ಮಾನಸಿಕವಾಗಿ ಅವುಗಳೊಂದಿಗೆ ಒಂದಾಗಿ, ತಮ್ಮ ಬರವಣಿಗೆಗಳ ಮೂಲಕ ಉಂಟು ಮಾಡಿದ ಕ್ರಾಂತಿ ಬಹು ದೊಡ್ಡದು.  ಜನಮಾನಸದ ಬಲವನ್ನು ಒಗ್ಗೂಡಿಸುವಂಥ ಪ್ರಭಾವಶಾಲಿ ಬರವಣಿಗೆಯನ್ನು ಕೊಟ್ಟಿರುವುದೇ ಅವರು ಚಳುವಳಿಗಳಿಗೆ ಇತ್ಯಾತ್ಮಕವಾಗಿ ಸ್ಪಂದಿಸಿದ್ದನ್ನು ತೋರಿಸುತ್ತದೆ.  ಇದನ್ನೆ ಕುವೆಂಪು ತಮ್ಮ ಮಾತುಗಳಲ್ಲಿ ಸ್ಪಷ್ಟಪಡಿಸಿರುವುದನ್ನು ಕಾಣಬಹುದು:

"ನಾನು ಲಾಟಿಯೇಟು ತಿಂದಿಲ್ಲ; ಸೆರೆಮನೆಗೆ ಹೋಗಿಲ್ಲ... ಆದರೆ ದೇಶದಲ್ಲಿ ನಡೆಯುತ್ತಿದ್ದುದು ಏನು ಎಂಬುದರ ಅರ್ಥದ ಅರಿವು ಮಲೆನಾಡಿನ ಕಾಡಿನ ಮೂಲೆಯ ಹಳ್ಳಿಯಿಂದ ಬಂದಿದ್ದ ಬಾಲಕನ ಗ್ರಾಮೀಣ ಪ್ರಜ್ಞೆಗೆ ಗೋಚರವಾದ ಮೇಲೆ, ಸುಮಾರು ೧೯೨೪–೨೬ ರಿಂದ ೧೯೪೭–೪೮ರವರೆಗೆ ನಡೆದ ಭಾರತದ ಜಗನ್ಮಹಾದ್ಭುತ ಸ್ವಾತಂತ್ರ್ಯ ಸಂಗ್ರಾಮದ ಚಿತ್ಸಾಗರದಲ್ಲಿ ನನ್ನ ಕವಿಚೇತನ ಸಮುದ್ರ ಸಂಪೂರ್ಣ ಮಗ್ನವಾಗಿಬಿಟ್ಟಿತ್ತು... ಪ್ರತಿಫಲವಾಗಿ ಸಾವಿರಾರು ಕವನ ರಾಶಿ, ಪುಂಜೀಭೂತವಾದವು, ... ಆ ಕಾಲದಲ್ಲಿ ನಡೆದ ಯಾವ ಘಟನೆಯೂ ಬಹುಶಃ ನನ್ನ ಲೇಖನಿಯಿಂದ ವಂಚಿತವಾಗಿಲ್ಲ. ಅರವತ್ತು ದಿವಸದ ಉಪವಾಸ ನಂತರ ಜೈಲಿನಲ್ಲಿಯೇ ಹುತಾತ್ಮನಾದ ಜಿತೇಂದ್ರನಾಥ ದಾಸನಿಂದ ೨೦.೯.೧೯೨೯ರಲ್ಲಿ ಪ್ರೇರಿತವಾದ 'ಪಾಂಚಜನ್ಯ' ಎಂಬ ವೀರ ಕವನದಿಂದ ಹಿಡಿದು ೧೯೪೭ನೆಯ ಆಗಸ್ಟ್ ೧೫ರ ಮಧ್ಯರಾತ್ರಿಯ ಜಗದ್ ಭವ್ಯ ಮಹಾ ಸಮಾರಂಭದಲ್ಲಿ ಪ್ರಚೋದಿತವಾದ 'ಸ್ವಾತಂತ್ರ್ಯೋತ್ಸವ ಮಹಾಪ್ರಗಾಥ'ದವರೆಗೂ ವ್ಯಾಪಿಸಿದೆ ಈ ಜ್ಯೋತಿ ಪಂಕ್ತಿ.೮ – ಕುವೆಂಪು ಅವರ ರಾಷ್ಟ್ರಪ್ರೇಮ ಗೀತೆಗಳು ಸ್ವಾತಂತ್ರ್ಯ ಸಂಗ್ರಾಮ ಕಾಲಕ್ಕಷ್ಟೇ ಅಲ್ಲ, ಎಲ್ಲ ಕಾಲಕ್ಕೂ ಸಲ್ಲುತ್ತದೆ.

ಕುವೆಂಪು ಅವರು ಸಮಾಜಮುಖಿ ಮತ್ತು ಆತ್ಮೋದ್ಧಾರದ ಆದರ್ಶಗಳನ್ನು ಗೌರವಿಸುತ್ತಿದ್ದರು. ಇದಕ್ಕೇ ಅವರು ಗಾಂಧೀಜಿ, ಪರಮಹಂಸರು, ಅರವಿಂದರು, ವಿವೇಕಾನಂದ ಮುಂತಾದವರನ್ನು ನೋಡುತ್ತಿದ್ದ ಬಗೆಯೇ ಸಾಕ್ಷಿ. ಅವರುಗಳ ಸಾಲಿನಲ್ಲಿ ದೇಶಬಂಧು ಚಿತ್ತರಂಜನ್ ದಾಸ್ ಅವರೂ ಸೇರುತ್ತಾರೆ. ಇವರೆಲ್ಲರನ್ನು ಕುರಿತು ಕುವೆಂಪು ಬರೆದ ಕವಿತೆಗಳು ಈ ಕಲಿಗಳ ಸಾಧಕರ ದೇಶಭಕ್ತಿ, ಆಧ್ಯಾತ್ಮಿಕ ಸಂಸ್ಕಾರ, ದೈವತ್ವ ಕುರಿತ ವಿಚಾರಗಳನ್ನು ತುಂಬು ಹೃದಯದಿಂದ ಬಣ್ಣಿಸುತ್ತವೆ.  ಆದರ್ಶ ಜೀವಿಗಳ ಇತಿವೃತ್ತಗಳು ಸಹ ರಾಷ್ಟ್ರಭಕ್ತಿಯನ್ನು ಶುದ್ಧ ಬದುಕನ್ನು ಉದ್ದೀಪಿಸುವಂಥವೇ ಆಗಿವೆ ಎನ್ನುವುದು ಗಮನಿಕೆಗೆ ಅರ್ಹವಾಗಿವೆ.

**ಚಿತ್ತರಂಜನ್ ದಾಸ್** ಅವರು ೫.೧೧.೧೮೭೦ರಲ್ಲಿ ಬಂಗಾಳದಲ್ಲಿ ಜನಿಸಿದರು. ಅವರು ಭಾರತೀಯ ರಾಷ್ಟ್ರೀಯ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದವರು. ಭಾರತದ

ಬ್ರಿಟಿಷ್ ಆಕ್ರಮಣದ ವಿರುದ್ಧವಾಗಿ ಸ್ಥಾಪಿತವಾದ ಬಂಗಾಳದ ಸ್ವರಾಜ್ (ಸ್ವಾತಂತ್ರ್ಯ) ಪಕ್ಷದ ಸ್ಥಾಪಕ-ಮುಖಂಡರಾಗಿದ್ದರು. ವೃತ್ತಿಯಲ್ಲಿ ವಕೀಲರಾಗಿದ್ದ ಅವರು ದೇಶಬಂಧು (ರಾಷ್ಟ್ರದ ಸ್ನೇಹಿತ) ಎಂದೇ ಜನಪ್ರಿಯರಾಗಿದ್ದರು. ದಾಸ್ ಅವರ ಮಾರ್ಗದರ್ಶಿಯಾಗಿದ್ದ ಸುಭಾಷ್ ಚಂದ್ರ ಬೋಸ್ ಅವರು ಸಂಪಾದಿಸುತ್ತಿದ್ದ ಇಂಗ್ಲಿಷ್ ವಾರಪತ್ರಿಕೆಯು ಮೊದಲು 'ಫಾರ್ವರ್ಡ್' ಎಂದು ಹೆಸರುಗೊಂಡಿದ್ದು ನಂತರ 'ಲಿಬರ್ಟಿ ಟು ಫೈಟ್' (ಸ್ವಾತಂತ್ರ್ಯಕ್ಕೆ ಹೋರಾಟ) ಎಂದು ಮರು ನಾಮಕರಣಗೊಂಡಿತ್ತು. ಆ ಪತ್ರಿಕೆಯಲ್ಲಿ ದಾಸ್ ಅವರು ಸ್ವಾತಂತ್ರ್ಯಕ್ಕೆ ಹೋರಾಡಲೆಂದು ಸ್ಥಾಪಿತವಾದ ಸ್ವರಾಜ್ ಪಕ್ಷದ ಆದರ್ಶಗಳ ಕುರಿತು ಬೋಧಕರವಾದ ಲೇಖನಗಳನ್ನು ಬರೆಯುತ್ತಿದ್ದರು. ಚಿತ್ತರಂಜನ್ ದಾಸ್ ಅವರ ವಿಚಾರಪ್ರದವಾದ ಬರಹಗಳಿಂದ ಕುವೆಂಪು ಬಹಳ ಪ್ರಭಾವಿತರಾಗಿದ್ದರು. ಸಾಮ್ರಾಜ್ಯಶಾಹಿಯ ಹಿಡಿತದಿಂದ ದೇಶ ಮತ್ತು ದೇಶವಾಸಿಗಳು ಬಿಡುಗಡೆ ಬಯಸುವ ಮಹತ್ವಾಕಾಂಕ್ಷೆ ತರುಣ ಕುವೆಂಪು ಅವರಲ್ಲಿ ಬಲಗೊಂಡಿತ್ತು. ಆಗ ಇಡೀ ದೇಶವೇ ಗಾಂಧೀಜಿಯವರ ರಾಷ್ಟ್ರೀಯ ಮನೋಭಾವ, ತ್ಯಾಗ, ಮೌಲ್ಯನಿಷ್ಠೆಗಳಿಂದ ಪ್ರಭಾವಕ್ಕೊಳಗಾಗಿತ್ತು. ಆ ಸಂದರ್ಭದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ಗಾಂಧೀಜಿ ವಹಿಸುತ್ತಾರೆಂದು ತಿಳಿದು ಕುವೆಂಪು ಮತ್ತವರ ಮಿತ್ರರು ಗಾಂಧೀಜಿ ಅವರ ದರ್ಶನಕ್ಕೆಂದೇ ಬೆಳಗಾವಿಗೆ ಹೋಗುವರು. ಮೂರು ನಾಲ್ಕು ದಿನಗಳ ಕಾಲ ನಡೆದ ಅಧಿವೇಶನ ಅವರ ದೇಶದ ಮೇಲಿನ ಪ್ರೇಮವನ್ನು ಇಮ್ಮಡಿಯಾಗಿಸುತ್ತದೆ.

ಕುವೆಂಪು ಅವರೇ ತಮ್ಮ ನೆನಪಿನ ದೋಣಿಯಲ್ಲಿ ಈ ಸನ್ನಿವೇಶದ ಬಗ್ಗೆ ಹೀಗೆ ಉಲ್ಲೇಖ ಮಾಡಿದ್ದಾರೆ :

ಮೂರು ನಾಲ್ಕು ದಿನಗಳ ಅಧಿವೇಶದಲ್ಲಿ ನಾವು ಪ್ರೇಕ್ಷಕ ಭಾಗಿಗಳಾಗಿದ್ದೆವು. ನನ್ನ ನೆನಪಿನಲ್ಲಿ ಆ ಸ್ವಾರಸ್ಯದ ವಿವರಗಳಾವುವೂ ಇಲ್ಲ. ಆದರೆ ಸ್ವಾತಂತ್ರ್ಯ ದೀಕ್ಷೆಯನ್ನು ತೊಟ್ಟು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮ್ಮಿಕ್ಕುವ ಭಾರತೀಯ ಸಮಷ್ಟಿ ಚೈತನ್ಯದ ಅಗ್ನಿಸ್ಪರ್ಶ ನನ್ನ ಕವಿಚೇತನಕ್ಕೂ ತಗುಲಿತ್ತು. ತತ್ಕಾಲದಲ್ಲಿ ರಚಿಸಿದ ಕೆಲವು ಇಂಗ್ಲಿಷ್ ಕವನಗಳೂ, ಆ ದೀಕ್ಷೆಗೆ ಸಾಕ್ಷಿ ನಿಂತಿವೆ. Jallianwala-Bagh ಮತ್ತು To Deshabandhu Das ಎಂಬೆರಡನ್ನು ಇಲ್ಲಿ ಉದಾಹರಿಸುತ್ತೇನೆ."[4]

ಅವರ ದಾಸ್ ಅವರನ್ನು ಕುರಿತ ಕವಿತೆ ಹೀಗೆ ಸಾಗುತ್ತದೆ:

"Eternal Spirit, freedom's champion, Das,
Thy heavenly path be strewn with flowers divine!
Infinite, peace and bliss sublime be thine!
Majestic as the great Himalayas
Thou wert : heaven was thy crown ; earth's thorny pass

Thy foot-stool sweet. Here, doth thy glory shine;
There, thou that glory art, No bars nor chain,
Nor selfish aim e'er stained thy splendour's mass."[10]

ಸ್ವಾತಂತ್ರ್ಯ ಹೋರಾಟಗಾರರ ಬಗೆಗೆ ಕುವೆಂಪು ಅವರಿಗೆ ಇದಕ್ಕೆ ಮತ್ತಷ್ಟು ಸಾಕ್ಷಿಯಾಗಿ 'ಪಾಂಚಜನ್ಯ' ಕವನ ಸಂಕಲನದ ಎಲ್ಲಾ ಕವನಗಳನ್ನೂ ಗಮನಿಸಬೇಕು. ಕುವೆಂಪು ಅವರು ೫.೮.೧೯೨೪ರಲ್ಲಿ ರಚಿಸಿದ ಒಂದು ಇಂಗ್ಲಿಷ್ ಸಾನೆಟ್ಟು 'The Banished Indian Patriot' ಬ್ರಿಟಿಷ್ ಸರಕಾರ ವೀರ ಸಾವರ್ಕರ್ ಅವರಂತಹ ಅನೇಕ ದೇಶಭಕ್ತರನ್ನು ಹಿಡಿದು, ನಕಲಿ ವಿಚಾರಣೆ ನಡೆಸಿ, ದೇಶಾಂತರ ಶಿಕ್ಷೆ ವಿಧಿಸಿ, 'ಪೃಥ್ವಿಯ ನರಕ' ಎಂದು ಆಗ ಕುಪ್ರಸಿದ್ಧವಾಗಿದ್ದ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಿಗೆ ಕಾಲಾಪಾನಿ ಎಂದು ಹೆಸರುಗೊಂಡ ಸೆಲ್ಲುಲಾರ್ ಜೈಲಿಗೆ ಜೀವಾವಧಿ ಜೈಲುವಾಸಕ್ಕೆ ಅಟ್ಟುತ್ತಿದ್ದರು. ಅಂತಹ ಒಬ್ಬ ದೇಶಭಕ್ತ ವೀರನ ಕುರಿತ ಕವಿ ಹೃದಯದ ಅಭಿವ್ಯಕ್ತಿ ಎರಡು ಸಾನೆಟ್ಟುಗಳಲ್ಲಿವೆ. ಅವುಗಳ ಭಾಗವನ್ನಿಲ್ಲಿ ಉದ್ಧರಿಸಲಾಗಿದೆ.

"Forget me not, sweet Land! I am thy child.
Tho' far away from thy beloved shore
I breathe and pass away, I love thee more,
Dear India! Remember thy child exiled.
I fought for heaven when conflagration wild,
With heart of hell and cloak of heaven, all o'er
Thy beauteous bosom did its vengeance pour.
But Satan wins ere comes Christ undefiled:

O Mother, thou hast given a gift supreme:
The mighty "I AM HE !" Hell shudders cold
Beneath its potency. Happy thy race
That feels the freedom of the soul! That DREAM
Is but the surest bliss. March and be bold,
Dear India, hoping for thy better days!"[11]

ಮೇಲಿನ ಈ ಎರಡೂ ಸಾನೆಟ್ಟುಗಳ ಭಾಗಗಳು ದೇಶಪ್ರೇಮದ ಕಿಚ್ಚು ಎಂತಹುದು ಎಂದು ತಿಳಿಸುತ್ತವೆ. ಅದರ ಕಿಡಿ ಸಮುದಾಯವನ್ನು ತಾಕದಿರಲು ಸಾಧ್ಯವಿರಲಿಲ್ಲ ಎಂದು ಭಾವಿಸಬಹುದು. ಇಲ್ಲಿ ಭಾರತ ಮಾತೆಯು ಸೆರೆಯಾಗಿದ್ದು ಅವಳ ಬಿಡುಗಡೆಯಾಗಿ ಹೋರಾಡಿದ ವೀರನೂ

ಬಂಧಿಯಾಗಿದ್ದಾನೆ. ತನ್ನ ಬಿಡುಗಡೆಗಾಗಿ ಭಾರತ ಮಾತೆಯಲ್ಲಿ ಮೊರೆಯಿಡುತ್ತ ತಾನೂ ಸೆರೆಯಾಗಿರುವುದನ್ನು ನೆನಪಿಸುತ್ತಿದ್ದಾನೆ. ಏಕೆಂದರೆ ಆತನ ಬಿಡುಗಡೆಯೇ ಭಾರತ ಮಾತೆಯ ಬಿಡುಗಡೆಯಾಗಿದೆ. ಭಾರತ ಮಾತೆಯ ಬಿಡುಗಡೆ ವಿಳಂಬವಾಗುತ್ತಲೇ ಹತಾಶನಾದ ದೇಶಭಕ್ತ, "ತಾಯಿ ಭಾರತಿ, ನಿನಗೆ ಸ್ವಾತಂತ್ರ್ಯ ಬಹ ಮುನ್ನ ನಾನಳಿವೆನೇನೊ ಎಂಬಾ ಶಂಕೆಯೊಮ್ಮೆಮ್ಮೆ ಪೀಡಿಪುದು ಮನಮಂ"[೧೨] ಎಂದು ತನ್ನ ಕಳವಳವನ್ನು ಭಾರತ ಮಾತೆಗೆ ನಿವೇದಿಸುತ್ತಾನೆ. ೨೫.೧.೧೯೩೫ರಲ್ಲಿ ರಚಿಸಿದ 'ದೇಶಭಕ್ತನ ಬಯಕೆ' ಎಂಬ ಸಾನೆಟ್‌ನಲ್ಲಿ ಈ ನಿವೇದನೆಯಿದೆ. ಭಾರತಕ್ಕೆ ಸ್ವಾತಂತ್ರ್ಯ ಲಭಿಸುವವರೆಗೂ ಕುವೆಂಪು ತಮ್ಮ ಪ್ರಾರ್ಥನೆಯನ್ನು ತೊಳಲಾಟವನ್ನು ಕೆಚ್ಚನ್ನು ಹೋರಾಟವನ್ನು ಅನೇಕ ಕವನಗಳಲ್ಲಿ ತೋರಿಸಿಕೊಂಡು ಬಂದಿದ್ದರು.

ಕುವೆಂಪು ಅವರು ಭಾರತ ಪುತ್ರರನ್ನು ಎಚ್ಚರಿಸಿ ನಾಡಿನ ಹೋರಾಟಕ್ಕೆ ಕರೆಕೊಡುವ ಕವನವನ್ನು ೧.೮.೧೯೨೭ರಲ್ಲಿ ರಚಿಸುವರು. ಈ ಕವನವನ್ನು ಮೊದಲು ಕನ್ನಡದಲ್ಲಿ ರಚಿಸಿ ನಂತರ ಇಂಗ್ಲಿಷ್ ಭಾಷಾಂತರಿಸಿದ್ದಾರೆ.

> "ಏಳಿರಿ! ಏಳಿರಿ ! ಭಾರತ ಪುತ್ರರೆ,
> ಪಾಲಿಸಲೆಮ್ಮೆಯ ಮಾತೆಯ ಮಾನವ,
> ಕೇಳಿರಿ ! ಕೇಳಿರಿ : ಭೇರಿಯ ನಾದವು,
> ಗಾಳಿಯ ಮೇಲಿಂ ಭೋರನೆ ಬರುತಿದೆ,
> ತರವೇ ತರವೇ ನಿಮಗಿದು ತರವೇ,"[೧೩]

ಮರಗುವ ಮಾತೆಯ ಪೊರೆಯದೆ ನಗುವುದು, ಭಾರತೀಯರೇ?– ಇಲ್ಲಿ ತರುಣ ಕವಿಯಲ್ಲಿರುವ ಕಲಿತನವೂ ಪ್ರಕಟವಾಗಿದೆ.

ಟಾಗೋರ್ ಸ್ವಾತಂತ್ರ್ಯ ದೀಕ್ಷೆಯನ್ನು ತೊಟ್ಟು, ಇಡೀ ಭಾರತೀಯರನ್ನು ತಮ್ಮ ಅನೇಕ ಲೇಖನಗಳಿಂದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮ್ಮಿಕ್ಕುವಂತೆ ಮಾಡಿ ಒಂದು ಹೊಸ ಅಲೆಗಳನ್ನೇ ಸೃಷ್ಟಿಸುತ್ತಾರೆ. ಸ್ವಾತಂತ್ರ್ಯಕ್ಕಾಗಿ ಭಾರತದ ರಾಷ್ಟ್ರೀಯ ಚಳುವಳಿ, ರಾಷ್ಟ್ರದ ಉದ್ದಗಲಕ್ಕೂ ದೊಡ್ಡ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಜಾಗೃತಿಯೊಂದಿಗೆ ನಡೆಯುತ್ತದೆ. ಆ ಸಮಯದಲ್ಲಿ ಸ್ವಾತಂತ್ರ ಚಳುವಳಿಗಾಗಿ ಟಾಗೋರ್‌ರವರ ಕೊಡುಗೆ ಗಮನಾರ್ಹವಾಗಿದೆ. ಗಾಂಧೀಜಿ ಟಾಗೋರ್ ಅವರನ್ನು 'ಗುರುದೇವ' ಎಂದು ಕರೆಯುತ್ತಿದ್ದರು.

ಗುರುದೇವರಿಗೆ ನೊಬೆಲ್ ಪ್ರಶಸ್ತಿ ಗೀತಾಂಜಲಿಗಾಗಿ ಬಂದಿತು. ಅದು ಭಾರತೀಯರ ಹೆಮ್ಮೆ. ಆದರೆ ಕುವೆಂಪು ಹಾಗೂ ಹಲವು ಕನ್ನಡ ಸಾಹಿತಿಗಳು ಟಾಗೋರರ ಕಾವ್ಯವನ್ನು ಭಾರತ ಬಗೆದ ರೀತಿಯಲ್ಲಿ ಪರಿಗ್ರಹಿಸಲಿಲ್ಲ. ಕುವೆಂಪು ಅದಕ್ಕೇ ಹೇಳುತ್ತಾರೆ: ಋಷಿಸದೃಶ ಟ್ಯಾಗೋರರ ವ್ಯಕ್ತಿತ್ವ ಮತ್ತು ಸ್ಪರ್ಧೆ–ಹಿಂಸೆಗಳನ್ನು ವಿರೋಧಿಸುವ ಅವರ ವೈಚಾರಿಕತೆ ಇವುಗಳನ್ನು

ಕನ್ನಡ ಸಾಹಿತಿಗಳು ಅತೀವ ಪ್ರೀತ್ಯಾದರಗಳಿಂದ ಕಂಡರೇ ಹೊರತು ಅವರ ಸಾಹಿತ್ಯವನ್ನು ಅವಿಮರ್ಶಾತ್ಮಕವಾಗಿ ಎಂದೂ ಸ್ವೀಕರಿಸಲಿಲ್ಲ.

ಟಾಗೋರ್ ಸ್ವಾತಂತ್ರ್ಯ ದೀಕ್ಷೆಯನ್ನು ತೊಟ್ಟು, ಇಡೀ ಭಾರತೀಯರನ್ನು ತಮ್ಮ ಅನೇಕ ಲೇಖನಗಳಿಂದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮ್ಮಿಕ್ಕುವಂತೆ ಮಾಡಿ ಒಂದು ಹೊಸ ಅಲೆಗಳನ್ನೇ ಸೃಷ್ಟಿಸುತ್ತಾರೆ. ಸ್ವಾತಂತ್ರ್ಯಕ್ಕಾಗಿ ಭಾರತದ ರಾಷ್ಟ್ರೀಯ ಚಳುವಳಿ, ರಾಷ್ಟ್ರದ ಉದ್ದಗಲಕ್ಕೂ ದೊಡ್ಡ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಜಾಗೃತಿಯೊಂದಿಗೆ ನಡೆಯುತ್ತದೆ. ಆ ಸಮಯದಲ್ಲಿ ಟಾಗೋರ್‌ರವರ ಸ್ವಾತಂತ್ರ ಚಳುವಳಿಗಾಗಿ ಅವರ ಕೊಡುಗೆ ಗಮನಾರ್ಹವಾಗಿದೆ. ಗಾಂಧೀಜಿ ಟಾಗೋರ್ ಅವರನ್ನು 'ಗುರುದೇವ' ಎಂದು ಕರೆಯುತ್ತಿದ್ದರು.

ಕುವೆಂಪು ಅವರು Tagore ಎಂಬ ಕವನವನ್ನು ೧೨.೧೦.೧೯೨೪–೭.೨.೧೯೨೫ರಲ್ಲಿ ರಚಿಸಿದರು. ಈ ಕವನ ಒಂದು ಸಾನೆಟ್ಟು. ರವೀಂದ್ರನಾಥರ ವಿಚಾರವಾಗಿ ಅಂದು ಕವಿಗಿದ್ದ ಮಹೋನ್ನತ ಭಾವನೆ ಮತ್ತು ಮಹಾ ಗೌರವಗಳು ಈ ಕವನದಲ್ಲಿ ಅಭಿವ್ಯಕ್ತವಾಗಿದೆ.

"The tide of battle swells and the grim cries
Of 'Victory!' come blending with the clash
Of delirious arms ; and drunken soldiers dash
With cries of 'Conquer!', While Peace bleedings lies!
But midst the drunken din of war thy songs,
Sweet messengers of peace and harmony,
Shower joy and quell the flames of agony
And draw love's veil on homicidal wrongs!

Thou movest midst the field proclaiming "Cease,
Children if God, these weapons are for play;
Behold, our Mother waits with streaming tears!"
With light of Life and harmony of Peace
Move on, Great Poet, for thine is His Way :
Thy music sweet has rung in drunken ears!"[14]

ಇದ್ದರೂ ವಿರೋಧಭಾಸವೆಂದರೆ ಟಾಗೋರ್‌ರ ಬೆಂಗಾಲಿ 'ಗೀತಾಂಜಲಿ' ಕವನಗಳ ಛಂದಸ್ಸು ಅಷ್ಟೇನು ವಿಶಿಷ್ಟವಾದದ್ದಲ್ಲವೆಂದೂ, ತಾವು ಕನ್ನಡದಲ್ಲಿ ಅದಕ್ಕಿಂತ ಶ್ರೇಷ್ಠ ರೀತಿಯಲ್ಲಿ ವಿವಿಧ ಛಂದೋರೂಪಗಳನ್ನು ಬಳಸಲು ಶಕ್ತರೆಂದು ಕುವೆಂಪು ತಮ್ಮ ಆತ್ಮಕಥೆಯಲ್ಲಿ ದಾಖಲಿಸುತ್ತಾರೆ

ಮತ್ತು ಟಾಗೋರ್‌ರರು 'ಮಹಾಕವಿಯಲ್ಲ' ಬದಲಿಗೆ 'ಶ್ರೇಷ್ಠಕವಿ' ಅಷ್ಟೇ ಎಂದು ಕುವೆಂಪು ತಮ್ಮ 'ಕವಿ ರವೀಂದ್ರರು (ವಿಭೂತಿ ಪೂಜೆ) ಎಂಬ ಪ್ರಮುಖ ಲೇಖನದಲ್ಲಿ ವಾದಿಸುತ್ತಾರೆ.

ಅಂದಿನ ಭಾರತ ಹೋರಾಡಬೇಕಿದ್ದ ಇನ್ನೊಂದು ಅನಿಷ್ಟ ಅಂದಿಗೇ ವೈಶ್ವಿಕ ದೃಷ್ಟಿಯಲ್ಲಿ ಅಸಂಗತವಾಗಿದ್ದ ಪುರೋಹಿತಶಾಹಿ ಮತ್ತದರ ಪ್ರತಿಪಾದಿತ ವರ್ಣವ್ಯವಸ್ಥೆ. ಕುವೆಂಪು ಅವರು ಸ್ವಾತಂತ್ರ್ಯವು ಭೌತಿಕ, ಆಧ್ಯಾತ್ಮಿಕ, ಧಾರ್ಮಿಕ ನೆಲೆಗಳಲ್ಲಿ ವ್ಯಕ್ತವಾಗಬೇಕೆಂದು, ಸೃಷ್ಟಿಯಲ್ಲಿನ ಎಲ್ಲವೂ ಸಮಬಾಳು ಸಮಪಾಲಿಗೆ ಅಧಿಕಾರ ಹೊಂದಿರುವುದಾಗಿಯೂ ನಂಬಿದ್ದರು. ಇದಕ್ಕೆ ಅವರ ಎಲ್ಲ ಕೃತಿಗಳಲ್ಲೂ ಪುರಾವೆಗಳು ದೊರೆಯುತ್ತವೆ. ಜಲಗಾರ, ಬೆರಳ್ಗೆ ಕೊರಳ್, ಸ್ಮಶಾನ ಕುರುಕ್ಷೇತ್ರ ಇವುಗಳ ವ್ಯಾಪ್ತಿಯನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಬೇಕು.

ಈ ಕೆಳಗಿನ ಕವನವನ್ನು ಪುರೋಹಿತಶಾಹಿತ್ವವನ್ನು ಖಂಡಿಸುವ ಕುವೆಂಪು ಅವರ ಗುಣಕ್ಕೆ ಸಾಕ್ಷಿಯಾಗಿ ನೋಡಬಹುದು. ಇದು ೧೯೨೪ರಲ್ಲಿ ರಚಿಸಿದ ಕವನ The Colour bar.

"Glimmer of skin but not of soul
Does hearts of men mislead;
The colour-bar, the colour-mole
Have now begun to plead;
But oh! the ocean's mighty waves
Behind them leave colourless graves.

Remember ye who fight for skin;
Our souls Perfection blends:
O, love more than your kith and kin;
Our sins Affection ends.
The Colour-Bar with Death shall die,
And sad your judgement blind must lie."[15]

ಕರಿಯರ ಮೇಲೆ ಬಿಳಿಯರು ಎಸಗುತ್ತಿದ್ದ ದೌರ್ಜನ್ಯವನ್ನು ಖಂಡಿಸಿ ಬರೆದ ಕವನವಿದು ಎನ್ನಿಸಿದರೂ ಇದರ ವ್ಯಾಪ್ತಿ ಬಹಳ ಹಿರಿದಾಗಿದೆ. ಇಲ್ಲಿ ವರ್ಣವ್ಯವಸ್ಥೆಯ ಬಗೆಗಿನ ಅವರ ಆಕ್ರೋಶ ತಣ್ಣಗೆ ವ್ಯಕ್ತವಾಗಿದೆ. ವರ್ಗ, ವರ್ಣ ವ್ಯವಸ್ಥೆಗಳಿಗೆ ಕುವೆಂಪು ಅವರ ಧಿಕ್ಕಾರವಿತ್ತು. ಇದೆಲ್ಲವನ್ನು ಮೀರಬೇಕಾದರೆ ವಿಶ್ವಮಾನವ ತತ್ವವನ್ನು ಪರಿಪಾಲಿಸಬೇಕೆಂದು ಅವರು ಕರೆಕೊಟ್ಟಿದ್ದಾರೆ ಎನ್ನುವುದು ಈ ಎಲ್ಲದರ ಪರಿಪಾಕದಿಂದ ಮಂಥನಗೊಂಡ ಅಮೃತ ಸಮಾನವಾದ ಕರೆ. ಅವರ ವಿಶ್ವಮಾನವ ತತ್ವ ಯಾವುದನ್ನೂ ಕಡೆಗಾಣಿಸದೆ, ಎಲ್ಲವನ್ನೂ ಒಳಗೊಂಡ ವಿಶ್ವಾತ್ಮಕ ಪರಿಕಲ್ಪನೆಯಾಗಿದೆ.

ಗಾಂಧೀಜಿಯವರು ದಕ್ಷಿಣ ಆಫ್ರಿಕಾಗೆ ತೆರಳಿದ ಸಂಧರ್ಭದಲ್ಲಿ ಅಲ್ಲಿನ ಸನ್ನಿವೇಶಗಳನ್ನು ಕಂಡು ಬೆಚ್ಚಿದರು. ದ. ಆಫ್ರಿಕಾದಲ್ಲಿ ಜನಿಸಿ ಬೆಳೆದು ಬರುತ್ತಿರುವ ಶೇ.೯೦ರಷ್ಟು ಜನರೊಡನೆ ವಸಾಹತುಶಾಹಿ ಅಧಿಕಾರ ಮಾಡಿದ ಕ್ರೂರತೆಗೆ ಮಿತಿಯಿರಲಿಲ್ಲ. ಆಫ್ರಿಕಾದಲ್ಲಿ ವರ್ಣ ಭೇಧವನ್ನು ಸೂಚಿಸುವ 'ಅಪಾರ್ಥೈಡ್' ಶಬ್ದ 'ಅಗಲಿಸು' ಎಂಬ ಅರ್ಥವನ್ನು ನೀಡುತ್ತದೆ. ವ್ಯಕ್ತಿಗಳ ಸ್ವಾತಂತ್ರ್ಯ ಮತ್ತು ಮಾನವ ಹಕ್ಕುಗಳನ್ನು ಉಲ್ಲಂಘಿಸುತ್ತಿದ್ದ ಬಿಳಿಯರು ಪೂರ್ಣವಾಗಿ ಕ್ರೂರಿಗಳಾಗಿದ್ದರು.

ಒಟ್ಟಿನಲ್ಲಿ ಕುವೆಂಪು ಅವರ ಆತ್ಮದ ತುಡಿತವಿದ್ದದ್ದು ಯುದ್ಧ, ದಬ್ಬಾಳಿಕೆ, ಕ್ರೌರ್ಯ, ಅಸಮಾನತೆ, ದ್ವೇಷ ಇವೆಲ್ಲದರ ನಿವಾರಣೆಯ ಬಗ್ಗೆ. ಗುಂಬಝ್‌ನಲ್ಲಿ ಬರೆದ ಶೋಕಗೀತೆ (ಟಿಪ್ಪುವಿನ ಸಮಾಧಿಯ ಬಳಿ) ಕವಿತೆಯಲ್ಲಿ ಮನುಷ್ಯ ಜನ್ಮದ ನಿಷ್ಫಲತೆಯನ್ನು, ಯುದ್ಧಗಳ ಅಂತಿಮ ಪರಿಣಾಮವನ್ನೂ ಕುವೆಂಪು ಬಿನ್ನವಿಸುತ್ತಾರೆ. ಹೈದರಾಲಿಯ ಮಗ ಟಿಪ್ಪು ಸುಲ್ತಾನ್. ಟಿಪ್ಪು ಸುಲ್ತಾನ್ ಎಂಬುದು ಕೇವಲ ದೊರೆ ಅಥವಾ ಸಾಮಂತನೊಬ್ಬನ ಹೆಸರು ಮಾತ್ರವಲ್ಲ, ಅದು ಅಖಂಡ ಭಾರತದ ಕನಸಿನ, ಶೌರ್ಯದ, ಮಾದರಿ ಆಡಳಿತದ ಸಂಗಮಗಳ ಪ್ರತೀಕ.

ಕುವೆಂಪು ಅವರು ಆಗಸ್ಟ್ ೧೯೨೪ರಲ್ಲಿ ಶ್ರೀರಂಗಪಟ್ಟಣಕ್ಕೆ ಹೋಗಿದ್ದಾಗ ಹೈದರ್ ಮತ್ತು ಟಿಪ್ಪೂ ಅವರ ಸಮಾಧಿ ಸ್ಥಾನವಾದ ಗುಂಬಜ್ ಅನ್ನು ಸಂದರ್ಶಿಸಿ ಬರೆದ ಒಂದು ದೀರ್ಘಕವನ Elegy Written at Gumbus (ಗುಂಬಝ್‌ನಲ್ಲಿ ಬರೆದ ಶೋಕಗೀತೆ). ಈ ಕವನದಲ್ಲಿ ನಾಲ್ಕು ಸಾಲುಗಳ ಮೂವತ್ತೆರಡು ಪದ್ಯಗಳಿವೆ. ಥಾಮಸ್‌ಗ್ರೇ ಕವಿಯ 'ಚರ್ಚ್‌ಯಾರ್ಡಿನಲ್ಲಿ ಬರೆದ 'ಎಲಿಜಿ'ಯ (ಶೋಕಗೀತೆ)೧೬ ಪ್ರಭಾವ ಇಲ್ಲಿ ಕಾಣುತ್ತದೆ, ಛಂದಸ್ಸು ಪ್ರಾಸಗಳಲ್ಲಿಯೂ ಕೂಡ. ಆದರೆ ಈ ಕವನದ ಮೂಲ ವಸ್ತು ಭಾರತೀಯವೂ ಐತಿಹಾಸಿಕವೂ ಆಗಿದೆ.

"Is this the wealth by fire and sword amassed,
The gold of kings, the gems of temples great?
Lies here the head that once all crowns surpassed
The dreaded tiger fierce of Mysore State!

Thou mighty warrior, scourge of England's band,
Do these suffice thy kingdom-winning soul?
Can this small spot immure thy mighty hand
That did with fire and slaughter wildly roll?"[17]

ಈ ಸಾಲುಗಳಲ್ಲಿ ಕುವೆಂಪು ಅವರು, ಟಿಪ್ಪು ಸುಲ್ತಾನ್‌ನ ಬಗ್ಗೆ ಹೀಗೆ ಹೇಳಿದ್ದಾರೆ: "ಟಿಪ್ಪು ಸುಲ್ತಾನ್ ಸ್ವಾತಂತ್ರ್ಯ ಪೂರ್ವದ ಭಾರತ ದೇಶ ಕಂಡ ಒಬ್ಬ ಅಪ್ರತಿಮ ವೀರ ಸೇನಾನಿ ಹಾಗೂ ಶ್ರೀ ರಂಗಪಟ್ಟಣದ ದೊರೆ ಮಾತ್ರವಾಗಿರದೆ, ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯಲ್ಲಿ

ನಲುಗುತ್ತಿದ್ದ ಭಾರತವನ್ನು ಅವರ ಕಪಿಮುಷ್ಟಿಯಿಂದ ಬಿಡಿಸಲು ಕನಸು ಕಂಡು ನಿರಂತರ ಅವರೊಂದಿಗೆ ಸೆಣೆಸಿದ ಕನಸುಗಾರ. ಜೊತೆಗೆ ಹಗಲಿರುಳು ಬ್ರಿಟಿಷರನ್ನು ದುಃಸ್ವಪ್ನದಂತೆ ನಿರಂತರ ಕಾಡಿದ ಅಪ್ರತಿಮ ವೀರ. ಸಾಮಾನ್ಯ ಸಿಪಾಯಿಯೊಬ್ಬನ ಮಗನಾಗಿ ಜನಿಸಿದ ಟಿಪ್ಪು ಸುಲ್ತಾನ್, ಒಬ್ಬ ದೊರೆಯಾಗಿದ್ದುಕೊಂಡು ಯುದ್ಧ ಭೂಮಿಯಲ್ಲಿ ಬ್ರಿಟಿಷರ ವಿರುದ್ಧ ಹೋರಾಡುತ್ತಲೇ ಮಡಿದು ಹುತಾತ್ಮನಾದ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಮಹಾಯೋಧ. ಬ್ರಿಟಿಷ್ ಆಳ್ವಿಕೆಯ ಭಾರತದಲ್ಲಿ ಮೈಸೂರು ಸೇನೆಗೆ ತನ್ನ ಯುದ್ಧತಂತ್ರ, ಸಂಘಟನಾ ಚಾತುರ್ಯದಿಂದಾಗಿ ಹೈದರ್ ಆಲಿ ಮತ್ತು ಅವನ ಪುತ್ರ ಟಿಪ್ಪು ಸುಲ್ತಾನ್ ಇಬ್ಬರೂ ಜಾಗತಿಕ ಮನ್ನಣೆ ದೊರಕಿಸಿಕೊಟ್ಟರು."

"Thy boasted splendor lies a weary waste,
A page in history recalling awe;
A theme for wearied traveller's partial taste,
A pride of phantom fame in patriot's jaw.

Perhaps thy crown may be a lump of gold
By greedy merchants to be tossed and weigh'd;
Thy sword may be the pride of some house-hold,
Or antique show in some museum wide."[18]

ವಸಾಹತುಶಾಹಿಯ ವಿರುದ್ಧ ಹೋರಾಡುತ್ತ ಟಿಪ್ಪು ಸುಲ್ತಾನ್ ಮಡಿದು ಎರಡು ಶತಮಾನ ಕಳೆದರೂ ಸಹ ಇಂದಿಗೂ ತನ್ನ ಹದಿನಾರು ವರ್ಷದ ಅರ್ಥಪೂರ್ಣ ಹಾಗೂ ಘನತೆಯ ಆಳ್ವಿಕೆ ಮತ್ತು ಶೌರ್ಯ ಇವುಗಳ ಮೂಲಕ ಪ್ರಾತಃಸ್ಮರಣೀಯನಾಗಿದ್ದಾನೆ. ಇದಕ್ಕಿಂತ ಹೆಚ್ಚಾಗಿ ಬ್ರಿಟಿಷರೊಡನೆ ಕಾದಾಡುತ್ತಲೇ ಭಾರತದ ಇತರ ಸಂಸ್ಥಾನಗಳನ್ನು ಒಗ್ಗೂಡಿಸಲು ಶ್ರಮಿಸಿದ ಆತನ ಕಾಳಜಿ, ಭಾರತದ ಸಂಸ್ಕೃತಿ ಕುರಿತಂತೆ ಆತನಿಗಿದ್ದ ಅತೀವ ಪ್ರೀತಿ ಮತ್ತು ಗೌರವಗಳಿಂದಾಗಿ ಟಿಪ್ಪು ಸುಲ್ತಾನ್ ಇವೊತ್ತಿಗೂ ಭಾರತದ ರಾಜಕಾರಣಕ್ಕೆ ಮಾದರಿಯಾಗಿದ್ದಾನೆ ಎನ್ನುತ್ತಾರೆ ಕುವೆಂಪು.

ಕುವೆಂಪು ಅವರು Elegy Written at Gumbus ಎಂಬ ಕವನದಲ್ಲಿ ಟಿಪ್ಪುವಿನ ಸಾಹಸಗಳನ್ನು ಕುರಿತು ಬರೆದ ನಂತರ, ಅಂದು ಅಲ್ಲೇ ಮತ್ತೊಂದು ಕವನವನ್ನು ರಚಿಸುತ್ತಾರೆ. ಅದು 'The Death of Tippu' ಎಂಬ ಲಾವಣಿಯು ಅವರು ೯.೯.೧೯೨೩ರಲ್ಲಿ ಶ್ರೀರಂಗಪಟ್ಟಣಕ್ಕೆ ಭೇಟಿ ಕೊಟ್ಟಾಗ ರಚಿತವಾಗಿದೆ. ಇದರಲ್ಲಿ ನಾಲ್ಕು ಪಂಕ್ತಿಯ ಹದಿನೆಂಟು ಪದ್ಯಗಳಿವೆ. ಆ ಕವನದ ಕೆಲವು ಸಾಲುಗಳು ಹೀಗಿದೆ:

"It was a day full bright and clear;
The soldiers all were merry;
Each sword was laid aside, each spear;
There was no rush nor hurry.

A bullet brought the Sultan down;
Earth did him all her homage.
His mighty scepter sword and crown
Pass to a tale of old age...."[19]

ಕುವೆಂಪು ಅವರು ತಮ್ಮ ನೆನೆಪಿನ ದೋಣಿಯಲ್ಲಿ ಪ್ರಸ್ತುತ ಕವನದ ಬಗ್ಗೆ ಹೀಗೆ ಹೇಳಿದ್ದಾರೆ "ಹಗಲು ಹನ್ನೆರಡು ಗಂಟೆಯಲ್ಲಿ ರಾಜ್ಯ ಕಳಕೊಂಡವರು"[೨೦] ಎಂದು ಅದರ ಬಗ್ಗೆ ಕಿರು ವಿವರಣೆಯನ್ನು ಕೊಟ್ಟಿದ್ದಾರೆ. ಟಿಪ್ಪುಸುಲ್ತಾನ್ ಊಟ ಮಾಡುತ್ತಿದ್ದವನು ಅದನ್ನು ಬಿಟ್ಟು ಮುತ್ತಿಗೆ ಹಾಕಿದ್ದ ಬ್ರಿಟಿಷ್ ಮತ್ತು ಮತ್ತಿತರ ಸೇನೆಯೊಡನೆ ಹೋರಾಡಿ ಮಡಿಯುವವನು ಎಂದು. ಹೀಗೆ ಸ್ವಾತಂತ್ರ್ಯದ ಕಿಡಿ ಹೊತ್ತಿದಂದಿನಿಂದ ಇತಿಹಾಸವನ್ನು ಅಭ್ಯಾಸ ಮಾಡಿದ್ದ ಕುವೆಂಪು ಇಂತಹ ಜಾಜ್ವಲ್ಯಮಾನ ವ್ಯಕ್ತಿತ್ವಗಳನ್ನು ಆಯ್ದು ಆ ಮೂಲಕ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿದರು.

ಸ್ವಾತಂತ್ರ್ಯಕ್ಕೆ ಅತ್ಯಗತ್ಯವಾದ ಮನೋಭೂಮಿಕೆಯನ್ನು ಜನರಲ್ಲಿ ಎಚ್ಚೆತ್ತುವಂತೆ ಪ್ರೇರೇಪಿಸುವುದರ ಕಡೆಗೆ ಇವರ ಕಾವ್ಯ ತುಡಿಯುತ್ತದೆ. ಹಾಗೆ ತುಡಿಯುತ್ತಲೆ ಸ್ವಾತಂತ್ರ್ಯ ಸಂಪಾದನೆಗೆ ಅಗತ್ಯವಾದ ತರುಣಶಕ್ತಿಯ ಗಮನ ಸೆಳೆಯುವಲ್ಲಿ ಕ್ರಿಯಾಶೀಲವಾಗುತ್ತದೆ.

ಕುವೆಂಪು The Patriot ಎಂಬ ಈ ಶೀರ್ಷಿಕೆಯನ್ನುಳ್ಳ ಕವನವನ್ನು ೯.೯.೧೯೨೩ರಲ್ಲಿ ರಚಿಸಿದ್ದಾರೆ. ಅಂದಿನ ಸ್ವಾತಂತ್ರ್ಯ ಸಂಗ್ರಾಮದ ಮತ್ತು ಗಾಂಧೀಜಿಯ ಅಹಿಂಸಾ ಸತ್ಯಾಗ್ರಹದ ಪ್ರಭಾವದಿಂದ ಮೂಡಿದ ಕವನವಿದು. ಆ ಕಾಲದ ಯುವ ಸಂವೇದನೆಯನ್ನು ಸ್ವಾತಂತ್ರ್ಯಸಮರಕ್ಕೆ ಅಣಿಗೊಳಿಸುವ, ನವಭಾರತ ನಿರ್ಮಾಣಕ್ಕೆ ಅಗತ್ಯವಾದ ಮನೋಭೂಮಿಕೆಯನ್ನು ಬಿತ್ತುವ ಧೋರಣೆಯುಳ್ಳದ್ದಾಗಿದೆ. ಈ ಬಗೆಯ ಧೋರಣೆಗಳಲ್ಲಿ ಭಾರತೀಯ ನವೋದಯದ ರಾಷ್ಟ್ರೀಯತೆಯ ಪರಿಕಲ್ಪನೆಗಳು ಪ್ರಕಟವಾಗುತ್ತದೆ.

"I love thee, O my native land,
Thou art my hope and pride;
Thy sorrows all I understand,
And follies all deride.

I strive to free thee from the chain

Of abject bondage and of pain."[21]

ಸ್ವಾತಂತ್ರ್ಯಕ್ಕೆ ಅತ್ಯಗತ್ಯವಾದ ಮನೋಭೂಮಿಕೆಯನ್ನು ಜನರಲ್ಲಿ ಎಚ್ಚೆತ್ತುಕೊಳ್ಳುವಂತೆ ಪ್ರೇರೇಪಿಸುವುದರ ಕಡೆಗೆ ಇವರ ಈ ಕಾವ್ಯ ತುಡಿಯುತ್ತದೆ. ಹಾಗೆ ತುಡಿಯುತ್ತಲೆ ಸ್ವಾತಂತ್ರ್ಯ ಸಂಪಾದನೆಗೆ ಅಗತ್ಯವಾದ ತರುಣ ಶಕ್ತಿಯ ಗಮನ ಸೆಳೆಯುವಲ್ಲಿ ಕ್ರಿಯಾ ಶೀಲವಾಗುತ್ತದೆ. ಭಾರತ ಮಾತೆಯನ್ನು ಸ್ವಾತಂತ್ರ್ಯಗೊಳಿಸಬೇಕೆಂಬ ಹಂಬಲ ಮತ್ತು ದೇಶಪ್ರೇಮ ಕುವೆಂಪು ಅವರಲ್ಲಿ ಇಂಥಹ ಶಕ್ತಿಯುತ ಸಾಲುಗಳನ್ನು ಬರೆಯಲು ಪ್ರೇರೇಪಿಸಿದೆ.

"I do not seek the aid of sword,

Or vain conflict of war;

But I should call the blessed Lord

To aid my country's star.

Not blood but peace shall be my aim,

And joy my hope, not sword and flame."[22]

ಗಾಂಧೀಜಿಯವರ ಅಹಿಂಸಾತ್ಮಕ ಹೋರಾಟ, ಹಿಂಸೆಯಿಂದಾಗದ್ದನ್ನು ಪ್ರೀತಿಯಿಂದ ಸಾಧಿಸುವಲ್ಲಿ ಪ್ರೀತಿಗಿರುವ ಶಕ್ತಿಯನ್ನು ಸಂಪೂರ್ಣವಾಗಿ ಒಪ್ಪಿ ಇಲ್ಲಿ ಈ ಕವಿತೆಯ ಸಾಲುಗಳಲ್ಲಿ ಪ್ರತಿಪಾದಿಸುತ್ತಿದ್ದಾರೆ. ಈ ಅಹಿಂಸಾ ತತ್ತ್ವ 'ನನ್ನ ಗುರಿ ನೆತ್ತರಲ್ಲ, ಶಾಂತಿ ಸಂತಸವು ನನ್ನ ಭರವಸೆಯು ಖಡ್ಗವಲ್ಲ, ಅಲ್ಲ ಸುಡುವ ಕಿಚ್ಚು.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ, ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೧೨, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨. ಅದೇ, ಪುಟ ೧೪೫.

೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ, ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೬೪, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೪. ಅದೇ, ಪುಟ ೯೬೪.

೫. ಅದೇ, ಪುಟ ೯೬೪.

೬. ಅದೇ, ಪುಟ ೯೬೪.

೭. ಅದೇ, ಪುಟ ೯೬೪.

೮. ಕೊ. ಚೆನ್ನಬಸಪ್ಪ ; ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ ಮತ್ತು ಸಾಮಾಜಿಕ ನಿಷ್ಠೆ ; ಪುಟ ೯೨–೯೩, ನವ ಕರ್ನಾಟಕ ಪ್ರಕಾಶನ ; ಮೊದಲ ಮುದ್ರಣ, ೨೦೦೪.

೯. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೪೫೫–೪೫೬, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೦. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ; ಸಂಪುಟ ೨, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೬೭, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೧. ಅದೇ, ಪುಟ ೧೦೦೨.

೧೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ, ಸಂಪುಟ – ೧, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೪೯೫, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೩. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೩೮೯, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.೧೪. ಅದೇ, ಪುಟ ೧೦೦೮.

೧೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೦೮, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೫. ಅದೇ, ಪುಟ ೯೮೪.

೧೬. ಎಲಿಜಿ– ಅಂದರೇ ಶೋಕಗೀತೆ, ಇದು ಪ್ರಾಚೀನ ಗ್ರೀಕ್ ಸಾಹಿತ್ಯದಲ್ಲಿ ಕಾವ್ಯದ ಒಂದು ಛಂದೋ ರೂಪಕ್ಕೆ ಈ ಹೆಸರಿತ್ತು.

೧೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨, ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೧೪, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೧೮. ಅದೇ, ಪುಟ ೧೦೧೪.

೧೯. ಕುವೆಂಪು; ನೆನಪಿನ ದೋಣಿಯಲ್ಲಿ ; ಪುಟ ೨೧೪-೨೧೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೦. ಅದೇ, ಪುಟ ೨೧೪.

೨೧. ಅದೇ, ಪುಟ ೨೧೫.

೨೨. ಅದೇ, ಪುಟ ೨೧೫-೨೧೬.

* * * * * *

### ೫.೩ ಸ್ಥಳೀಯತೆಯ ವಿಚಾರಗಳು

ಕನ್ನಡದ ಮಹಾ ಕವಿಯೊಬ್ಬನಿಗೆ ಜನ್ಮವೀಯುವ ಭಾಗ್ಯ ವೆಂಕಟಪ್ಪಗೌಡ ಮತ್ತು ಸೀತಮ್ಮನವರದಾಗಿತ್ತು. ಸೀತಮ್ಮನವರು ಆರೇಳು ತಿಂಗಳ ಗರ್ಭಿಣಿಯಾದಾಗಲೇ ಚೊಚ್ಚಲ ಹೆರಿಗೆಗೆಂದು ತಮ್ಮ ತವರೂರಾದ ಹಿರೆಕೊಡಿಗೆಗೆ ಹೋದರು. ಚೊಚ್ಚಲ ಮಗುವನ್ನು ಪಡೆಯುವ ತಪದಲ್ಲಿ ನೋವಿನ ಸಮಾಧಿಯಲ್ಲಿ ಸೀತಮ್ಮ ಇರುವಾಗ,

"ಓ ಆ ದೂರದ, ಬಹುದೂರದ, ಬಂಗಾಳದ,
ಕಲ್ಕತ್ತದ ದಕ್ಷಿಣೇಶ್ವರದಿಂದ ಹುಟ್ಟಿ,
ಬಾನ್ಗೇರಿ ಬಾಗಿ,
ಯೋಜನಂಗಳ ಮೀಟಿ ದಾಟಿ,
ಕುಪ್ಪಳಿಯಾಚೆಯ ಕೊಪ್ಪದೆಡೆಯ ಹಿರಿಕೊಡುಗೆಯ ಮುಟ್ಟಿ
ನಿಂದುದೊಂದು ಮಹಾ ಮಳೆಬಿಲ್ಲು, ಕಮಾನು ಕಟ್ಟಿ,
ಶ್ರೀಗುರುವಿನ ಕೃಪೆಯ ಬರವಿಗೊಂದು ದೇವಸೇತುವಾಗಿ,
ಅಲ್ಲಿಂದದಿಲ್ಲಿಗೆ ಬೀಸಿದೊಂದೆ ರುಂದ್ರ ಕಮಾನು ಬಾಗಿ!"[೧]

ಭವತಾರಿಣಿಯ ಹರಕೆಯನ್ನು ಅಲ್ಲಿ ಅವತರಿಸುವ ಕವಿಗೆ ಮುಟ್ಟಿಸುವ ಸಲುವಾಗಿ ದಕ್ಷಿಣೇಶ್ವರದ ಗುರುಕೃಪೆಯೆ ಸಹ್ಯಾದ್ರಿಯ ಆ ಕೊಂಪೆಗೆ ಬರುತ್ತದೆ. ಆ ಗುರುಕೃಪೆಯ ಮುಂದೆ ಕವಿಯ ಸಹಧರ್ಮಿಣಿಯಾಗುವ ಸೂಚನೆಯೂ ಈ ಕವಿತೆಯಲ್ಲಿದೆ. ೨೯.೧೨.೧೯೦೪ ರಂದು ಸುಖವಾಗಿ ಅವರು ಗಂಡು ಮಗುವನ್ನು ಪ್ರಸವಿಸಿದರು. ಮುಂದೆ ಆ ಶಿಶು ಬೆಳೆದಂತೆ ಜಗತ್ಕವಿಯಾಗುವ ಮುನ್ಸೂಚನೆಯಂತೆ, ಎಂದೂ ಇಲ್ಲದ ಕ್ರೈಸ್ತ ಪಾದ್ರಿಗಳು ಅಲ್ಲಿಗೆ ಬಂದು ಅವರ ಪ್ರಚಾರ ಕಾರ್ಯಗಳ ಪರಿಣಾಮವಾಗಿ ಮಲೆನಾಡಿನ ಜನ ಜೀವನದಲ್ಲಿ ಮಹತ್ತರವಾದ ಸುಧಾರಣೆ ರೂಢಿಗೆ ಬಂದಿತು.

ಕುಪ್ಪಳಿಯಲ್ಲಿ ಇಂಗ್ಲಿಷ್‌ನ ಗಂಧ ಗಾಳಿಯೂ ಇಲ್ಲದ ಕಾಲದಲ್ಲಿ, ಕುವೆಂಪು ಇನ್ನೂ ಎಳೆಯ ಪ್ರಾಯದವರಾಗಿದ್ದಾಗ, ಅಲ್ಲಿಗೆ ಬಂದಂತಹ ಕ್ರೈಸ್ತ ಪಾದ್ರಿಗಳು ಕುಪ್ಪಳಿಯ ಉಪ್ಪರಿಗೆಯ ವಿದ್ಯಾಸಂಸ್ಥೆಗೂ ಒಬ್ಬ ಇಂಗ್ಲಿಷ್ ಬಲ್ಲ ಕ್ರೈಸ್ತ ತರುಣರಾದ ಮೋಸಸ್‌ರನ್ನು ಮೇಷ್ಟರನ್ನಾಗಿ ಕಳಿಸುವ ಕೃಪೆ ಮಾಡಿದ್ದರ ಪರಿಣಾಮವಾಗಿ ಕುವೆಂಪು ಮತ್ತು ಇನ್ನಿತರ ವಿದ್ಯಾಕಾಂಕ್ಷಿ ಹುಡುಗರಲ್ಲಿ ಇಂಗ್ಲಿಷ್ ಬಗೆಗಿನ ಆಸಕ್ತಿಯನ್ನು ಬಿತ್ತುವಂತಾಯಿತು. ಇದರ ಪರಿಣಾಮವನ್ನು ಕುವೆಂಪು ಅವರು ತಮ್ಮ ನೆನಪಿನ ದೋಣಿಯಲ್ಲಿ ಹೀಗೆ ವರ್ಣಿಸಿದ್ದಾರೆ–

ಮಕ್ಕಳಾಗಿದ್ದ ನಮ್ಮ ಬದುಕಿನ ಮೇಲೆ ನಮ್ಮ ಹಿರಿಯರ ಕೈಗೂಡದ ಆ ಆಕಾಂಕ್ಷೆ ಮಹತ್ ಪ್ರಭಾವಕಾರಿಯಾಗಿ ಪರಿಣಮಿಸಿತು: ಮಕ್ಕಳನ್ನು ಓದುವುದಕ್ಕೆ ಹಾಕಬೇಕು ಎಂಬ ಪ್ರಜ್ಞೆ ಅವರಲ್ಲಿ

ಉದಿಸುವಂತೆ ಮಾಡಿತ್ತು. ಅವರಿಗೆ ಬುದ್ಧಿ ಸ್ಪಷ್ಟವಾಗಿರದಿದ್ದರೂ, ಬ್ರಿಟಿಷರ ಆಳ್ವಿಕೆಯಲ್ಲಿ, ಮುಂದೆ, ಅವರ ಭಾಷೆಯಾಗಿದ್ದ ಇಂಗ್ಲಿಷ್‌ನ್ನು ಕಲಿಯದಿದ್ದರೆ, ತಮ್ಮ ಮಕ್ಕಳು ಮುಂದುವರಿಯುವುದು ಸಾಧ್ಯವಿಲ್ಲ ಎಂಬ ಭಾವನೆ ಅವರ ಹೃದಯದಲ್ಲಿ ಮೂಡಿ ಮನವರಿಕೆಯಾಗಿತ್ತು. ತತ್‌ಫಲವಾಗಿ ನಾವು ತೀರ್ಥಹಳ್ಳಿಯ ಪೇಟೆಯ ಇಸ್ಕೂಲಿಗೆ ಸೇರುವಂತಾಯಿತು.[೨] ಎಂದು ಹೇಳಿಕೊಂಡಿದ್ದಾರೆ.

ಹೀಗೆ ಕುವೆಂಪು ಅವರ ಇಂಗ್ಲಿಷ್ ಪಯಣ ಶುರುವಾಗಿ, ಅದನ್ನು ಒಳಹೊಕ್ಕಂತೆ, ಅವರು ಇಂಗ್ಲಿಷ್ ಸಾಹಿತ್ಯಕ್ಕೆ ಮನಸೋತು ಅದರ ಆಳವಾದ ಅಧ್ಯಯನದಲ್ಲಿ ತೊಡಗಿಕೊಂಡಿದ್ದರ ಪರಿಣಾಮವಾಗಿ ಅದರ ಮೇಲಿನ ವ್ಯಾಮೋಹ, ಅಲ್ಲಿನ ಲೇಖಕಕರ ಲೇಖನ ಶೈಲಿ ಮತ್ತು ಅದರ ವೈಖರಿಗಳಿಗೆ ಮನಸೋತಿದ್ದರು. ಅದರಿಂದ ಪ್ರೇರಣೆಗೊಂಡು ತರುಣ ಕವಿ ಕುವೆಂಪು ಅವರು ಬಿಗಿನರ್ಸ್ ಮ್ಯೂಸ್ ಮತ್ತು ಏಲಿಯನ್ ಹಾರ್ಪ್‌ನಂತಹ ಇಂಗ್ಲಿಷ್ ಕವನ ಸಂಕಲನಗಳನ್ನು ಬರೆಯುವಂತೆ ಮಾಡಿತು ಎನ್ನಬಹುದು.

ಮುಂದೆ ತನ್ನ ತಂದೆಯ ಮರಣಾನಂತರ ಕುವೆಂಪು ಅವರ ಮನಸ್ಸು ತಮ್ಮ ಬಾಲ್ಯದಲ್ಲಿಯೇ ದೈವದ, ಜೀವದ, ಹಾಗೂ ಬದುಕಿನ ಗುರಿಯ ವಿಚಾರವಾಗಿ ಚಿಂತಿಸುತ್ತಿತ್ತು. ದೊಡ್ಡವರ ಜೀವನ ಚರಿತ್ರೆಗಳನ್ನೋದಿದಾಗ, ಮಹತ್ವಾಕಾಂಕ್ಷೆ ಅವರಲ್ಲಿ ಇಣುಕುತ್ತಿತ್ತು. ಸಾಧು ಸಂತರ ಕತೆ ಕೇಳಿದಾಗ ತಾವೂ ಅವರಂತೆ ದೇವರನ್ನು ಕಾಣಲಾಗದೆ ಎಂದು ಹಂಬಲಿಸುತ್ತಿದ್ದರು. ಇದೇ ಸಮಯದಲ್ಲೊಮ್ಮೆ ಶ್ರೀ ಶಂಕರಾಚಾರ್ಯರು ಹಸ್ತಾಮಲಕರಿಗೆ ಬೋಧಿಸಿದ ತತ್ವಗಳ ಪುಸ್ತಕವೊಂದು ಅವರ ಕೈಗೆ ಸಿಕ್ಕಿತು. ಅದು ಭಾಮಿನಿ ಷಟ್ಪದಿಯಲ್ಲಿತ್ತು. ಅದರಲ್ಲಿ ಕಳವು ಕೊಲೆ ಹುಸಿ ನಿಂದೆ ಮಾಂಸಹಾರ ಮೊದಲಾದ ಪಾಪಕಾರ್ಯಗಳೂ, ಆ ಕಾರ್ಯಗಳಿಗೆ ನರಕದಲ್ಲಿ ಕಾದಿದ್ದಯಾತನೆಗಳೂ, ಪುಣ್ಯಕಾರ್ಯಗಳಿಂದ ಮನುಷ್ಯನಿಗೆ ಮುಂದೆ ಒದಗಬಹುದಾಗಿದ್ದ ಸುಖವೂ ವಿವರಣೆಗೊಂಡಿದ್ದವು. ಆ ಕೂಡಲೇ ಪುಟ್ಟಪ್ಪನವರು ಮಾಂಸಹಾರವನ್ನು ವಿಸರ್ಜಿಸಿದಲ್ಲದೆ, ತಮ್ಮ ಗೆಳೆಯರಿಗೂ ಅಹಿಂಸಾ ತತ್ವವನ್ನು ಬೋಧಿಸಿದರು.

ಹೀಗೆ ಅವರಲ್ಲಿ ಸ್ವತಂತ್ರ ರೀತಿಯ ವರ್ತನೆ, ಸುತ್ತಮುತ್ತಣವರ ಮೇಲೆ ಪ್ರಭಾವ ಬೀರುವ ವರ್ಚಸ್ಸು ಇವು ಶೈಶವದಿಂದ ಅಸ್ಥಿಗತವಾಗಿ ಬಂದಿರುವ ಗುಣಗಳು; ಸಂಯಮ ಸಾಧನೆಯಲ್ಲಿ ಸ್ವಲ್ಪವೂ ಅಲುಗದ ದೃಢಕಠೋರ ಚಿತ್ತವುಳ್ಳವರು. ಒಮ್ಮೆ ತೊಟ್ಟ ಪ್ರತಿಜ್ಞೆಯನ್ನು ಕೊನೆ ತನಕ ಸಾಧಿಸುವ ಹಠ ನೈಸರ್ಗಿಕವಾಗಿಯೇ ಬೆಳೆದು ಬಂದಂತಿದೆ. ಅಷ್ಟೇ ಅಲ್ಲದೇ ಅವರಲ್ಲಿ ಬೇಟೆಯ ಆಸಕ್ತಿ ರಕ್ತಗತವಾಗಿ ಬಂದ ಗುಣವಷ್ಟೆ. ಅವರಿಗೆ ಪ್ರಕೃತಿಯಾರಾಧನೆ, ಸೌಂದರ್ಯೋಪಾಸನೆ ಎಷ್ಟು ಸ್ವಾಭಾವಿಕವಾಗಿ ಬಂದಿದ್ದವೋ ಹಾಗೆಯೇ ಬೇಟೆಯೂ ಅವರಿಗೆ ಸಹಜಗುಣವಾಗಿ ಪರಿಣಮಿಸಿತ್ತು. ಹೀಗೆ ತರುಣ ಕವಿ ಕುವೆಂಪು ಅವರಲ್ಲಿ ಪ್ರಕೃತಿ, ದೈವ, ಆಧ್ಯಾತ್ಮ, ಸಮಾಜಮುಖಿ ಚಿಂತನೆಗಳ ಬಗೆಗಿನ ಸೂಕ್ಷ್ಮ ವಿಚಾರಗಳ ಮೇಲಿನ ಆಸಕ್ತಿಯ ಕಿಡಿ ತಮ್ಮ ಬಾಲ್ಯದಲ್ಲಿಯೇ ಉದ್ಭವಿಸಿದ ಕಿಡಿ ಎಂದೆನ್ನಬಹುದು.

ಕುವೆಂಪು ಅವರು ತಮ್ಮ ಬಾಲ್ಯವನ್ನು ಸುಂದರವಾಗಿ ಕಳೆಯುತ್ತಾರೆ. ಅದು ಅವರಿಗೆ ಸಂಭ್ರಮವಾಗಿದೆ. ಕುವೆಂಪು ಅವರಿಗೆ ತಮ್ಮ ಬಾಲ್ಯದಲ್ಲಿ ತುಂಗಾ ನದೀ ತೀರ ಬಹಳ ಪ್ರಿಯವಾದ ಸ್ಥಳಗಳಲ್ಲಿ ಒಂದು, ಅವರು ಬಹಳಷ್ಟು ಸಮಯ ತಮ್ಮ ಬಾಲ್ಯದ ಮಿತ್ರರೊಡನೆ ಅಲ್ಲೇ ಕಾಲ ಕಳೆಯುತ್ತಿದ್ದರು. ಅವರು ನೆನಪಿನ ದೋಣಿಯಲ್ಲಿ ಆ ದಿನಗಳನ್ನು ನೆನೆಯುತ ಅಲ್ಲಿ ಕಳೆದ ಕ್ಷಣಗಳನ್ನು ಆತ್ಮೀಯವಾಗಿ ಅಪ್ಪಿಕೊಳ್ಳುತ್ತಾರೆ. ಉದಾಹರಣೆಗೆ, ಅವರು ರಚಿಸಿರುವ To the River Tunga ಎಂಬ ಕವನವು ಪುಷ್ಟೀಕರಿಸುತ್ತದೆ. Arise, Tunga, arise from thy bed of sweet flowers, And put on the bright blanket of green ! Sweet River-Nymph of disheveled locks trailing from bowers, On the hills where the shade is serene.[2] ಎಂದು ತಮ್ಮ ಒಲವನ್ನು ತೋರ್ಪಡಿಸುತ್ತಾರೆ. ಕುವೆಂಪು ಪ್ರಕೃತಿಯ ಒಡಲಿನಲ್ಲಿ ಸದಾ ಅವಳ ಮಡಿಲಿನಲ್ಲಿ ಬೆಚ್ಚಗೆ ಕಾಲ ಕಳೆಯುವುದೆಂದರೆ ಬಲು ಪ್ರೀತಿ. ಯಾವುದೇ ವ್ಯಕ್ತಿಗೂ ತನ್ನ ಬಾಲ್ಯದಲ್ಲಿ *'ಮನೆಯೆ ಮೊದಲ ಪಾಠಶಾಲೆ, ತಾಯಿಯೆ ಮೊದಲ ಗುರು',* ಅವರು ತಮ್ಮ ಮನೆಯನ್ನು ಎಷ್ಟರ ಮಟ್ಟಿಗೆ ಪ್ರೀತಿಸುತ್ತಿದ್ದರೆಂದರೇ ಅದಕ್ಕೆ ಒಂದು ಒಳ್ಳೆಯ ಉದಾ: ೧೯೩೦ರಲ್ಲಿ ರಚಿಸಿರುವ ಕೊಳಲು ಸಂಕಲನದ ಒಂದು ಕವನ **ನನ್ನ ಮನೆ.** ಕವನ ಹೀಗಿದೆ:

"ಮನೇ ಮನೇ ಮುದ್ದು ಮನೆ
ಮನೇ ಮನೇ ನನ್ನ ಮನೆ!

ತಾಯಿ ಮುತ್ತು ಕೊಟ್ಟ ಮನೆ,
ತಂದೆ ಎತ್ತಿಕೊಂಡ ಮನೆ;
ಮನೆಗೆ ಬಂದ ನೆಂಟರೆಲ್ಲ
ಕೂಗಿ ಕರೆದು ಕೊಬರಿ ಬೆಲ್ಲ
ಗಳನು ಕೊಟ್ಟು, ಸವಿಯ ಸೊಲ್ಲ
ನಾಡುತಿದ್ದ ನನ್ನ ಮನೆ!"[3]

ವಿಶ್ವಪ್ರಸಿದ್ಧ ಪ್ರಕೃತಿ ಕವಿಯೆಂದೇ ಕರೆಯಲ್ಪಡುವ ವಿಲಿಯಂ ವರ್ಡ್ಸ್‌ವರ್ತ್‌ನ ೧೮೮೧ರಲ್ಲಿ Ode on Intimationssss Immortality from Recollection of Early childhood ಎಂಬ ಕವನ ಸಂಕಲನದಿಂದ ಆಯ್ದ ಒಂದು ಕವನದ ಸಾಲುಗಳಲ್ಲಿ ಹೀಗೆ ವರ್ಣಿಸುತ್ತಾರೆ.

"My heart leaps up when I behold
A rainbow in the sky.
So was it when my life began;

So is it now I am a man;
So be it when I shall grow old,
Or let me die!
The Child is father of the Man;
And I could wish my days to be
Bound each to each by natural piety."[4]

ಈ ಮೇಲಿನ ಕವನದ ಸಾಲುಗಳು ಹೀಗೆ ಹೇಳುತ್ತವೆ: ಪುಟ್ಟ ಬಾಲಕನೊಬ್ಬ ಆಕಾಶದಲ್ಲಿ ಮೂಡಿದ ಮಳೆಬಿಲ್ಲನ್ನು ನೋಡುತ್ತಾನೆ. ಅದರ ಬಣ್ಣಗಳಿಂದ ಆಕರ್ಷಿತನಾಗುತ್ತಾನೆ. ಹೇಗಾದರೂ ಮಾಡಿ ಅದನ್ನು ಹಿಡಿಯಲೇಬೇಕೆಂಬ ಹಠ ಮನಸ್ಸನ್ನು ಆವರಿಸುತ್ತದೆ. ತನ್ನ ಕೈಗೆ ನಿಲುಕದ ಮಳೆಬಿಲ್ಲನ್ನು ನೋಡುತ್ತಾ ಬಾಲ್ಯ ಕಳೆದು ಅವನು ದೊಡ್ಡವನಾಗುತ್ತಾನೆ.

ಮುಂದೆ ವರ್ಡ್ಸ್‌ವರ್ತ್ ತನ್ನ ಕವನದಲ್ಲಿ ಪ್ರಕೃತಿಯಲ್ಲಿ ದಿವ್ಯತ್ವವನ್ನು ಕಾಣುವ ಶಕ್ತಿಯನ್ನು ಪಡೆಯಲೋಸುಗ ತಾನು ಹಿಂದು ಹಿಂದಕ್ಕೆ ನಡೆದು ಬಾಲ್ಯವನ್ನು ಪುನಃಗಳಿಸಬೇಕೆಂದು ಆಶಿಸುತ್ತಾನೆ.

"There was a time when meadow, grove, and stream,
The earth, and every common slight,
To me did seem
Apparelled in celestial light,
The glory and the freshness of a dream....."[5]

ಇಂಥಹುದೇ ಮತ್ತೊಂದು ಕವನವನ್ನು ಕುವೆಂಪು, ೩೦.೮.೧೯೨೩ರಲ್ಲಿ Children of Youth ಎಂದು ರಚಿಸಿದ್ದಾರೆ.

"We move and play with joys; we sing,
For the world of woe is far away;
And the happiness of many a king
Is scattered on our delightfull way..."[6]

ಉಲ್ಲಾಸಕರವಾಗಿ ಹಾಡುತ್ತಾ, ಕುಣಿಯುತ್ತಾ ಕಳೆಯುವ ನಮ್ಮ ಮುಂಜಾವು ಎಂಥ ಭವ್ಯತೆಗೂ ಮೀರುವಂಥದ್ದು ಎಂದು ಸಂಭ್ರಮಿಸುವುದನ್ನು ಈ ಮೇಲಿನ ಸಾಲುಗಳಲ್ಲಿ ಕಾಣುತ್ತೇವೆ. ಇದಕ್ಕೆ ಇನ್ನೊಂದು ಉದಾಹರಣೆ ಕುವೆಂಪು ಅವರ ೨೩.೨.೧೯೨೫ರಂದು ರಚಿಸಿರುವ The Little Lovely Dream ಎಂಬ ಕವನದ ಸಾಲುಗಳು:

"I love you, little dream,
For all thy childish lies!

Thy sweet Paradise
Was with you in my eyes!
Now you are gone, fond dream;
With you all Paradise!"[7]

ಇಂಥ ಬಾಲ್ಯಕ್ಕೆ ಮರಳಲಾಗದ ಅಸಹಾಯಕತೆಯನ್ನು ನೆನೆದು ನೆನಪಿನಲ್ಲೇ ಅದರ ಸುಖವನ್ನು ಅನುಭವಿಸುವ ಕವಿಚೇತನಕ್ಕೆ ಬಾಲ್ಯ ಹಾಗೂ ಮುಪ್ಪುಗಳಲ್ಲಿರುವ ಸಾಮ್ಯ ಮತ್ತು ವೈದೃಶ್ಯಗಳು ಮುಖಾಮುಖಿಯಾಗುತ್ತವೆ. ಮುಪ್ಪಿನಲ್ಲಿರುವ ಮಗುತನದ ಎಲ್ಲಾ ಕುರುಹುಗಳು ಬಾಲ್ಯಕ್ಕೆ ಹತ್ತಿರವಾಗಿ ಅಂದಿನ ಮುಗ್ಧತೆ, ಅಸಹಾಯಕತೆ, ಉತ್ಸಾಹ, ಆನಂದಗಳಿಗೆ ಇಂದಿನ ಆಲಸ್ಯ, ನಿರುತ್ಸಾಹ, ಜುಗುಪ್ಸೆ ಎದುರಾಗುತ್ತವೆ. ಚಿಂತಿಸುವಂತೆ ಮಾಡುತ್ತವೆ.

"When I was but a child
A little lovely dream
From the blue far off skies
Came and entered my eyes:
Ah lovely little dream,
To cheat such a silly child!

You said you owned all toys
Of lovely Paradise;
All glories of heaven
To fair angels given
Where are those promised joys,
Fond Dream, you stole from my eyes?"[8]

ಅದಮ್ಯ ಉತ್ಸಾಹದ ಬಾಲ್ಯದ ಗಳಿಗೆಗಳು ಮತ್ತೆ ಬರುತ್ತವೆಯೇ ಎಂಬ ಪ್ರಶ್ನೆ, ಆಶ್ಚರ್ಯ, ನಿಟ್ಟುಸಿರುಗಳಲ್ಲಿ ರಚಿಸಿದ ಕವನ **ಬಾಲ್ಯ**. ಈ ಕವನವನ್ನು ೧೨.೯.೧೯೨೪ರಲ್ಲಿ ರಚಿಸಿದ್ದಾರೆ.

"ಚಂದದಿ ನಲಿಯುವೆ ಎಲೆ ಕಂದ!
ಕಂದನೆ! ಚಂದನೆ!
ಇಂದಿನ ದಿನಗಳೆ
ಅಂದಿನ ದಿನಗಳು ಆಗುವುವು
ಹಿಂದಿನ ದಿನಗಳ

ಚಂದನ ಹೊದಿಕೆಯ
ಮುಂದಿನ ಕಾಲಕೆ ನೀ ಹೊದಿಸು!"[೮]

ಕುವೆಂಪು ಅವರು ೧೪.೫.೧೯೨೫ರಲ್ಲಿ The Play Divine ಎಂಬ ಕವನವನ್ನು ರಚಿಸುವರು. ಈ ಕವನ ವಾಚ್ಯವಾಗಿ ಮಕ್ಕಳನ್ನೇ ನಿರ್ದೇಶಿಸಿದೆ. ನಾವು ಈ ಭೂಮಿಗೆ ಆಡುವುದಕ್ಕೆ ಬಂದಿದ್ದೇವೆ. ನಮ್ಮ ಮನೆ ದೂರದಲ್ಲಿದೆ. ಆದ್ದರಿಂದ 'ಆಡಿ ಮಕ್ಕಳೆ ಆಡಿ!' 'ಸ್ವರ್ಗ – ನರಕ, ಪಾಪ – ಪುಣ್ಯ ಎಂದೆಲ್ಲ ಕಲ್ಪಿಸಿಕೊಂಡು ಆಟಗೇಡಿಗಳಾಗಬೇಡಿ'[೯] ಎಂದು ಹುರಿದುಂಬಿಸುತ್ತಾರೆ.

"Play, play,ye little children, play !
All night and day
Be bright and gay ;
Our Home is far and far away !
There night and day, there sun and moon,
There all the glories of the green
And all the bliss of nature's boon
Will e'er be felt and ne'er be seen !
There is our Home, there is our Home ;
And we have come here but no roam !

Our Home is far, our Home is near,
Our Home is blissful, sweet and dear !
Our Home is here, our Home is there,
Our sweet dear Home is everywhere !
There is our Home, here is our Home ;
This is a garden where we roam !"[10]

ಈ ಕವನದ ಆಶಯ *'ಅಲ್ಲಿರುವುದು ನಮ್ಮನೆ ಇಲ್ಲಿ ಬಂದೆ ಸುಮ್ಮನೆ'* ಎಂಬ ದಾಸರ ಕೀರ್ತನೆಯ ಆಶಯಕ್ಕೆ ವಿರುದ್ಧವಾದದ್ದು. ಕುವೆಂಪು ಕೂಡ ಅಲ್ಲಿದೆ ನಮ್ಮನೆ, ಅದು ನಮ್ಮ ಮನೆ ಎಂದು ಹೇಳುತ್ತಿದ್ದರೂ, ದಾಸರ ಆಶಯಕ್ಕೆ ವಿರೋಧ ವ್ಯಕ್ತ ಪಡಿಸುವರು. ನಮ್ಮ ಮನೆ ದೂರದಲ್ಲಿದ್ದರೂ, ನಾವು ಇಲ್ಲಿರುವ ತನಕ ಯಾವುದೇ ತಾತ್ವಕ ಪರಿಕಲ್ಪನೆಗಳಲ್ಲಿ ಮುಳುಗಿ ಇರುವ ದಿನಗಳನ್ನು ಕಳೆಯದೆ ಇಲ್ಲಿರುವಷ್ಟು ದಿನ ಆಡಿಕೊಂಡು ಕಾಲ ಕಳೆಯಬೇಕೆಂದು ಮಕ್ಕಳಿಗೆ ಕರೆಕೊಡುತಾರೆ. ಬೆಳೆಯುವ ಮಕ್ಕಳಲ್ಲಿ ಅವೈಚಾರಿಕತೆಯನ್ನು ತುಂಬಬಾರದು ಎಂಬುದನ್ನು ಧ್ವನಿಸುತ್ತಿದೆ ಈ ಕವನ.

ಆಡುವ ಮಕ್ಕಳಿಗೆ ಹೀಗೆ ಕರೆ ಕೊಡುವ ತರುಣ ಕುವೆಂಪು ಮನಸ್ಸೇ ದೇವರು, ಜೀವ, ಜಗತ್ತು, ಸೃಷ್ಟಿ, ಭಯ, ಪಾಪ, ಪುಣ್ಯ, ಸ್ವರ್ಗ, ನರಕ, ಕರ್ಮ, ಮೋಕ್ಷ ಇತ್ಯಾದಿ ಅಲೌಕಿಕ ವಿಚಾರಗಳಲ್ಲಿ ತೊಡಗುತ್ತದೆ. ಆ ಜಿಜ್ಞಾಸೆಯ ಆ ಸಂದೇಹದ ಆ ಶ್ರದ್ಧೆಯ ಪ್ರಶ್ನೆ ಸಂಕುಲದ ಜಂಜಾಟದಲ್ಲಿ ಸಿಕ್ಕಿ ಕೊನೆಗೆ ತಾನೊಂದು ಶಿಶುವಾಗಿ ತಾಯಿಗೆ ಮೊರೆಯಿಡುತ್ತಾರೆ. ಈ ದ್ವಂದ್ವ ಜಿಜ್ಞಾಸೆಯಲ್ಲಿ ಸೃಷ್ಟಿ ವೈಚಿತ್ರದ ಸೊಬಗಿನ ಬಗ್ಗೆ ತನ್ನ ಸಂದೇಹಾಸ್ಪದ ಪ್ರಶ್ನೆಗಳನ್ನು **ಶಿಶುಗೀತೆ** ಎಂಬ ಕವನದಲ್ಲಿ ಕೇಳುತ್ತಾರೆ. ಈ ಕವನದಲ್ಲಿ ಕವಿ ಮನಸ್ಸಿನ ಭಾವನೆ ಮತ್ತು ಚಿಂತನೆಗಳು ಗಮನಾರ್ಹವಾಗಿದೆ. ಇದು ಕವಿಯ ಆಂತರಿಕ ಪರಿವರ್ತನೆಗೆ ಸಾಕ್ಷಿಯಾಗಿದೆ.

"ಏನಿದೌ, ಹೇ ಜನನಿ? ಏನಿದೇನಿದು ಜನನಿ?
ಏನಿದೀ ಧರೆ? ಏನಿದೀ ನಭ?
ಏನಿದೀ ಗಿರಿತೊರೆಗಳು?
ಅರಿಯೆ ನಾನಿದನು, ಜನನಿ, ಇದನರಿಯೆನರಿಯೆ!"[೧೧]

ಎಂದು ಶಿಸುವಿನ ಸಹಜ ಮುಗ್ಧತೆಯಿಂದ ತಮ್ಮ ನಿಗೂಢ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಬಯಸುತ್ತಾರೆ. ಈ ಕವನದ ವಸ್ತು, ಕವಿಯ ಆಶಯ, ಹೊಸತನ ಸೂಚಿಸುವಂತೆ ಕವನದ ಶೈಲಿಯೂ ಹೊಸತನಕ್ಕೆ ಮಾದರಿಯಾಗಿರುವುದನ್ನು ಕುವೆಂಪು ಹೀಗೆಂದಿದ್ದಾರೆ.

ಅಸಮ ಪಂಕ್ತಿಗಳ ವಿನ್ಯಾಸದಲ್ಲಿ ಮತ್ತು ಸ್ವಚ್ಛಂದ ಛಂದಸ್ಸಿನಲ್ಲಿ ನವ್ಯನಾಮಕ ಕವಿತೆಯನ್ನೂ ನಾಚಿಸುವಷ್ಟು, ಮುಂದುವರಿದಿದೆ. ಕವಿಯಲ್ಲಿ ಆಗ ನಡೆಯುತ್ತಿದ್ದ ಒಂದು ಪರಿವರ್ತನೆಗೆ ಪ್ರತಿಮೆಯಾಗಿ ನಿಲ್ಲುವಂತಿದೆ ಈ ಕವನದ ಗೆಲ್ಗೆಂಬ ಸಾಕ್ಷಿ.[೧೨]

ಕುವೆಂಪು ಅವರು ೧೩.೩.೧೯೨೪ರಲ್ಲಿ The Friends of Native Home ಎಂಬ ಕವನವನ್ನು ರಚಿಸಿದ್ದಾರೆ. ಅವರು ತಮ್ಮ ಹಳೆಯ ಬಾಲ್ಯದ ನೆನಪುಗಳಾದ ಗದ್ದೆಗಳು, ತೋಟಗಳು, ಹೂವುಗಳು, ಕೆರೆ, ಕೊಳ, ತೊರೆಗಳು, ಪುಟ್ಟ ಪುಟ್ಟಪ್ಪನನ್ನು ಕಾಯುತ್ತಿದ್ದ ಅವರ ತಾಯಿ, ತಂಗಿಯರು ಮತ್ತು ಅವರ ಪ್ರೀತಿ ಪಾತ್ರವಾದ ಗೌರಿ ಮುಂತಾದವುಗಳನ್ನು ನೆನೆನೆನೆದು ಆ ಭಾವನೆಗಳನ್ನು ಕಾವ್ಯಮಯವಾಗಿ, ಈ ಕವನವನ್ನು ಸೃಷ್ಟಿಸಿದ್ದಾರೆ.

"The fields of my native home are awaiting me ;
And for me they've spread their blanket green ;
They've sprinkled showers of heaven upon the lea ;
And they have borrow'd fragrance from Nature's Queen.
For me they are smiling, for me they are heaving mad ;
For me with splendor and love they are glad, they are glad !
But Oh! the labour of books is hindering me,
I cannot cling to their bosom as swift as I wish to be !"[13]

ಈ ಕವನದಲ್ಲಿ ಅವರು ವಿದ್ಯಾರ್ಥಿಯಾಗಿದ್ದಾಗ, ಪರೀಕ್ಷೆಗೆ ಮೊದಲೇ ಅವರ ಸೈನ್ಸ್ ಪೇಪರು ಔಟ್ ಆಗಿ, ಆ ಪರೀಕ್ಷೆಯನ್ನು ಮುಂದೂಡಲಾಯಿತು. ಆದ ಕಾರಣ ಕುವೆಂಪು ಊರಿಗೆ ಹೋಗುವುದು ಕೊಂಚ ತಡವಾಯಿತು, ಇದರ ಪರಿಣಾಮವಾಗಿಯೇ, ಕುವೆಂಪು ತಮ್ಮ ಹುಟ್ಟೂರು, ತಮ್ಮವರನ್ನು ನೆನೆದು ಈ ಕವನವನ್ನು ಇಲ್ಲಿ ಸೊಗಸಾಗಿ ಉದ್ಧರಿಸಿದ್ದಾರೆ.

"But Oh ! of all these friends who wait for me
With fluttering hopes and joys of anxiety,
The sweetest and the noblest are but three :
With beating heart my Mother waits eagerly ;
And my Sister keeps watch at the door for my return
And my sweet Love's dumb heart within her shall burn !
But Oh! the priests of lore are hindering me ;
I cannot fly to their arms as swift as I wish to be !"[14]

೧೦.೭.೧೯೨೫ರಲ್ಲಿ ಕುವೆಂಪು ತಮ್ಮ ಹಳೆಯ ನೆನಪಿನಲ್ಲೇ ಮತ್ತೊಂದು ಕವನವನ್ನು ರಚಿಸಿದ್ದಾರೆ. ಅದೇ My Native Land. ತಾರುಣ್ಯದಲ್ಲೂ, ಅದೇ ಬಾಲ್ಯದ ಕಾತರತೆ ಅದಮ್ಯ ಕುತೂಹಲಗಳಿಂದ ಹುಟ್ಟೂರನ್ನು ನೋಡುವ ತವಕ ಇದೆ ಎಂಬುದನ್ನು ಈ ಕವನ ತಿಳಿಸುತ್ತದೆ. ಈ ಹೊತ್ತಿಗಾಗಲೇ ಕುವೆಂಪು ಅವರಿಗೆ ಹುಟ್ಟಿನಿಂದಲೇ ಬಂದಿದ್ದ ನಿಸರ್ಗೋಪಾಸನೆ, ಮತ್ತೊಂದು ಆಯಾಮವನ್ನು ಪಡೆದುಕೊಳ್ಳುತ್ತಿರುತ್ತದೆ. ಅದು ಪ್ರಕೃತಿಯ ಸೊಬಗನ್ನು ಸವಿಯುವಲ್ಲಿ ಕವಿಚೇತನ ಬ್ರಹ್ಮಸಂಸ್ಪರ್ಶವನ್ನೂ ಹೊಂದಿರುತ್ತದೆ. ಆಶ್ರಮದ ವಾತಾವರಣ ವರ್ಡ್ಸ್ ವರ್ತ್ ಕಾವ್ಯ ಅಧ್ಯಯನಗಳು, ಅವರು ಪ್ರಕೃತಿಯನ್ನು ಕಾಣುವ ದೃಷ್ಟಿಕೋನದ ಮೇಲೆ ಪ್ರಭಾವವನ್ನುಂಟು ಮಾಡಿರುತ್ತದೆ.

"Dear regions sweet, again I come to you
After a lapse of many a month, to find
The same enchanting love and liberty
The decked your foreheads then. Blue lakes,
And mountains green, and still and tranquil woods,
Wide fields of rice, and spreading gardens dear,
And speckled skies, now blue, now dark, now grim,
Gay flowers, sweet fruits and tender grass that smiles-
All these and many more are angles bright
And holy of my love. I gaily sing
To all these angels; and they in return
Bring messages from the infinite......."[15]

ತವರೂರಿನ ಪ್ರಕೃತಿಯ ಸೊಬಗು, ಸಿರಿಗಳನ್ನು ನಾನಾ ಮುಖಗಳನ್ನು ಕಾಣುತ್ತ ಅವುಗಳ ಸೌಂದರ್ಯವನ್ನು ಸವಿಯುವ ಕವಿಚೇತನಕ್ಕೆ ಬ್ರಹ್ಮ ಸಂಸ್ಪರ್ಶ ಒದಗುತ್ತದೆ. ನಗರ ಪರಿಸರದಿಂದ ಮತ್ತೆ ಹುಟ್ಟೂರಿನ ಪ್ರಕೃತಿ ಮಡಿಲಿಗೆ ಬಂದಾಗ ಈ ಮೊದಲು ಅನುಭವಿಸಿದ್ದ ಉತ್ಕಟಭಾವ ಸ್ವಲ್ಪವೂ ಕಡಿಮೆಯಾಗಿಲ್ಲದಿರುವುದನ್ನು ಈ ಕವನ ತಿಳಿಸುತ್ತದೆ.

ಕುವೆಂಪು ಅವರು ೧೩.೪.೧೯೨೪ರಲ್ಲಿ The Child and The Flower ಎಂಬ ಕವನವನ್ನು ರಚಿಸಿದ್ದಾರೆ. ಅವರನ್ನುತ್ತಾರೆ, ಹೂವೇ ಹೂವೇ ಹೂವೇ ಹೂವೇ ನಿನ್ನೀ ನಗುವಿಗೇ ಕಾರಣವೇನೇ ಸೂರ್ಯನ ನಿಯಾಮಾನೇ.. ಓಹೋ... ಚಂದ್ರನ ನೆನೆಪೇನೇ... ಎಂದು, ಹೂವಿನ ಚೆಲುವು ಮತ್ತು ನಗುವನ್ನು ಕಣ್ತುಂಬಿಕೊಳ್ಳುವುದೇ ಒಂದು ವಿಶಿಷ್ಟವಾದ ಅನುಭವ, ಮತ್ತು ಒಂದು ಶಿಶುವಿಗೂ ಸುಂದರ ಮೃದುವಾದ ಹೂವಿಗೂ ಯಾವುದೇ ವ್ಯತ್ಯಾಸವಿಲ್ಲ. ಹೂವನ್ನು ಮುಟ್ಟಿದರೇ ಎಷ್ಟು ಆಹ್ಲಾದತೆಯನ್ನು ಕೊಡುತ್ತದೆಯೋ, ಶಿಶುವೂ ಕೂಡ ಅಂತಹುದ್ಧೇ ಆನಂದವನ್ನು ನೀಡುತ್ತದೆ. ಕವಿ ಕುವೆಂಪು ಈ ಕವನವನ್ನು ರಚಿಸುವಾಗ ತಾನು 'ಮಗುವಿಗಿಂತ ಮಗುವಾಗಿಬಿಟ್ಟಿದ್ದೆ. ಕಂಡ ಕಂಡ ಹೂವುಗಳಿಗೆ ಮುತ್ತುಕೊಡಬೇಕು ಎನ್ನಿಸಿತು, ಏಕೆಂದರೆ ಒಂದೊಂದು ಹೂವು ಆ ರೂಪದಲ್ಲಿರುವ ಒಂದೊಂದು ಜೀವವೆ ಎಂದು ಹೇಳಿದ್ದಾರೆ'.[೧೬]

"Had I been a flower on yonder bower,
O! how sweet it would have been !
I would have smiled as a flowery child
And jostled with a flowery queen.
O! then I'd wish a baby's kiss
To greet you upon this green,
While some sweet child, perchance more mild,
Would toddle beside your screen !

I would then be free on yonder tree
To shout, to leap and no dance ;
O! then I shall need no one to feed
Save the dew of divine trance !
My home, the bower and my food, the shower ;
And my light my Mother's glance !
Would you then love me as you do now
If I turn a flower by chance?"[17]

ಈ ಮೇಲಿನ ಸಾಲುಗಳು, ಕುವೆಂಪು ಅವರದು ಎಂತಹ ಮಗುವಿನಂತ ಹೃದಯ, ಅದಕ್ಕೆ ಕಪಟ, ಸುಳ್ಳು, ಮೋಸ ಇವು ಯಾವುದನ್ನು ಅರಿಯದ ಕಂದನಂತೆ ಭಾಸವಾಗುತ್ತಾರೆ. ಅವರು ಶಿಶುಹೃದಯರಾಗಿ ಈ ಮೇಲಿನ ಕವನವನ್ನು ಮುಗ್ಧ ಮನಸ್ಕರಾಗಿ ರಚಿಸಿದ್ದಾರೆ ಎಂದು ತಿಳಿಯುತ್ತದೆ. ಯಾವ ಮಟ್ಟಕ್ಕೆ ಅವರಲ್ಲಿ ಪ್ರಕೃತಿ ಸೌಂದರ್ಯವನ್ನು ಸವಿಯುತ್ತಿದ್ದರು ಎನ್ನುವುದಕ್ಕೆ ಈ ಕವನ ಸಾಕ್ಷಿಯಾಗಿದೆ.

ಇಂಗ್ಲಿಷ್‌ನಲ್ಲಿ ಒಂದು ಉಕ್ತಿ ಇದೆ : 'There is nothing in the world as sweet as a home, East or West, home is the best', ಅಂದರೆ ಮನೆಯಂಬುದು ಒಂದು ಪರಿವಾರ ಅಥವಾ ಕುಟುಂಬದ ಒಗ್ಗಟ್ಟಿನ ಸಂಕೇತವಾಗಿದೆ. ಯಾವುದೇ ವ್ಯಕ್ತಿಯ ತನ್ನ ಮೊದಲ ಹೆಜ್ಜೆ, ಮೊದಲ ತೊದಲು, ಅವನ ಆಟ, ಪಾಠ, ಬಾಲ್ಯ ಎಲ್ಲವೂ ಅಲ್ಲಿಂದಲೇ ಶುರುವಾಗಿರುತ್ತದೆ. ಹುಟ್ಟಿದ ಮನೆ, ಅಲ್ಲಿ ಅಚ್ಚುಮೆಚ್ಚಿನ ಸಾವಿರಾರು ಕನಸುಗಳು, ನೆನಪುಗಳು ಸಂತೋಷ, ದುಃಖ ಪ್ರತಿಯೊಂದು ಭಾವನೆಗಳು ಅಲ್ಲೇ ಹುಟ್ಟುತ್ತವೆ ಮುಂದೆ ಆ ಕನಸುಗಳೇ ಹೆಮ್ಮರವಾಗಿ ಬೆಳೆದು ನಾವು ಎಲ್ಲಿ ಹೋದರು ಅಲ್ಲಿ, ಆ ಪೈರಿನ ಛಾಯೆ ನಮ್ಮಲ್ಲಿ ಹೆಜ್ಜೆ ಹೆಜ್ಜೆಗೂ ಪ್ರತಿಬಿಂಬಿಸುತ್ತಿರುತ್ತದೆ. ಪ್ರತಿ ಮನುಷ್ಯನಿಗೂ ತನ್ನ ಬಾಲ್ಯ ಅತಿ ಮುಖ್ಯವಾದ ಮತ್ತು ಎಂದೂ ಮರೆಯದ ಘಟ್ಟ. ಅಲ್ಲಿ ಕಳೆದ ಒಂದೊಂದು ಕ್ಷಣಗಳು ಅತಿ ಮಧುರ.

ಕವಿ ಕುವೆಂಪು ತಮ್ಮ ಬಾಲ್ಯದಲ್ಲಿ ಅನುಭವಿಸಿದ ಸುಖೀ ಜೀವನದ ಒಂದೊಂದು ಹೂವನ್ನು ಪೋಣಿಸಿ The Joys Of Home ಎಂಬ ಕವನದಲ್ಲಿ ಆ ಸುಂದರವಾದ ಹೂವಿನ ಮಾಲೆಯನ್ನು ಮಾಡಿ ನಮಗೆ ಅರ್ಪಿಸಿದ್ದಾರೆ. ಅದು ಹೀಗಿದೆ:

"How pleasant are the joys of home!
The thought of sweet familiar scenes:
The rural paths where we did roam,
The fields where we did pluck the beans,
The forest glade where oft we sate
Babbling with many a rustic mate!
sadly and sweetly one by one they come,
And pass like phantoms, silent, strange and dumb.

The sweet dear hearts that love us best,
Who fed and clothed and kissed our cheeks,
And who when we departed blest
And followed us up to the peaks;

Who hourly send a thought or two
After us with their blessings true!
Sadly and sweetly phantom-like all come,
and leave us swiftly, silent, strange and dumb."[18]

ಹೀಗೆ ಬಾಲ್ಯದ ನೆನವರಿಕೆಯಾದರೆ, ಬಾಲ್ಯತನವನ್ನು ಪೋಷಿಸುವ ತವರೂರು ಸಹ ಅಷ್ಟೇ ಕಾಡುವುದು. ಕುವೆಂಪು ಮೈಸೂರಿನಲ್ಲಿದ್ದರೂ ಮಲೆನಾಡಿನ ಪರಿಭಾವಿಸಿಕೊಳ್ಳುತ್ತಿದ್ದರು. ಮೈಸೂರಿಗೆ ಹೋಗುವ ಮೊದಲ ತೀರ್ಥಹಳ್ಳಿ, ಶಿವಮೊಗ್ಗಗಳಲ್ಲಿ ಓದುವಾಗಲೂ ಕುಪ್ಪಳಿ ಮನೆ ನೆನಪಾಗುವುದುಂಟು. ಹಾಗೆ ೨೨.೧೧.೧೯೨೩ರಲ್ಲಿ 'ಮನೆಗಿರ'೧೯ ಹಿಡಿದಾಗ ಬರೆದದ್ದು Recollection ಕವನ.

"When with vacant mind I breathe beside
The sunset mere, sweet Home, I muse on thee,
While phantom-like the visions rise: the tree"[20]

ಇದೇ ಮನೆಗಿರ ನನ್ನ ಮನೆ ಕವನದಲ್ಲೂ ಒಡಮೂಡಿದೆ. ೨೭.೧೦.೧೯೨೭ರಲ್ಲಿ ರಚಿಸಿದ ಕವನ.

"ಮನೇ ಮನೇ ಮುದ್ದು ಮನೆ
ಮನೇ ಮನೇ ನನ್ನ ಮನೆ!

ತನ್ನ ತಾಯಿಯೊಲಿದ ಮನೆ,
ನನ್ನ ತಂದೆ ಬೆಳೆದ ಮನೆ;
ನನ್ನ ಗೆಳೆಯರೊಡನೆ ಕೂಡಿ,
ಮುದ್ದು ಮಾತುಗಳನು ಆಡಿ,
ಮಕ್ಕಳಾಟಗಳನು ಹೂಡಿ
ನಾನು ನಲಿದ ನನ್ನ ಮನೆ!"[೨೧]

ಈ ಹಂಬಲ ಅವರು ಮೈಸೂರಿಗೆ ಬಂದು ನೆಲಸಿದ ಮೇಲಂತೂ ಇನ್ನೂ ಹೆಚ್ಚಾಗುತ್ತದೆ. ಕುವೆಂಪು ಅವರು ೬.೧೦.೧೯೨೪ರಲ್ಲಿ ರಚಿಸಿದ ಮತ್ತೊಂದು ಕವನ Recollection ಬದುಕಿನ ಬೇಸರವನ್ನು ಕಳೆಯಲು ಬಾಲ್ಯದ ನೆನೆಹುಗಳನ್ನು ಆಹ್ವಾನಿಸುವಂತಿದೆ. ಜೀವನದ ತುಂಬು ಸಂತೋಷದ ಕ್ಷಣಗಳಾಗಿರುವ ಬಾಲ್ಯಕ್ಕೆ ಮತ್ತೆ ಕರೆಕೊಡುತ್ತಿದ್ದಾರೆ.

"Come, lovely scenes of childhood, come
And cheer these weary hours;
Come like the morning dew and bloom
Life's withered wasted flowers.

When life's sweet sports are fled
And all its flowers are dead,
When smiles are rare and years
Increase the flow of tears,
When colours that once shone
On life's sweet sky are gone,
When beauty, mirth and love
No more soar high above
The trifles of the day
But move towards decay,"[22]

ದೀಪಾವಳಿ ಹೆಸರೇ ಹೇಳುವಂತೆ ದೀಪಗಳ ಸಮೂಹ. ಮನೆಯ ತುಂಬ ಪ್ರಣತಿಗಳನ್ನು ಹಚ್ಚಿ ಅದರ ನಗುವಿನಲ್ಲಿ ನಾವು ನಗುತ್ತಾ ಸಂಭ್ರಮಿಸುವುದು. "ದೀಪಯತಿ ಸ್ವಂ ಪರ ಚ ಇತಿ ದೀಪ". ಇದು ಬೆಳಕಿನ ಹಬ್ಬ. ಈ 'ಬೆಳಕಿನ ಹಬ್ಬ'ವು ನಮ್ಮನ್ನು ಕತ್ತಲೆಯಿಂದ ಬೆಳಕಿನ ಕಡೆಗೆ ಕರೆದೊಯ್ಯುತ್ತದೆ ಎನ್ನುವುದು ನಮ್ಮ ಹಿರಿಯರ ನಂಬಿಕೆ. ದೀಪಾವಳಿಯ ಹಬ್ಬ ಬಂತೆಂದರೇ ಸಾಕು ಮಕ್ಕಳೆಲ್ಲರೂ ಸಂತೋಷದಿಂದ ನಲಿಯುತ್ತಾರೆ ಏಕೆಂದರೆ ಪಟಾಕಿ ಸಿಡಿಸುವ ಹಂಬಲ!

ಕುವೆಂಪು ಅವರು ೧೩.೧೧.೧೯೨೬ರಲ್ಲಿ ಒಂದು A Deepavali Night ಎಂಬ ಕವನವನ್ನು ದೀಪಾವಳಿ ಹಬ್ಬದ ಸಮಯದಲ್ಲಿ ಎಲ್ಲೆಲ್ಲೂ ದೀಪಗಳು ರಾರಾಜಿಸುತ್ತಿರುವುದನ್ನು (ದೀಪಾರಾಜಿಯ ಸುಮನೋಜ್ಞನ ವಿಭವವನ್ನು)[೨೩] ಕಂಡು ಅವರು ಸಂಭ್ರಮದಿಂದ ತಮ್ಮ ಸ್ನೇಹಿತರೊಟ್ಟಿಗೆ ಸೇರಿ ಸಂಭ್ರಮಿಸಿದ ಕ್ಷಣಗಳನ್ನು ಈ ಕೆಳಗಿನ ಕವನದಲ್ಲಿ ಉಲ್ಲೇಖಿಸಿದ್ದಾರೆ.

"Why comest here, sweet Bird,
To this horrific place ?
Here do we weigh each word
To many a thousand place.

We care not horrid smells,
For venom is our breath ;

Sweet Bird, our flowery dells

Are naught but teeth of Death."[24]

ಯಾವುದರಿಂದ ನಾವು ಜೀವನವನ್ನು ನೋಡಬಲ್ಲೆವೋ, ನಮ್ಮನ್ನು ನಾವು ಕಾಣಬಲ್ಲೆವೋ, ನಮ್ಮ ಹಿತಾಹಿತಗಳನ್ನು ಕಂಡುಕೊಳ್ಳಬಲ್ಲೆವೋ – ಅವೆಲ್ಲವೂ ಜ್ಞಾನವೇ ಹೌದು; ಅವೆಲ್ಲವೂ ಬದುಕಿನ ಹಾದಿಯಲ್ಲಿ ಒದಗಿದ ಬೆಳಕೇ ಹೌದು. ಬೆಳಕನ್ನು ದೇವರಿಗೂ ಸಮೀಕರಿಸಲಾಗಿದೆ; 'ಪರಂಜ್ಯೋತಿ' ಎಂದು ಆರಾಧಿಸಲಾಗಿದೆ.

"Behold how do they burn :
The wizard gases rise !
Hopw can they from thee learn
To soar the azure skies?

Hydrogen sings for them,
Oxygen is their sun ;
Their hearts dark gases hem,
How can they know the One?"[25]

ತಮಸೋಮ ಜ್ಯೋತಿರ್ಗಮಯ ಎಂಬ ಮಾತಿನ ಅರ್ಥದಂತೆ ಅಜ್ಞಾನದ ಕತ್ತಲೆಯಿಂದ ಜ್ಞಾನದ ದಿಕ್ಕಿಗೆ ನಮ್ಮನ್ನು ಕೊಂಡೊಯ್ಯುವುದೇ ದೀಪ. ಅಂತರಂಗಲ್ಲಿರುವ ಕತ್ತಲೆಯನ್ನೋಡಿಸಿ, ಬೆಳಕಿನ ಪ್ರಣತಿಯ ಹಚ್ಚಿ ದೀಪ ಬೆಳಗಿಸುವ ಮೂಲಕ ಮನೆ ಮನ ಬೆಳಗುವ ದಿವ್ಯ ಜ್ಯೋತಿಯ ಹಬ್ಬ ದೀಪಾವಳಿ.

ತಮ್ಮ ಬಾಲ್ಯದ ಸಿಹಿ ಅನುಭವಗಳನ್ನು ಕುರಿತು ಕುವೆಂಪು ಅವರು ೩೦.೮.೧೯೨೩ರಲ್ಲಿ ಎಳೆಪ್ರಾಯದ ಮಕ್ಕಳು ಎಂಬ ಕವಿತೆಯನ್ನು ರಚಿಸುವ ಮೂಲಕ ನೆನೆಸಿಕೊಳ್ಳುತ್ತಿದ್ದಾರೆ.

"Merrily we sing, merrily we dance,
On the sliding wings of Time;
We care for no chance, we wield not a lance,
For our morn is more than sublime.
We care not for the coming morrow,
We fly like a merry sparrow,
Skipping and skimming the sea of sorrow.
Our blood is coloured crimson red
For the flower of joy is in our hearts;

We wail not for the roses dead

Nor laugh when sorrow from us parts."[26]

ಉಲ್ಲಾಸಕರವಾಗಿ ಹಾಡುತ್ತಾ, ಕುಣಿಯುತ್ತಾ ಕಳೆಯುವ ನಮ್ಮ ಮುಂಜಾವು ಎಂಥ ಭವ್ಯತೆಗೂ ಮೀರುವಂಥದ್ದು ಎಂದು ಸಂಭ್ರಮಿಸುವುದನ್ನು ಈ ಮೇಲಿನ ಸಾಲುಗಳಲ್ಲಿ ಕಾಣುತ್ತೇವೆ. ಇಂಥ ಬಾಲ್ಯಕ್ಕೆ ಮರಳಲಾಗದ ಅಸಹಾಯಕತೆಯನ್ನು ನೆನೆದ ಕವಿಚೇತನಕ್ಕೆ ಬಾಲ್ಯ ಹಾಗೂ ಮುಪ್ಪುಗಳಲ್ಲಿರುವ ಸಾಮ್ಯ ಮತ್ತು ವೈದೃಶ್ಯಗಳು ಮುಖಾಮುಖಿಯಾಗುತ್ತವೆ. ಮುಪ್ಪಿನಲ್ಲಿರುವ ಮಗುತನದ ಎಲ್ಲಾ ಕುರುಹುಗಳು ಬಾಲ್ಯಕ್ಕೆ ಹತ್ತಿರವಾಗಿ ಅಂದಿನ ಮುಗ್ಧತೆ, ಅಸಹಾಯಕತೆ, ಉತ್ಸಾಹ, ಆನಂದಗಳಿಗೆ ಇಂದಿನ ಆಲಸ್ಯ, ನಿರುತ್ಸಾಹ, ಜಿಗುಪ್ಸೆ ಎದುರಾಗುತ್ತವೆ; ಚಿಂತಿಸುವಂತೆ ಮಾಡುತ್ತವೆ. ಅದಮ್ಯ ಉತ್ಸಾಹದ ಬಾಲ್ಯದ ಗಳಿಗೆಗಳು ಮತ್ತೆ ಬರುತ್ತವೆಯೇ ಎಂಬ ಪ್ರಶ್ನೆಯು ಆಶ್ಚರ್ಯ, ನಿಟ್ಟುಸಿರುಗಳಲ್ಲಿ ರಚಿಸಿದ ಕವನ **ಬಾಲ್ಯ**, ೧೨.೯.೧೯೨೪ರಲ್ಲಿ ರಚಿಸಿದ್ದು.

"ಕಂದನ ಲೀಲೆಯ

ಅಂದಿನ ದಿನಗಳು

ಹಿಂದಕೆ ಬರುವುದೆ ಎಲೆ ಕಂದ?

ಅಂದಿನ ಇಂದುವು

ಇಂದಿಗು ಬಂದರು

ಬಂದುದೆ ಅಂದಿನ ಆನಂದ?"[೨೭]

ಇಂತ ಸುಂದರ ಬಾಲ್ಯದಿಂದ ಯಾವುದೇ ದುಃಖ ದುಮ್ಮಾನಗಳಿಲ್ಲದ ನಿಶ್ಚಿಂತವಾಗಿ, ಆನಂದದಿಂದ ತುಂಬಿಕೊಂಡಿರುವ ಅವಸ್ಥೆಯದು. ಆ ಬಾಲ್ಯಕ್ಕೆ ನೆನ್ನೆ ಎನ್ನುವ ಕಾತುರವಿಲ್ಲ. ತನ್ನೊಳೊಂದಾಗಿ ತಾನೆ ತಾನಾಗಿ ಅಖಂಡ ಸಮಾಧಾನದಲ್ಲಿ ಕಾಲಕಳೆಯುತ್ತಿರುತ್ತದೆ. ಆದ್ದರಿಂದ ಸಾಧು ಸಂತರು ಇಂಥ ಅಮಾಯಕತೆಯನ್ನು ಮೈಗೂಡಿಸಿಕೊಂಡು ಬಾಲ್ಯವತ್ ಜೀವನ ನಡೆಸುತ್ತಿರುತ್ತಾರೆ. ಏನೊಂದು ತಿಳಿಯದಿದ್ದರೂ ಸರ್ವಜ್ಞರಂತೆ ಆಡುವ ಇಂದಿನ ದಿನಮಾನಗಳಲ್ಲಿ ಬ್ರಮಾ ಭಾವದಲ್ಲಿದ್ದುಕೊಂಡೂ ಏನು ತಿಳಿಯದವರಂತೆ ವ್ಯವಹರಿಸುವಲ್ಲಿ ಸಿಗುವ ಆ ಅಮಾಯಕತೆ, ಆ ತುಂಟಾಟ ಚೆಲ್ಲಾಟಗಳು, ಆ ಜೀವಜ್ಯೋತಿ, ಎಂದಿಗೂ ಬತ್ತದ ಅದಮ್ಯ ಉತ್ಸಾಹ, ಹೊಳೆಯಾಗಿ ಹರಿಯುವ ಚೈತನ್ಯದೊಂದಿಗೆ ಒಂದುಗೂಡಿ ಬಾಲ್ಯವನ್ನು ಅವಿಸ್ಮರಣೀಯವನ್ನಾಗಿಸಿ ಬಿಡುತ್ತದೆ.

ನಿಜಕ್ಕೂ ಇಂಥ ಸುಂದರ ಬಾಲ್ಯದ ಸುಮಧುರ ರಸನಿಮಿಷಗಳನ್ನು ಅನುಭವಿಸುವ ಜೀವಿಯೇ ಧನ್ಯ. ಆದ್ದರಿಂದಲೇ ನಿರ್ವಿಕಾರ ನಿರಾಕಾರ ನಿರ್ಗುಣನಾಗಿರುವಂಥ ಆ ಪರಮಾತ್ಮನು ಇಂಥ ಸುಮಧುರ ಕ್ಷಣಗಳನ್ನು ಅನುಭವಿಸುವ ಆಸೆಯಿಂದಲೋ ಏನೋ ಒಮ್ಮೊಮ್ಮೆ ಸಾಕಾರ ಸವಿಕಾರ ಸಗುಣ ರೂಪವನ್ನು ತಾಳಿ ಈ ವಸುಂಧರೆಯಲ್ಲಿ ಜನ್ಮ ತಾಳುತ್ತಾನೆನೋ ಎಂದೆನಿಸುತ್ತದೆ.

**ಕೊನೆ ಟಿಪ್ಪಣಿ:**

೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೨೪೦, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨. ಕುವೆಂಪು ; ನೆನಪಿನ ದೋಣಿಯಲ್ಲಿ ; ಪುಟ ೩೨–೩೩, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೩೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೫, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೪. William Wordsworth ; Intimations of Immortality ; Page 15 , First Edition 1884, D Lothrop co, Boston.

೫. ಅದೇ, ಪುಟ ೨೪.

೬. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೧೮, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೪೨, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೮. ಅದೇ, ಪುಟ ೯೪೧.

೯. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೪೨೯, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೦. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೫೬–೯೫೭, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೧. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೫೧೬, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೨. ಅದೇ, ಪುಟ ೫೧೮.

೧೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೮೦, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೪. ಅದೇ, ಪುಟ ೯೮೧.

೧೫. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೫೧೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೧೬. ಅದೇ, ಪುಟ ೩೧೭.

೧೭. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೯೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೮. ಅದೇ, ಪುಟ ೯೯೫-೯೯೬.

೧೯. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೨೨, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೦. ಅದೇ, ಪುಟ ೨೨೨.

೨೧. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೫, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೦೬, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೩. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೨೩, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೪. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೨೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೫. ಅದೇ, ಪುಟ ೧೦೨೧.

೨೬. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೧೭, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೭. ಅದೇ, ಪುಟ ೪೨೯.

* * * * * *

# ಸಂಕೀರ್ಣ ಕವಿತೆಗಳಲ್ಲಿ ವಿಭಿನ್ನ ನೆಲೆಗಳು

ಕುವೆಂಪು ಅವರು ಆ ಹತ್ತೊಂಬತ್ತನೆಯ ವಯಸ್ಸಿನಲ್ಲಿಯೇ ಅಶಾಂತಿಯನ್ನು ಸಹಿಸದ ಮಾತೃಹೃದಯಿ ತರುಣರವರು, ಅವರಿಗೆ ಕ್ರೌರ್ಯ, ಅಸಹನೆ, ಆಕ್ರಮಣಗಳ ಮೇಲೆ ಧಿಕ್ಕಾರವಿತ್ತು. ತಪ್ಪು ಮಾಡಿದವರನ್ನೂ ಕ್ಷಮಿಸುವ ಗುಣವನ್ನೇ ಮೂಲವಾಗಿಸಿಕೊಂಡು ಹಲವಾರು ಕವಿತೆಗಳ ರಚನೆಯಾಗಿದೆ. ವಿಶ್ವ ಮಾನವ ಸಂದೇಶ ಅಂದರೆ ಪ್ರತಿಯೊಂದು ಮಗುವೂ ಹುಟ್ಟುತ್ತಲೆ ವಿಶ್ವಮಾನವನಾಗಿ ಹುಟ್ಟುತ್ತಾನೆ. ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರಗಳನ್ನು ತಮ್ಮ ಕವಿತೆಗಳಲ್ಲಿ ಪ್ರತಿಪಾದಿಸಿದ್ದಾರೆ. ಮತಭ್ರಾಂತಿಯೂ ಮೌಢ್ಯವೂ ವೈಜ್ಞಾನಿಕ ಪ್ರಗತಿಗೆ ಹೇಗೆ ಮಹಾ ಕಂಟಕಗಳಾದವು ಎಂಬುದನ್ನು ಅವರ ಕವಿತೆಗಳಲ್ಲಿ ಕಾಣಬಹುದು. ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ ಎಂಬ ಅವರ ಕರೆಗೆ ಆ ಕವಿತೆಗಳು ಸ್ಪಷ್ಟವಾದ ಉದಾಹರಣೆ ಗಳಾಗಿವೆ.

ಪ್ರೇಮ ಬಹುಮುಖಿಯಾದುದಾದರೂ, ಅದರ ಸ್ವರೂಪ ಸತ್ವ ಪರಿಣಾಮಗಳಲ್ಲಿ ಸಾಮ್ಯವಿದೆ. ಪತಿಸತಿಯರ ಪ್ರೇಮ, ಸೋದರ ಸೋದರಿಯರ ಪ್ರೇಮ, ತಂದೆ ಮಕ್ಕಳ ಪ್ರೇಮ, ನೆರೆಹೊರೆಯವರ ಪ್ರೇಮ, ಗೆಳೆಯರ ಪ್ರೇಮ, ಗುರುಶಿಷ್ಯರ ಪ್ರೇಮ, ಪುಸ್ತಕ ಪ್ರೇಮ, ಕ್ರೀಡಾ ಪ್ರೇಮ, ದೇಶ ಪ್ರೇಮ, ಈ ಪಟ್ಟಿಯನ್ನು ಹೀಗೆಯೇ ಲಂಬಿಸಬಹುದು. ಒಟ್ಟಿನಲ್ಲಿ ಕುಟುಂಬ, ಸಮಾಜ, ದೇಶ, ಜಗತ್ತುಗಳ ಶಾಂತಿಗೆ, ಐಕ್ಯಕ್ಕೆ ಹಾಗೂ ಭದ್ರತೆಗೆ, ಸಾಮರಸ್ಯಕ್ಕೆ ಶಿವ ಸ್ವರೂಪಿಯಾದ ಪ್ರೇಮವೇ ಮೂಲ ಕಾರಣವೆಂಬುದಂತು ದಿಟ.

## ೬.೧. ಸಂಕೀರ್ಣ ಕವಿತೆಗಳು

ತೈಮೂರ (೧೩೩೬–೧೪೦೫ ಎ.ಡಿ) ಅವನು ಮಧ್ಯ ಏಷ್ಯಾದ ಮಿಲಿಟರಿ ಕಮಾಂಡರ್. ಅವನು ಪುಂಖಾನು ಪುಂಖವಾಗಿ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳುವಲ್ಲಿ ಜಯಗಳಿಸಿದವನು. ಒಂದು ಯುದ್ಧದ ಸಂದರ್ಭದಲ್ಲಿ ಅವನ ಒಂದು ಕಾಲು ಗಾಯಗೊಂಡಿದ್ದು, ಆ ಗಾಯದ ಊನ ತನ್ನ ಜೀವಿತಾವಧಿಯಲ್ಲಿ ಉಳಿದಿತ್ತು. ಮುಂದೆ ಅವನು 'ಕುಂಟ ತೈಮೂರ'ನೆಂದೇ ಹೆಸರುವಾಸಿಯಾದನು. ಪರ್ಷಿಯನ್ನರು ಅವನನ್ನು 'ತಿಮುರ್–ಇ–ಲಾಂಗ್' ಎಂದು ಕರೆಯುತ್ತಿದ್ದರು. ಅದನ್ನೇ ಕುವೆಂಪು ಅವರು ತಮ್ಮ ಕವಿತೆಯಲ್ಲಿ Timoor the lame

ಎಂದು ಕರೆದಿರುವುದು. ಈತ ಮಂಗೋಲಿಯಾ ಮೂಲದ ಮುಸಲ್ಮಾನ ದೊರೆ. ತೈಮೂರ ಅಫ್ಘಾನಿಸ್ತಾನ್, ಪರ್ಷಿಯಾ, ಸಿರಿಯಾ, ಕುರ್ದಿಸ್ಥಾನ್, ಬಾಗ್ದಾದ್, ಜಾರ್ಜಿಯಾ ಮತ್ತು ಏಷ್ಯಾದ ಕೆಲವು ಭಾಗಗಳನ್ನು ಮತ್ತು ಟ್ರಾನ್ಸಾಕ್ಸಿಯಾನವನ್ನು ಒಳಗೊಂಡ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದ. ಅವನು ದಕ್ಷಿಣ ರಷ್ಯಾ ಮತ್ತು ಭಾರತದ ಅನೇಕ ಭಾಗಗಳನ್ನು ಲೂಟಿ ಮಾಡಿದನು. ಅದರಲ್ಲೂ ಅವನ ಕ್ರೂರ ದಾಳಿಯಿಂದಾಗಿ ದೆಹಲಿ ಪ್ರಮುಖವಾಗಿ ನಲುಗಿಹೋದ ಪ್ರದೇಶ. ತೈಮೂರ ಕಾಲಿಟ್ಟಲೆಲ್ಲ ವಿನಾಶ, ಸಾಮೂಹಿಕ ಹತ್ಯೆ, ಸುಡುವಿಕೆ, ಲೂಟಿ, ಮಹಿಳೆಯರಿಗೆ ಅಪಮಾನ ಮಾಡುವುದು ಸಾಮಾನ್ಯವಾಗಿ ಹೋಗಿತ್ತು. ೧೩೯೮ರಲ್ಲಿ ತೈಮೂರ ಉತ್ತರ ಭಾರತವನ್ನು ಆಕ್ರಮಿಸಿದನು. ಇದು ತುಘಲಕ್ ಸಾಮ್ರಾಜ್ಯದ ಸುಲ್ತಾನ್ ನಸಿರ್-ಉದ್-ದಿನ್ ಮಹಮೂದ್ ಷಾ ತುಘಲಕ್ ಆಳ್ವಿಕೆಯ ದೆಹಲಿ ಸುಲ್ತಾನರ ಮೇಲೆ ಆಕ್ರಮಣ ಮಾಡಿತು.

ಕುವೆಂಪು ಅವರು ತಮ್ಮ ಬಿಗಿನರ್ಸ್ ಮ್ಯೂಸ್ ಬರೆಯುವ ಹೊತ್ತಿಗೆ (೧೯೨೨) ಅವರ ವಯಸ್ಸು ೧೯. ಆ ವಯಸ್ಸಿನಲ್ಲಿಯೇ ಅಶಾಂತಿಯನ್ನು ಸಹಿಸದ ಮಾತೃಹೃದಯಿ ತರುಣರವರು, ಅವರಿಗೆ ಇಂತಹ ಆಕ್ರಮಣಗಳ ಮೇಲೆ ಧಿಕ್ಕಾರವಿತ್ತು. ಅವರ ದೆಹಲಿಯ ಕಗ್ಗೊಲೆ (The Massacre of Delhi) ಎಂಬ ಈ ಕವಿತೆಯಲ್ಲಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

"A youth came running on the road,
And rush'd into a house;
His gasping breath, his frighten'd mood
Was like a hunted mouse.

Oh! father, mother, sister, all,
away to wood-land den;
Bestir! O quickly from his hall
Ere chas'd by horrid men"1

ಮಗನೊಬ್ಬ ಓಡಿ ಬಂದು ತಂದೆ ತಾಯಿಯರಿಗೆ ನಡೆಯುತ್ತಿರುವ ಕಗ್ಗೊಲೆಯ ಸಂಗತಿ ತಿಳಿಸಿ, ತಡಮಾಡದೆ ಓಡಿ ತಪ್ಪಿಸಿಕೊಳ್ಳಲು ಹೇಳುತ್ತಾನೆ. ಆದರೆ ಅವರೆಲ್ಲ (ತಂದೆ, ತಾಯಿ, ಮಗ, ತಂಗಿ, ಒಂದು ಮಗು) ರಸ್ತೆಯಲ್ಲಿ ಓಡುತ್ತಿದ್ದಾಗಲೇ ಕರಾಳ ಸೈನಿಕ ಕೊಲೆಗಾರರು ಧಾವಿಸಿ ಬರುತ್ತಾರೆ.

"But father turn let us defend,
let mother, sister run;

Run, mother! Oh run to the end;
But shun these hellish men!"

"Smash them down" the foeman cried,
And hundred swords did flash
Above their heads. The mother eyed
Each horrid wofulgash.
Before her kiss had left the cheek,
The Afghan sword had met
Her throat; and with a moaning squeak,
Down dropt before her pet!"[2]

ಮಗ ತಂದೆಗೆ ಹೇಳುತ್ತಾನೆ: 'ನಾವಿಬ್ಬರೂ ಸೈನಿಕರನ್ನು ಎದುರಿಸೋಣ, ಅಮ್ಮ ತಂಗಿ ಮಗು ಓಡಿಹೋಗಿ ತಪ್ಪಿಸಿಕೊಳ್ಳಲಿ.' ತಂದೆ ಮಕ್ಕಳಿಬ್ಬರೂ ಪ್ರತಿಭಟಿಸಿ ಭಟರ ಖಡ್ಗಗಳಿಗೆ ತುತ್ತಾಗುತ್ತಾರೆ. ಸೈನಿಕರು ಮುನ್ನುಗ್ಗಿ ತಪ್ಪಿಸಿಕೊಳ್ಳಲು ಓಡುತ್ತಿರುವ ತಾಯಿ ಮಗಳು ಮಗು ಎಲ್ಲರನ್ನೂ ಕತ್ತರಿಸುತ್ತಾರೆ. ಈ ಕವಿತೆಯ ಕಡೆಯ ಸಾಲುಗಳು ಹೀಗಿವೆ–

"Smash down the child! smash down the child!"
Her childish head off goes;
Tho' yet a' child she dying cried,
"Oh Heaven Forgive my Foes."[3]

ಇಲ್ಲಿ ಒಂದು ಚಿಕ್ಕ ಮಗು ಸಾವಿನ ಅಂಚಿನಲ್ಲಿ ನರಳುತ್ತಿದ್ದರೂ ಆ ನೋವಿನಲ್ಲಿಯೇ ಜೋರಾಗಿ ಹೇಳುತ್ತಾಳೆ– ಓ ದೇವರೆ ನನ್ನ ಶತ್ರುಗಳನ್ನು ಕಾಪಾಡು. ಅವರ ತಪ್ಪನ್ನು ಕ್ಷಮಿಸು. ಇಲ್ಲಿ ಕ್ರಿಸ್ತನ ಮಾತುಗಳು ನೆನಪಿಗೆ ತರುತ್ತದೆ, ಅದೇನೆಂದರೆ ಏಸು ಎಂದರೆ ತಕ್ಷಣ ಎದೆ ತುಂಬುವ ಭಾವ ಕ್ಷಮೆ. ಏಸು ಕ್ಷಮಾಗುಣದ ಪ್ರತಿನಿಧಿ. ನಿನ್ನ ತಪ್ಪುಗಳಿಗೆ ಪಶ್ಚಾತಾಪ ಪಡು. ಬೇರೆಯವರ ತಪ್ಪುಗಳನ್ನು ಕ್ಷಮಿಸು. ಅದೇ ರೀತಿ ಕುವೆಂಪು ತಮ್ಮ ಕವಿತೆಯಲ್ಲಿ ಅದೇ ಭಾವವನ್ನು ನಿರೂಪಿಸಿರುವುದು ಹೀಗೆ– ತಂದೆಯೇ ಅವರನ್ನು ಕ್ಷಮಿಸಿರಿ. ಯಾಕೆಂದರೆ ಅವರಿಗೆ ತಾವು ಏನು ಮಾಡುತ್ತಿದ್ದೇವೆನ್ನುವುದು ತಿಳಿದಿಲ್ಲ ಎಂದು.

ಕುವೆಂಪು ಅವರ ಬಿಗಿನರ್ಸ್ ಮ್ಯೂಸ್ ಕವನ ಸಂಕಲನದ ಕವಿತೆಗಳಾದ The Urban Scenes ಮತ್ತು The Rural Scenes ಎಂಬೆರಡು ಕವಿತೆಗಳು ಮಿಲ್ಟನ್ ಕವಿಯ L'Allegro ಮತ್ತು II Penseroso ಕವನಗಳ ಅನುಕರಣೆಗಳು.[೪]

ಕುವೆಂಪು ಅವರು ಜಾನ್ ಮಿಲ್ಟನ್ ಕವಿಯ L'Allegro ಈ ಕವಿತೆಯಲ್ಲಿನ ಮೂಲ ಅಂಶಗಳಾದ ಗ್ರಾಮೀಣ ಪ್ರದೇಶಗಳ ಸಂತೋಷ ಮತ್ತು ಸಂಭ್ರಮಗಳನ್ನ, ನಗರ ಪ್ರದೇಶದ ಜೀವಂತಿಕೆಯನ್ನ ಕೀರ್ತಿಸುವ ಮಿಲ್ಟನ್ ಕವಿಯ L'Allegro ಕವಿತೆಯಿಂದ ಕುವೆಂಪು ಪ್ರಭಾವಿತರಾಗಿದ್ದರು. ಅದರ ಪ್ರಭಾವದಿಂದಲೇ ರಚಿತವಾದ ಎರಡು ಕವನಗಳು The Urban Scenes ಮತ್ತು The Rural Scenes.

ಮಿಲ್ಟನ್ ಮಹಾಕವಿ ಒಬ್ಬ ಮನೋಜ್ಞವಾಗಿ ದೃಶ್ಯಗಳನ್ನು ಸೃಷ್ಟಿಮಾಡುವ ಜಾದುಗಾರ, ಏಕೆಂದರೆ ಅವನು ಜಗತ್ತಿಗೆ ಸಮರ್ಪಿಸಿರುವ ಕವನಗಳ ಗುಚ್ಛವನ್ನು ತೆರೆದು ನೋಡಿದರೆ ರೋಮಾಂಚನಗೊಳ್ಳುತ್ತೇವೆ. ಉದಾ:

"In Heav'n yclept Euphrosyne,
And by men, heart-easing Mirth,
Whom lovely Venus at a birth
With two sister Graces more
To ivy-crowned Bacchus bore"[5]

ಮಹಾಕವಿ ಮಿಲ್ಟನ್‌ನಿನ ಈ ಕವನವು ಒಂದು ಸ್ತುತಿ ಗೀತೆಯ ಮಾದರಿಯನ್ನು ಅನುಸರಿಸಿದೆ. ಮಿಲ್ಟನ್ ಈ ಮೇಲಿನ ಪದ್ಯದ ಮೂಲಕ ಮಿರ್ತ್ ಅಥವಾ ಯುಫ್ರೋಸೈನ್ ಮತ್ತು ಅವಳ ದೈವಿಕ ಪಾಲಕರನ್ನು ಆಹ್ವಾನಿಸುತ್ತಿದ್ದಾನೆ.

ಕುವೆಂಪು ಅವರು ವಿದ್ಯಾರ್ಥಿ ದೆಸೆಯಿಂದ ಶ್ರೀ ರಾಮಕೃಷ್ಣ ಮಠದ ಸಂಬಂಧ ಹೊಂದಿದ್ದ ಕುವೆಂಪು ಅವರಿಗೆ ಶ್ರೀ ರಾಮಕೃಷ್ಣರು, ವಿವೇಕಾನಂದರು, ಗಾಂಧೀಜಿ ಇವರ ಆದರ್ಶ, ಚಿಂತನೆ, ವಿಚಾರಗಳು ರಕ್ತಗತಗತವಾದವು. ಹೀಗಾಗಿ ಅವರದು ಸಿದ್ಧ ಸಂಪ್ರದಾಯಗಳನ್ನು ಒಪ್ಪದ ತೆರೆದ ಮನಸ್ಸು. ಜಾತಿ ವ್ಯವಸ್ಥೆ, ಮೂಢ ನಂಬಿಕೆಗಳು, ಸಾಂಸ್ಥಿಕ ಮತ ಧರ್ಮಗಳನ್ನು ಅವರು ನಿರಾಕರಿಸಿದರು. ವೈಜ್ಞಾನಿಕ ಪ್ರಗತಿಯಾದಷ್ಟೂ, ಗ್ರಾಮೀಣ ಪ್ರದೇಶದ ಅಜ್ಞಾನ ಜನ್ಯ ಮೂಢ ನಂಬಿಕೆಗಳಿರಲಿ, ವಿದ್ಯಾವಂತ ನಗರ ನಿವಾಸಿಗಳಲ್ಲೂ ಮೌಢ್ಯ ಹೆಚ್ಚುತ್ತಿರುವ ಕಾಲದಲ್ಲಿ, ಆಧ್ಯಾತ್ಮವನ್ನು ಹೊರತುಪಡಿಸದೆ, ಕುವೆಂಪು ಅವರ ವೈಚಾರಿಕ ನಿಲುವುಗಳು ಹೆಚ್ಚು ಪ್ರಸ್ತುತವಾಗುತ್ತವೆ. ರಾಜ ಪ್ರಭುತ್ವವನ್ನು ವಿರೋಧಿಸಿದ ಅವರು ಸರ್ವ ಸಮಾನತೆಯನ್ನು ಪ್ರತಿಪಾದಿಸಿದರು. ಅವರ ಎರಡು ಕಾದಂಬರಿಗಳೂ ಟಾಲ್‌ಸ್ಟಾಯ್ ಕೃತಿಗಳಂತೆ ಕ್ಲಾಸಿಕ್‌ಗಳಾಗಿವೆ. ಅಲ್ಲಿಯ ಪಾತ್ರಗಳಲ್ಲಿ ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ. ಮಲೆನಾಡಿನ ಹೊಲಗದ್ದೆಗಳಲ್ಲಿನ ಜೀತಾಳುಗಳು, ಅವರು ಯಾವುದೇ ಜಾತಿಯವರಿರಲಿ, ನೋವು ಸಂಕಟ ಬವಣೆಗಳನ್ನು ಸಹಿಸುತ್ತ ಬದುಕುವ ಬಗೆಯೂ, 'ಶ್ರೀ ರಾಮಾಯಣದರ್ಶನಂ'ನ ರಾಮ, ಸೀತೆ, ರಾವಣಾದಿ ಪಾತ್ರಗಳಷ್ಟೆ ಮಹತ್ವ ಪೂರ್ಣವಾದುವುಗಳು. ಕುವೆಂಪು 'ಶ್ರೀ ಸಾಮಾನ್ಯ'ನನ್ನು ಕಂಡರಿಸಿದರು. ಕುವೆಂಪು ಅವರ

ಬದುಕಿನ ಸಂದೇಶವೆಂದರೆ 'ವಿಶ್ವಮಾನವ ಸಂದೇಶ' ಮತ್ತು 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಅದಿಕವಿ ಪಂಪನ ವಾಣಿಯನ್ನು ಉದ್ಧರಿಸಿ ಹೇಳಿದರು. ಸರ್ವ ಸಮಾನತೆ, ಸರ್ವೋದಯ, ಸಮನ್ವಯ ತತ್ವಗಳನ್ನು ವಿವರಿಸಿದರು. ಆ ಮತ ಈ ಮತಗಳ ಕಬಂಧ ಬಂಧಕ್ಕೆ ಒಳಗಾಗದೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ ಅಷ್ಟು ಮತಗಳಿರಲಿ ಎಂದರು. ವ್ಯಕ್ತಿ ಎಲ್ಲ ಬಗೆಯ ಸಾಮಾಜಿಕ ಮತೀಯ ಸಂಕುಚಿತತೆಗಳಿಂದ ಮುಕ್ತನಾಗಿ ವಿಶ್ವ ಮಾನವನಾಗಲಿ ಎಂದು ಹಾರೈಸಿದರು.

The Rural Scenes- ಹಳ್ಳಿಯ ಚೆಲುವು, ಮುಗ್ಧತೆಗಳನ್ನು ವರ್ಣಿಸಿದರೆ, The Urban Scenes- ಹಳ್ಳಿಯ ಜೀವನದ ಅನುಕೂಲತೆಯನ್ನು ಮೂದಲಿಸಿ ತಿರಸ್ಕರಿಸಿ ಪಟ್ಟಣದ ನಾಗರೀಕ ಜೀವನದ ಮೇಲ್ಮೈಯನ್ನು ಘೋಷಿಸುತ್ತದೆ. ಆ ಹಂತದಲ್ಲಿ ಕವಿಗೆ ವಸ್ತು ಆಶಯಗಳಿಗಿಂತ ಕವಿತೆ ಬರೆಯುವ ಉತ್ಸಾಹವೇ ಮುಖ್ಯವಾಗಿತ್ತೆಂಬುದು ಇದರಿಂದ ತಿಳಿಯುತ್ತದೆ; ಜೊತೆಗೆ ಅನುಕರಣೆ ಮಾಡುವಾಗ ಸ್ವಂತಿಕೆಗೆ ಎಲ್ಲಿ ಅವಕಾಶ? ಕುವೆಂಪು ಅವರ The Rural Scenes ಕವಿತೆಯ ಪ್ರಥಮ ಸಾಲುಗಳು ಹೀಗಿವೆ–

"Avaunt, ye weary scenes,
Of streets tumultuous and mansions high,
Begot but recently
"By Mammon's craft to rase the jovial greens!
Let gloomy minds abide,
And taste those jolloties, to suffer loss,
Like those who from the glass
Of Circle, drunk full I the Necromantic Drugs,
And turn'd to hateful slugs.
Tho' human senses sacred, yet undied."[6]

ಕುವೆಂಪು ಅವರು ಮೈಸೂರಿನಿಂದ ತಮ್ಮ ಹುಟ್ಟೂರಿಗೆ ತೆರಳಿದಾಗ ನಗರವಾಸದ ದೃಶ್ಯಗಳು ಅವರ ಕಣ್ಣಲ್ಲಿ ತುಂಬಿಹೋಗಿದ್ದ ಕಾರಣ ಆ ಚಿತ್ರಗಳು ಅವರು ತಮ್ಮ ಹಳ್ಳಿಗೆ ಮರಳಿದಾಗಲೂ ಹೀಗೆ ಮರುಕಳಿಸಿವೆ– ಎತ್ತೆತ್ತರದ ಮಹಲುಗಳು ಮತ್ತು ಸದಾ ಗಲಾಟೆ ಗದ್ದಲ ತುಂಬಿದ ಹಾದಿಗಳು. ಇವೆಲ್ಲವುಗಳು ಇತ್ತೀಚೆಗೆ ಬಂದಿರುವವು, ಪ್ರಕೃತಿಯನ್ನು ನಾಶ ಮಾಡಿ ಶ್ರೀಮಂತಿಕೆಯ ದರ್ಪದಲ್ಲಿ ಮುಳುಗಿ ಐಷಾರಾಮಿ ಸುಖ ಭೋಗಗಳಲ್ಲಿ ಸದಾ ಆ ಅಮಲಿನಲ್ಲಿ ಮುಳುಗಿ ಮಾದಕ ದ್ರವ್ಯಗಳಿಗೆ ಶರಣಾಗಿ, ಅದರಿಂದ ಆಲಸಿಗಳಾಗಿ, ಇಂಥ ಮನುಷ್ಯರ ಇಂದ್ರಿಯಗಳು ಕೂಡ ಪವಿತ್ರವಾದವು ಮತ್ತು ಸಾವೂ ಕೂಡ ಅಂತಹವರ ಹತ್ತಿರ ಸುಳಿಯುವುದಿಲ್ಲ ಎಂದು

ಅಣುಕಿಸುತ್ತಾ ಅದನ್ನು ಧಿಕ್ಕರಿಸುತ್ತಾ, ನನ್ನ ಕಣ್ಣಿಂದ ನೀವೆಲ್ಲ ತೊಲಗಿಬಿಡಿ, ನಾನು ಇಲ್ಲಿಗೆ ಬಂದಿರುವುದು ಹಳ್ಳಿಯ ಸೌಂದರ್ಯವನ್ನು ತುಂಬಿಕೊಳ್ಳಲು ಎಂದು ಹೇಳುತ್ತಿದ್ದಾರೆ.

"Hail, thou son Hermes, Pan!
Hail, thou ancient site of man!
Clad with buxom grass so green,
And bright like blithe Elysian scene,
Wheree Zephyrs play on hill and dale,
And Aglain adorns the vale
With roses red and lilies white,
to plese her sisters, Thalia bright
and gay-ful Mirth; and Eco sings
On murmuring brooks and dancing springs
Dight with cIoaks of verdant hue
Her lover fair again to woo,
Whom the Gods turn's to a flower
And emblem of a lady's bower."[7]

ಗ್ರೀಕ್ ಪುರಾಣದ ಪ್ರಕಾರ ಪ್ಯಾನ್ ಎಂಬುವವನು ದೇವತೆ ಹೆರ್ಮೆಸ್‌ನ ಮಗ. ಅವನು ವನ, ಬನ, ಶಿಖರಗಳ ಮತ್ತು ದನಗಾಹಿಗಳ ದೇವತೆ. ಅ ದೇವತೆಯನ್ನು ಪ್ರಾರ್ಥಿಸುತ್ತಾ, ಹಚ್ಚ ಹಸುರಾಗಿ ಬೆಳೆದು ಸಂತೋಷದಿಂದ ಕಂಗೊಳಿಸುತ್ತಾ ಸ್ವರ್ಗೀಯವಾದ ಅನುಭವವನ್ನು ಪಸರಿಸುತ್ತಾ ನಿಂತಿರುವ ಹುಲ್ಲು ಹಾಸಿಗೆಯೇ, ತಂಪಾಗಿ ಬೀಸುತ್ತಿರುವ ತಂಗಾಳಿಯ ಜೊತೆ ಆಟವಾಡುತ್ತಿರುವ ಗಿರಿ ನದಿ ಕಣಿವೆಗಳೇ, ಗುಲಾಬಿಗಳು ಕೆಂಗುಲಾಬಿಗಳಾಗಿ, ನೈದಿಲೆಗಳು ಬಿಳುಪಾಗಿ, ನದಿಕಣಿವೆಗಳ ಅರಸನಾಗಿ ಅಗ್ಲೈನನು, ತನ್ನ ಸೋದರಿಯರನ್ನು (ಕೆಂಗುಲಾಬಿ ಮತ್ತು ಮಲ್ಲಿಗೆ ಹೂ) ಸಂತಸಪಡಿಸಲು ಗೀತ ವಿನೋದಗಳನ್ನು ಆಚರಿಸುತ್ತಾ, ಸಂತಸಗಳು ಮೈದುಂಬಿ, ತನ್ನ ಕಣಿವೆಯಿಂದ ಮರ್ಮರದ ತೊರೆಯ ಸದ್ದಿನಲಿ, ವರ್ಣಾತಿವರ್ಣಗಳ ಉಡುಗೆ ತೊಡುಗೆಗಳ ಧರಿಸಿ, ಕುಣಿವ ಕಾರಂಜಿಗಳ ಮೇಲೆ ಅವಳ ಪ್ರಿಯಕರ ಮತ್ತೆ ದೇವತೆಗಳು ಹೂವಾಗಿಸಿದವಳ ಓಲೈಕೆಯಲಿ ಲತೆಯಾಸರೆಯ ಮರವಾದವನ ಲಾಂಛನದಲ್ಲಿ ಎಂದು ಕವಿ ಹಳ್ಳಿಯ ಸೊಗಸನ್ನು ಕಂಡು ಅದನ್ನು ಸಂಭ್ರಮಿಸಿ ವರ್ಣಿಸುತ್ತಿದ್ದಾರೆ.

"The farmers rustic often meet
The Graces three, those maidens fair

Who always dwell with song and lyre,
To charm the farmers on their way
When they hie to gather hay.
And Hours that deck the seasons four
With fine arcades and ivy door,
To greet their guest of extent high,
Phoebus who lyre his attributes,
Far high than wordly bows and flutes."[8]

ಈ ಸಾಲುಗಳಲ್ಲಿ– ಎಲ್ಲಾ ಹಳ್ಳಿಯ ರೈತರುಗಳು ಮತ್ತೆ ಮತ್ತೆ ಅಲ್ಲಿ ಸೇರಿಕೊಳ್ಳುವರು. ಸೌಂದರ್ಯ, ಪ್ರಕೃತಿ, ಮನುಷ್ಯನ ಸೃಜನಾತ್ಮಕತೆಗೆ ಮತ್ತು ಫಲವತ್ತತೆಗೆ ದೇವತೆಯಾದ ಗ್ರೇಸ್ ಸೋದರಿಯರು ಆ ಮೂವರೂ ಸುಂದರಿಯರು ಬರುವರಿಲ್ಲಿಗೆ, ಅವರುಗಳು ಸದಾ ಗೀತ, ಸಂಗೀತಗಳಲ್ಲಿ ತೇಲುತ್ತಿರುವರು. ಅವರನ್ನು ಸಂತೋಷಪಡಿಸಲು ಹುಲ್ಲು ಸೊಪ್ಪನು ತರುವ ರೈತನು, ನಾಲ್ಕು ಋತುಗಳು, ಸುಂದರ ಕಮಾನುಗಳು, ಲತಾಕುಂಜಗಳು, ಮೇಲಿಂದ ಬರುವ ದೇವತೆಗಳನ್ನು ಸ್ವಾಗತಿಸಲಿಕ್ಕೆ, ಗ್ರೀಕ್‌ನ ಬೆಳಕಿನ ದೇವತೆಯಾದ ಫೀಬಿಯಸ್ಸನು, ಗಗನದಿಂದ ಕೆಳಗಿಳಿದು ಬರುವ ಬಿಲ್ಲು ಬಾಣಗಳೊಂದಿಗೆ (ಗುಡುಗು ಮಿಂಚುಗಳು), ಕಾಮನಬಿಲ್ಲುಗಳು ಅದವನ ಲಾಂಛನವು. ಈ ಮರ್ತ್ಯದೊಳಗಿನೆಲ್ಲ ಕಮಾನು ಕೊಳಲುಗಳಿಗಿಂತ ಮಹತ್ತಿನದು. ಅಂದರೆ ಇಡೀ ಪ್ರಕೃತಿಯೇ ಆ ದೇವತೆಗಳನ್ನು ಬರಮಾಡಿಕೊಳ್ಳಲು ಹೀಗೆ ಅಣಿಯಾಗಿದ್ದಾರೆ ಎಂದು ಕವಿ ವರ್ಣಿಸುತ್ತಿದ್ದಾರೆ.

"And now I wish to walk the mead,
To gaze at mother Nature's breed,
Amid the bosky land in buxom mood
And' view the stately Aloes-wood,
Whose creasted flowers stretch long and straight
Far above its leafy height,
Like an abode of pygmy Elf,
Who troubles oft the sleeping self
Of loney farmer bold, with dreams
And oft with loud and horrid screams,
Or steal a child for mischief's sake

To lill it smooth beside a lake;
And pluck a lovely bosomed rose
Whose worth the canker tries to rase;
And extol the grace of Jove
Who from his stately throne above,
Sends rain, to fertile lands below,
To ease the farmer and his plough,
And myriad flowers each in its hue
Pied by Iris fair in tincture blue,
Red and purple, white and green,
That deck the space so fair and sheen."[9]

ಇಲ್ಲಿ ಕವಿ, ಸಂಪೂರ್ಣವಾಗಿ ಪ್ರಕೃತಿಯ ಮಡಿಲಿಗೆ ತಲುಪಿದ್ದಾರೆ, ಅವರಿಗೆ ತಾಯಿ ನಿಸರ್ಗದ ಸೃಷ್ಟಿಯನ್ನು ಕಾಣಲು, ಈ ಹಸಿರುಗಾವಲಿನ ಮೇಲೆ ನೆಡೆದು ಹೋಗಬಯಸುವೆನು. ಈ ಹಸಿರು ರಾಶಿಯನ್ನು ಕಂಡ ನನ್ನ ಮನಸ್ಸು ಸಂತಸದಿಂದ ಉಬ್ಬಿದೆ. ನೋಡುತ್ತಿರುವೆನು ಸಂತೋಷದ ಅರಸನಾದ ಗಾಂಭೀರ್ಯದ ಪುಷ್ಪದ ವನವನ್ನು, ವನದಲ್ಲಿನ ಶಿಖರದಲ್ಲರಳಿದ ಕುಸುಮಗಳು ಅಷ್ಟಗಲ ಹರಡಿಹವು, ತಮ್ಮಡಿಯ ನೆಲದಲ್ಲಿ ಅರಳಿದ ಎಲೆಗಳ ಮೇಲೆ ಒಂದು ಬಗೆಯಲಿ ಮೋಟು ಕಿನ್ನರಿಯರ ನೆಲೆಯಂದದಲಿ ಏಕಾಂಗಿ ಮಲಗಿರುವ ಧೈರ್ಯವಂತ ರೈತನ ನಿದ್ರಿಸುವ ಆತ್ಮವನು. ಬೆಚ್ಚಿಸುವ ಕಿರುಚಾಟಗಳ ಕನಸುಗಳಿಂದ ಕದಡಿ ಅಥವಾ ಮಗುವೊಂದನ್ನು ಖುಷಿಗಾಗಿ ಕದ್ದು ಕೊಳದ ಬದಿಯಲಿ ಲಾಲಿ ತೂಗಿ ಪಲ್ಲವಿಸಿದ ಮನಮೋಹಕ ಗುಲಾಬಿಯನು ಕೇಡಿನಿಂದಲಿ ಕೆಡಿಸಲೆತ್ನಿಸಿ ಕಿತ್ತು, ಆ ಗಗನದ ತನ್ನ ಆವಾಸದ ಸಿಂಹಾಸನದಿಂದ ನೆಲವ ಫಲಗೊಳಿಸಲು, ರೈತನಿಗೆ ಮತ್ತವನ ನೇಗಿಲಿಗೆ ಸುಖವ ಕರುಣಿಸಲೆಂದು ಮಳೆಯನಿಳೆಗೆ ಕಳುಹಿಸುವ ಮಹಾದೇವನ ಕರುಣೆಯನು ಹಾಡಿ ಅಸಂಖ್ಯ ಹೂವುಗಳು ತಮ್ಮವೇ ಬಣ್ಣದಲಿ ಭಿನ್ನ ಹಚ್ಚಡಗಳಲಿ ತನ್ನದೇ ನೀಲಿಯಲಿ, ಕೆಂಪಿನಲಿ, ನಸುಗೆಂಪು ಹಸಿರು ಬಿಳುಪಿನಲಿ ಸಜ್ಜುಗೊಳಿಸಿವೆ. ತಮ್ಮ ಅವಕಾಶಗಳನ್ನು ಜಾತ್ರೆಯೊಲು ಹೊಳೆಸಿ ಕಂಗೊಳಿಸಿ ಎಂದು ಕವಿ ಪ್ರಕೃತಿ ಮತ್ತು ದೈವ ಇವೆರಡು ಎಷ್ಟು ನಿಕಟ ಸಂಬಂಧಗಳನ್ನು ಹೊಂದಿವೆ ಅವು ಒಂದಕ್ಕೊಂದು ಪೂರಕವಾಗಿ ತಮ್ಮ ಕಾರ್ಯ ನಿರ್ವಸುತ್ತವೆ ಎಂಬುದನ್ನು ಕುವೆಂಪು ತುಂಬಾ ರಸವತ್ತಾಗಿ ಹಾಡಿ ಹೊಗಳಿದ್ದಾರೆ.

"Pastoral scenes come and stay,
And deign me your delightful play!

Hebe condescend such joys,
As thou feelst when lover's voice
Penetrates thy youthful ears!
And pan with thee my earthly years
All I spend, with little fears
And lesser woes and much less tears,
For Splendour, joy, and Pleasure dwell
Beneath their rural flowery cell,
Hidden, obscure, unknown,
To them who to the city prone.
And thon Euterpe with a flute
Deign thy Muse, thy attribute,
To aid me in this Alien tongue
To pour a lay by many sung."[10]

ಇಲ್ಲಿ ಕವಿಗೆ ಕವಿತೆಯ ಕಡೆಗೆ ಒಂದು ರೀತಿಯ ಆತ್ಮಪ್ರತ್ಯಯವೂ ಇದೆ. ಬೇಡುವುದು ತನ್ನ ಗೌರವಕ್ಕೆ ಕಡಿಮೆ ಎಂಬ ಭಾವವಿದೆ. ನೇರ ತಂತಿಗಳನ್ನೇ ವಾದಕನು ಹದ ಮಾಡಿ ಶೃತಿ ಮಾಡಿಕೊಂಡು ಬಳಸಬೇಕಿರುವಾಗ ತಾನೆಂತು ನುಡಿಸುವೆನಿದನು ಎಂಬ ಭಯ ಅವನಲ್ಲಿ ಮಡುಗಟ್ಟಿದೆ.

The Urban Scenes
"Avaunt, ye lustful scenes,
Born of ages old where knowledge crude
Dwells in every rude
Mind, uncivilized in civic means!
Let Barbarions live
And ramble freely thro' the State of Pan,
Like New-Found-Kingdom's man,
Before the polished tribes, Hesperian
Settled one by one
Like bees that mauster round the honey hive."[11]

ಇಲ್ಲಿ ಕುವೆಂಪು ನಗರದ ಬಗ್ಗೆ ವರ್ಣಿಸುವಾಗ ಲಾಲಸೆಯ ಚಿತ್ರಗಳು ಎಂದು ಬಣ್ಣಿಸುತ್ತಾರೆ. ಲಾಲಸೆಯ ದೃಶ್ಯಗಳು ಎಂದ ಕೂಡಲೆ ನಮ್ಮ ಕಣ್ಣ ಮುಂದೆ ಬಹಳಷ್ಟು ಚಿತ್ರಗಳು ಹಾದು ಹೋಗುತ್ತವೆ. ಅವುಗಳು ಯಾವುವು ಎಂದು ಕುವೆಂಪು ಇಲ್ಲಿ ಕೆಲ ದೃಶ್ಯಗಳನ್ನು ಚಿತ್ರಿಸಿದ್ದಾರೆ– ಒರಟುತನದ ಅವಸ್ಥೆಯಲ್ಲಿದ್ದ ಜ್ಞಾನವದು, ಅಂತಹ ಜ್ಞಾನದಲ್ಲಿ ನೆಲೆನಿಂತು ಬಿಟ್ಟ ಅಂತಹ ಅನಾಗರೀಕರು ಇಲ್ಲಿ ನಾಗರೀಕತೆಯ ನಗರವನ್ನು ಕಟ್ಟಲು ಹೊರಟಿದ್ದಾರೆ. ಆದರೆ ಯೂರೋಪಿನ ನಾಗರೀಕತೆ ಬೆಳದ ಬಗೆಯಲ್ಲಿ ಬರ್ಬರತೆಯು ಎದ್ದು ಕಾಣುತ್ತದೆ. ಎಲ್ಲಾ ನಗರಗಳು ಕೂಡ ಯೂರೋಪಿನ ಬರ್ಬರತೆಯನ್ನು ಪ್ರತಿನಿಧಿಸುವ ಹಾಗೆ ಕಾಣುತ್ತದೆ. ಇಲ್ಲಿ ಒಟ್ಟು ಯೂರೋಪನ್ನು ಕುರಿತಂತೆ ಇರುವ ಮಾತುಗಳು ಕುವೆಂಪು ಅವರು, ಅವರಿಗೆ ಇದ್ದ ಒಟ್ಟು ಬರ್ಬರತೆಯ ಅಡಿಪಾಯದಲ್ಲಿ ಎದ್ದ ನಗರಗಳ ಸ್ಮೃತಿಯ ಆಧಾರದ ಮೇಲೆಯೇ ಅವರು ನಗರದ ಚಿತ್ರಗಳನ್ನು ಕಟ್ಟಿಕೊಂಡುಹೋಗಿದ್ದಾರೆ. ಭಾರತ ದೇಶದಲ್ಲಿ ಬೆಳೆಯುತ್ತಿರುವ, ಕಟ್ಟುತ್ತಿರುವಂತ ನಗರಗಳೂ ಸಹ ಅದೇ ಬರ್ಬರತೆಯ ಛದ್ಮವೇಷದಲ್ಲಿರುವ ಅನಾಗರೀಕ ಮನಸ್ಸು.

"Hail, thou offspring of Leto!
Hail, thou mighty Apollo!
In woeful plight of Delos born,
On glorious, auspicious morn,
Chased by Hera's rage austere,
Where sudden sprang a barren rock,
As if the Lucifer to mock,
With golden flowers, from steeped earth,
In awe and honour of thy birth!
Hail, ye cities, towns, new-born!
And garners of the farmers' corn,
Dight with coloured mansions high
That seem to kiss the cloudy sky;
And paved streets of measured plan,
Surrounded by the sculptured lawn,
With surpassing beauty run,
As if the rustic swain to stun;"[12]

ಗ್ರೀಕ್ ದೇಶದ ಅಪೋಲೋ[೧೩], ಆರ್ಟೆಮಿಸ್ಸರ ತಾಯಿ ಲಿಟೋ[೧೪]. ಧೀರೋದ್ಧಾತ ಅಪೋಲೋ ಕಲೆ, ಸಾಹಿತ್ಯ, ಸತ್ಯಗಳ ದೇವತೆಯಾಗಿದ್ದನು. ಡೆಲೋ[೧೫] ದ್ವೀಪದ ಅತಿ ದಾರುಣ ಸಂಕ್ರಮಣ ಕಾಲದಲ್ಲಿ ಹುಟ್ಟಿದಾತ ಈ ಅಪೋಲೊ. ಹೆರಾಳನ್ನು[೧೬] ಹುಟ್ಟಿನ ದೇವತೆಯೆಂದು ಪರಿಗಣಿಸಿದ್ದರು. ಅಲ್ಲಿ ಗರ್ಭಿಣಿ ಸ್ತ್ರೀಯರನ್ನು ತಮ್ಮ ದ್ವೀಪದಲ್ಲಿ ಪ್ರಸವವಾಗುವ ತನಕ ಇರಿಸಿಕೊಳ್ಳದೇ, ಅದರ ಸಮಯ ಹತ್ತಿರ ಬರುತ್ತಿದ್ದಂತೆ ಅವರನ್ನು ಬೇರೆ ದ್ವೀಪಕ್ಕೆ ಕಳುಹಿಸುವ ಒಂದು ಕ್ರೂರ ಆಚರಣೆಯೊಂದು ಅಲ್ಲಿತ್ತು. ಗ್ರೀಸ್‌ನಲ್ಲಿ ಸಂಸ್ಥಾನಗಳನ್ನು ಆಳುವ ಪುರೋಹಿತಶಾಹಿ ವರ್ಗ ಅಲ್ಲಿತ್ತು. ಅವರಿಗೆ ಒಂದು ಪವಿತ್ರ ಆಚರಣೆಯನ್ನು ಪ್ರತ್ಯೇಕವಾಗಿಟ್ಟು ಕೊಳ್ಳುವುದು ಬೇಕಾಗಿತ್ತು. ಆ ದ್ವೀಪದಲ್ಲಿ ಅತ್ಯಂತ ಶ್ರೇಷ್ಠವಾದ ಮಾನವನ ಜನನವನ್ನು ನಿಷೇಧಿಸಲಾಗಿತ್ತು, ಇಂಥ ಅನಾಗರೀಕ ಆಚರಣೆಗಳ ಬಗ್ಗೆ ಕುವೆಂಪು ಅವರಲ್ಲಿ ಧಿಕ್ಕಾರವಿತ್ತು. ಡೆಲೋವಿನ ಇಂಥಹ ಆಚರಣೆಗಳನ್ನು ಕುವೆಂಪು ವಿಶ್ವಮಾನವನ ಕಡೆಗೆ, ಸ್ತ್ರೀ ಸಮಾನತೆಯ ಕಡೆಗೆ ಮತ್ತು ಅವರು ಪುರೋಹಿತಶಾಹಿಯ ಬಗ್ಗೆ ತೀರಾ ವಿರುದ್ಧವಾದಂತ ವೈಚಾರಿಕ ನಿಲುವನ್ನು ಪಡೆದುಕೊಂಡದ್ದು ಹೇಗೆ ಎಂಬುದು ಕುತೂಹಲಕರ. ವಿಶ್ವಮಾನವ ತತ್ವವನ್ನು ಪ್ರತಿಪಾದಿಸಿದ ಕವಿ, ಸ್ತ್ರೀ ಸ್ವಾತಂತ್ರ್ಯವನ್ನು ಪ್ರತಿಪಾದಿಸಿದ ಕವಿ, ವೈದಿಕ ಆಚರಣೆಗಳ ವಿರುದ್ಧ ದನಿ ಎತ್ತಿದ ಕವಿ, ತಮ್ಮ ತಾರುಣ್ಯಾವಸ್ಥೆಯಲ್ಲಿ ಇಂಥಹುದೇ ಸೃಷ್ಟಿಗಳಾದಂತಹ ಗ್ರೀಕ್ ದೇವತೆಗಳ ಅಹಂಕಾರಕ್ಕಾಗಿ ಬಳಸಿಕೊಳ್ಳುತ್ತಾರೆ. ಇದು ಅವರು ಅಲ್ಲಿಂದ ಇಲ್ಲಿಗೆ ಪರಿವರ್ತನೆ ಹೊಂದಿದ ಬಗೆ ಎಂಥದು? ಪರಿವರ್ತನೆ ಮಾಡಿದ್ದಾದರು ಏನು? ಅನ್ನುವುದು ಒಂದು ದೊಡ್ಡ ಕುತೂಹಲಕಾರಿಯಾದಂತಹ ಅಂಶ. ಅಲ್ಲಿನ ನಾಗರೀಕತೆಯ ಸಮಾಜ ಸ್ತ್ರೀಯರನ್ನು ಅಪವಿತ್ರಳು ಎಂದು ಪರಿಗಣಿಸಿದ್ದರು. ಹುಟ್ಟನ್ನೂ ಕೂಡ ಹೊಲೆ ಎಂದು ಪರಿಗಣಿಸುತ್ತಿದ್ದರು. ಇಲ್ಲಿ ಕವಿ ಓದುಗರಿಗೆ ಪ್ರಶ್ನೆ ಹಾಕುತ್ತಿದ್ದಾರೆ, ಇದು ನಾಗರೀಕ ಸಾಮಜದ ಆಚರಣೆಗಳೇ? ಇವು ನಾಗರೀಕ ಸಮಾಜದ ಸ್ವಾಸ್ಥ್ಯವನ್ನು ಎಷ್ಟರ ಮಟ್ಟಿಗೆ ಕಾಪಾಡುವಂತಹದ್ದು? ಇಂಥಹ ಸಮಾಜಘಾತಕ ಆಚರಣೆಗಳು ಸಾಮ್ರಾಜ್ಯದ ಪಥನಕ್ಕೂ ಕಾರಣವಾಗಿವೆ. ಇಂಥಹ ಅವೈಜ್ಞಾನಿಕ ಆಚರಣೆಗಳು ನಮ್ಮ ದೇಶದಲ್ಲಿಯೂ ಸಾಕಷ್ಟಿವೆ. ಇಂಥ ವ್ಯಾಕುಲತೆಗೆ ಕಾರಣವಾದಂಹ ಅನಾಗರೀಕ ಪದ್ಧತಿಗಳನ್ನು ಅನುಸರಿಸುವುದನ್ನು ಬಿಟ್ಟು ನಾಗರೀಕರಾಗಿ ಕುವೆಂಪು ಅವರ ವಿಶ್ವಮಾನವ ಸಂದೇಶವನ್ನು ಆಚರಿಸಬೇಕು. ಆಗಲೇ ಸಮಾಜದ ಸ್ವಾಥ್ಯವನ್ನು ಕಾಪಾಡಲು ಸಾಧ್ಯ.

"Superstition flees and high
Knowledge rules the mind and eye,
And Vice from Virtue stands apart,
Mercy fastens in the heart;
And Selfishness leaves slow her place

And Charity becomes his lace.
Such lofty mind those temples give,
And stamp, tho' ceased he to live,
His worthy name, the others road
To pave, when so they stray abroad."[17]

ಇಲ್ಲಿ ಕವಿ, ನಾಗರೀಕತೆ ನಮ್ಮೊಳಗೆ ಮೊಳಕೆಯೊಡಯಬೇಕೆಂದರೆ ಮೊದಲು ಮನುಷ್ಯ ತನ್ನ ಜ್ಞಾನ ಚಕ್ಷುವನ್ನು ತೆರೆಯಬೇಕು. ನಗರೀಕರಣದ ಪ್ರಕ್ರಿಯೆ ಬರೀ ಮಹಲುಗಳನ್ನು, ರಸ್ತೆಗಳನ್ನು ನಿರ್ಮಿಸುವುದಲ್ಲ. ಮನುಷ್ಯ ಮೂಲತಃ ನಾಗರೀಕನಾಗಬೇಕು. ತಾನು ತನ್ನ ಹಳ್ಳಿಯಿಂದ ಬಳುವಳಿಯಾಗಿ ತಂದ ಮುಗ್ಧತೆಯನ್ನು ಉಳಿಸಿಕೊಂಡು ನಾಗರೀಕನಾಗಬೇಕು. ನಾಗರೀಕ ನಾಗುವುದು ಅವನ ಜ್ಞಾನಚಕ್ಷು ತೆರೆದಾಗ ಮಾತ್ರ ಸಾಧ್ಯ. ಅಂದರೆ ಮನುಷ್ಯ ನಗರೀಕರಣ ಗೊಳ್ಳುವುದಲ್ಲ, ನಾಗರೀಕರಣಗೊಳ್ಳಬೇಕು ಎಂದು ಕುವೆಂಪು ವಿಶ್ವಕ್ಕೆ ಕರೆ ನೀಡುತ್ತಿದ್ದಾರೆ.

"Such high felicities the towns
And cities give at large, and crowns
Of renown inclose him round;
A monarch in he tho' uncrown'd.
O City-life! I hug thy brest,
If thou give within thy crest,
A simple seat tho' not the high.
All thy glorious great to spy!"[18]

ಹಳ್ಳಿಯಲ್ಲಿ ನಾಗರೀಕರಣಗೊಳ್ಳುವ ಪ್ರಕ್ರಿಯೆ ಕಡಿಮೆ ಇರುತ್ತವೆ, ಅಲ್ಲಿ ಮುಗ್ಧತೆಗೆ ಮಾತ್ರ ಜಾಗ. ಅದನ್ನು ಬಿಟ್ಟು ನಾಗರೀಕನಾಗಲು ಬೇಕಾದ ಎಲ್ಲ ಸೌಲಭ್ಯಗಳನ್ನು ನಗರಗಳು ಒಳಗೊಂಡಿರುತ್ತವೆ, ಅಲ್ಲಿ ನಮಗೆ ದೊಡ್ಡ ದೊಡ್ಡ ಅವಕಾಶಗಳ ಸಂಖ್ಯೆ ಹೆಚ್ಚು. ಕುವೆಂಪು ಅವರು ಮೈಸೂರಿನಲ್ಲಿ ಓದುತ್ತಿದ್ದ ಸಂದರ್ಭದಲ್ಲಿ ಈ ಕವನವನ್ನು ಬರೆದಿದ್ದಾರೆ. ನಗರದ ಬದುಕು ಎಲ್ಲವೂ ಸಿಂಹಾಸವನ್ನು ಏರಿಲ್ಲ, ಆದರೆ ಅದರ ವರ್ಚಸ್ಸಿನಿಂದ ಬೆಳೆಯುತ್ತಿದೆ. ಕುವೆಂಪು ಅವರ ಪ್ರಕಾರ ದೇಶ ವಿದೇಶ ಎನ್ನುವುದು ಅವರ ಆಹಾರ ಮತ್ತು ಧರಿಸುವ ವಸ್ತ್ರದಲ್ಲಿ ಮಾತ್ರ ಭಿನ್ನ, ಆದರೆ ವಿಶ್ವದ ಸಂವೇದನೆಯು ಒಂದೇ. ಅಲ್ಲಿಯೂ ಒಬ್ಬ ತಾಯಿ ಇದ್ದಾಳೆ, ಮನುಷ್ಯ ಮನುಷ್ಯರ ನಡುವಿನ ಪ್ರೇಮವು ಒಂದೇ, ಕ್ರೌರ್ಯ, ರಾಜಕೀಯ ಎಲ್ಲವು ಒಂದೇ, ಭಾಷೆ ಮಾತ್ರ ಭಿನ್ನ ಅಷ್ಟು ಬಿಟ್ಟರೆ ಚಿಂತನಾಕ್ರಮ ಎಲ್ಲವೂ ಒಂದೇ. ಇಲ್ಲಿ ಕವಿ ವಿಶ್ವಮಾನವನ ಕಲ್ಪನೆಯನ್ನು ಕೊಡುತ್ತಿದ್ದಾರೆ. ಅವರು ವಿಶ್ವದ ಅತ್ಯುನ್ನತ ಮನುಷ್ಯನಾಗಲು

ಇಚ್ಛಿಸಿ, ಅದನ್ನು ತಲುಪಬೇಕಾದರೆ ನಗರದ ಸಂಸ್ಕೃತಿಗೆ ಹೇಳುತ್ತಿದ್ದಾರೆ ನಗರವು ಇಂದು ಚಕ್ರಾಧಿಪತ್ಯ, ಅದನ್ನು ಕುರಿತು ಕವಿ ಇಲ್ಲಿ, ನಿನ್ನ ಶಿಖರದಲ್ಲಿ ನನಗೆ ಜಾಗಕೊಡು. ನಾಗರೀಕತೆಯ ಅತ್ಯುನ್ನತ ಹಂತದಲ್ಲಿ ತಲುಪಬೇಕು ನಾನು, ಅದನ್ನು ತಲುಪಲು ನಿನ್ನ ಸಹಾಯಹಸ್ತವನ್ನು ಬೇಡುತ್ತಿದ್ದೇನೆ. ಒಟ್ಟಿನಲ್ಲಿ ನನಗೆ ನಾಗರೀಕತೆಯ ಔನತ್ಯವನ್ನು ಒಪ್ಪಿಕೊಳ್ಳಬೇಕಾಗಿ ಅಲ್ಲಿ ನನಗೆ ಜಾಗಕೊಡು, ಅಲ್ಲಿ ಜ್ಞಾನವನ್ನು ಸಂಪಾದಿಸಿ ಪುನಃ ಶಿಖರದಿಂದಿಳಿಯುತ್ತೇನೆ ಎಂದು ಆ ತಾಯಿಯಲ್ಲಿ ಬೇಡಿಕೊಳ್ಳುತ್ತಿದ್ದಾರೆ.

"Give me rest my sacred Muse,
For with thy help and with thy use,
I wrote this lay with simple skill,
Desired before with highest will;
And aid my alien lyre to please
My hearers all, if lack in peace."[19]

ಇಲ್ಲಿ ಕವಿ ವಾಗ್ದೇವಿಯ ಕುರಿತು, ಮಹತ್ವದ ಚಿತ್ ಶಕ್ತಿಯನ್ನು ಕೊಡು, ನನ್ನಲ್ಲಿರುವ ಈ ಅಲ್ಪ ಜ್ಞಾನವನ್ನು ವಿಸ್ತರಿಸಿಕೊಳ್ಳುವ ಕೃಪೆಮಾಡು ತಾಯಿ, ಇನ್ನೂ ಹೆಚ್ಚಿನ ಸಾಧನೆ ಮಾಡಲು ವರವನ್ನು ದಯಪಾಲಿಸು ಎಂದು ಬೇಡಿಕೊಳ್ಳುತ್ತಿದ್ದಾರೆ. ತಾನು ಮಾಡುತ್ತಿರುವುದು ಮೀಂಟಿ ನುಡಿಸುವುದಲ್ಲ, ಈ ಕವಿ ಆ ಗೋಜಲಿನ ವಾದ್ಯವನು ಜಗ್ಗಿ ನುಡಿಸಲು ಯತ್ನವನು ಮಾಡುತ್ತಿರುವನು. ಅದೆಂತು ತಾನೆ ಈ ವಾದ್ಯ ಸುಸಂಗತವಾದ ಸಂಗೀತದ ನಿನಾದವನ್ನು ಹೊಮ್ಮಿಸಬಹುದು? ಅದೂ ಅಸಂಖ್ಯ ಜನರಾಶಿಯ ಮುಂದೆ ನುಡಿಸಲೆಳಸುತ್ತಿರುವ ಈ ಬಾಲಕನ ಪ್ರಾರ್ಥನೆಯನ್ನು ನೋಡಿ. ಮೊದಲ ನುಡಿಯು ವ್ಯರ್ಥವಾದರೆ ತಾನೆ ಏನು ಎನ್ನುವ ಪ್ರಶ್ನಿಸುವ ಮನಸ್ಸಿನ ಜೊತೆಜೊತೆಗೇ ಕೇಳುಗರನ್ನು ಉದ್ದೇಶಿಸಿ ಒಂದು ಸಾಮೂಹಿಕ ಎಚ್ಚರಿಕೆಯನ್ನು ಕೊಡುತ್ತಿದ್ದಾನೆ: ನಿಮ್ಮ ಕಟುವ್ಯಂಗ್ಯದ ನಗೆಯದು ಕಂಗೆಡಿಸಬಹುದು ಅವನನ್ನು, ಕಂಪಿಸುವ ಅವನ ಕೈಯವನ ಮೌಲಿಕ ಶಕ್ತಿಯನು ಹಾಳುಗೆಡವಬಹುದು. ಆದ್ದರಿಂದ ಅಂತು ಮಾಡದಿರಿ ಎಂಬ ಕವಿಯಂತರಂಗದ ಮಾತು ಏಕಕಾಲಕ್ಕೆ ಎಚ್ಚರಿಕೆಯೂ, ಪ್ರಾರ್ಥನೆಯೂ ಆಗಿರುವುದನ್ನು ಗಮನಿಸಬಹುದು.

ಕವಿ ಕುವೆಂಪು ಅವರ ಪ್ರಶ್ನೆ ಕೇಳುವ ಚಾಪಲ್ಯವನ್ನು ವಿಡಂಬಿಸುವ ಕವನವಿದು. ೪.೧.೧೯೨೪ರಲ್ಲಿ The Bird And the Poet ಎಂಬ ಕವನವನ್ನು ರಚಿಸಿದ್ದಾರೆ.

"Where is your temple, sweet little bird?
Is it beside the scared river
Where myriad people go with flowers

To barter with their lofty giver?
The bird sang Coo-woo, Coo-woo!

Like a great dazzling meteor didst thou come
Enlightening all; and flashed across the sky;
Then wonder thrilled each slumbering heart, while dumb
All stood adoring thee with winkless eye!
Again and let again, Ascetic blest
And Guide Divine, thy Orient rays blaze West!"[20]

ಬೇಂದ್ರೆ ಹಕ್ಕಿಗಳನ್ನು ಹಾರುವ ಹೂಗಳು ಎಂದು ವರ್ಣಿಸುತ್ತಾರೆ. ಅಂಥದ್ದೇ ಪ್ರೀತಿ, ಇಲ್ಲಿ ಕುವೆಂಪು ಅವರಿಗೆ ಆ ಪುಟ್ಟ ಹಕ್ಕಿಯನ್ನು ಮಾತನಾಡಿಸುವ ತವಕ. ಅವರು ಹಕ್ಕಿಯ ಗೂಡಿನ ಬಗ್ಗೆ ವಿಚಾರಿಸುತ್ತಾ, ಅದು ಅವರಿಗೆ ಉತ್ತರಿಸುವ ಉತ್ತರವೇ ಕೂವೂ ಕೂವೂ. ನಮಗೆ ವಿಲಿಯಂ ಬ್ಲೇಕ್ ಕವಿಯ Songs of innocence ಸಂಕಲನದಲ್ಲಿ ಇಂಥಹ ಸರಳ ಸುಂದರ ಚಿತ್ರಗಳು ಸಿಕ್ಕುತ್ತವೆ. ಹಾಗೆಯೇ ಕುವೆಂಪು ಅವರಲ್ಲಿಯೂ ಕೂಡ ಗಂಭೀರವಾದ ಅರ್ಥಗಳನ್ನ, ಟಾಗೋರ್ ಮೀಮಾಂಸೆಯನ್ನ ತಮ್ಮೊಳಗೆ ಇಟ್ಟು ಕೊಂಡಂತಹ, ಮತ್ತು ಮೇಲ್ನೋಟಕ್ಕೆ ಸರಳ ಸುಂದರವೆನಿಸುಂತಹ ಕವಿತೆಗಳು ಇವೆ. ಅವು ಇದರಲ್ಲಿ ತನ್ನ ಹಾಡನ್ನು ಕವಿಗಳಿಗೆ ಹೆಕ್ಕಿಕೊಳ್ಳಲು ಬಿಟ್ಟಿಹೋದಂತಿದೆ. ಇಂಥದ್ದೇ ಭಾವವಿರುವ ಕುವೆಂಪು ಅವರ ಕನ್ನಡದ ಕವನ ೧೯೪೬ರಲ್ಲಿ ರಚಿಸಿರುವ ನನ್ನ ಮನೆ ಸಂಕಲನದ **ಪೊದೆಯ ಹಕ್ಕಿ, ಎದೆಯ ಹಕ್ಕಿ.**

"ಟುವ್ವಿ! ಟುವ್ವಿ! ಟುವ್ವಿ! ಟುವ್ವಿ!
ಎಂದು ಹಕ್ಕಿ ಕೂಗಿತು.
ಅದರ ಹಾಡು ಬಂದು ಎನ್ನ
ಎದೆಯ ಗೂಡ ತಾಗಿತು!"[೨೧]

ಕುವೆಂಪು ಅವರಲ್ಲಿನ ಪ್ರಕೃತಿಯನ್ನು ಆರಾಧಿಸುವ ಪರಿಯ ಬಗೆಗಿನ ತೀವ್ರತೆ ಮತ್ತು ಅವರು ಅದರ ಒಳಹೊಕ್ಕಿ ಅದರ ಆನಂದವನ್ನು ಎಷ್ಟರ ಮಟ್ಟಿಗೆ ಅನುಭವಿಸುತ್ತಿದ್ದರೆನ್ನುವುದಕ್ಕೆ ಈ ಎರಡೂ ಕವನಗಳು ಒಂದು ಒಳ್ಳೆಯ ಉದಾಹರಣೆಗಳಾಗಿವೆ.

ಕವಿ ಕುವೆಂಪು ಅವರು ೩೦.೧೧.೧೯೨೩ರಲ್ಲಿ **ವಿದ್ಯುದ್ದೀಪಗಳು** ಎಂಬ ಕವನವನ್ನು ರಚಿಸಿದ್ದಾರೆ. ಈ ಕವನದಲ್ಲಿ ವಸಾಹತುಶಾಹಿಯಿಂದಾದ ಅನಾಹುತದಿಂದ, ಕವಿಯ ದೇಶಪ್ರೇಮ ಮತ್ತು ತನ್ನ ನಾಡು ನುಡಿ ಹಾಗೂ ದೇಸೀ ಸಂಸ್ಕೃತಿಯ ಬಗ್ಗೆ ಅವರಿಗಿದ್ದ ಅಗಾಧವಾದ ಒಲವಿನಿಂದಾಗಿ ಅವರ ಮನಸ್ಸಿನಲ್ಲಿ ಹಲವಾರು ಸಂಘರ್ಷಗಳು ಏಳುತ್ತಿದ್ದ ಅಲೆಗಳನ್ನು ಎಳೆ ಎಳೆಯಾಗಿ ಪ್ರಸ್ತುತ ಕವನದಲ್ಲಿ ಬಿಂಬಿಸಿದ್ದಾರೆ. ಈ ಕವನವನ್ನು ಅಂದು ಮೈಸೂರಿಗೆ ಆಗಿನ

ವೈಸರಾಯರ ಆಗಮನದ ಸಮಯದಲ್ಲಿ ಅವರ ವಿರುದ್ಧ ಕವಿ ದಂಗೆ ಎದ್ದಿದ್ದಾರೆ.

"Green and red, red and green,
Red and green, green and red,
The lights electric twinkled bright
Alluring every traveller's sight,
Gleaming on trees
Like summer bees
That bristle on a flowery height."[22]

ಈ ಕವನದಲ್ಲಿ ಕವಿ ಪುರೋಹಿತಶಾಹಿಯ ಕಪಿಮುಷ್ಟಿಗೆ ಸಿಕ್ಕ ಮಾನವೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಬದುಕು ದಿಕ್ಕು ತಪ್ಪಿ ಅನೇಕ ಶತಮಾನಗಳೇ ಸಂದಿದ್ದವು ಎಂದು ಹೇಳುತ್ತಾ, ಏನೇ ಆದರೂ, ನಾವು ನಮ್ಮ ತನವನ್ನು ಬಿಟ್ಟು ಬೇರೊಂದು ಹೊಸ ಅಲೆಗಳತ್ತ ವಾಲ ಕೂಡದು, ಅಂತ ಸಂದರ್ಭ ಬಂದಲ್ಲಿ ನಾವು ನಮ್ಮ ನೈಜತೆಯನ್ನು ಬಿಟ್ಟು ಬರೀ ಕೃತಕವಾದಂತಹದ ಬಗ್ಗೆ ಆಕರ್ಷಿತರಾಗಬಾರದು ಎಂದು ಕರೆ ಕೊಡುತ್ತಿದ್ದಾರೆ.

ಬ್ರಿಟೀಷರ ಇಂಗ್ಲಿಷ್ ಶಿಕ್ಷಣದ ಪ್ರಭಾವ ಹೊಸ ವೈಜ್ಞಾನಿಕ ಮತಿಯನ್ನು, ಹೊಸ ಎಚ್ಚರವನ್ನು ಉಂಟುಮಾಡಿತು. ಆರಂಭದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಗೆ ಒಳಗಾದರೂ ಆನಂತರ ಹೊಸ ಎಚ್ಚರದ ವೈಜ್ಞಾನಿಕ ಮತಿಯ ಮಥನಕ್ಕೆ ಪ್ರಾಚ್ಯ ಮತ್ತು ಪಾಶ್ಚಾತ್ಯ ಮೌಲ್ಯಗಳು ಗುರಿಯಾಗುವುದರ ಮೂಲಕ ಹೊಸ ಪರಿಸರವೊಂದನ್ನು ಭಾರತೀಯ ಸಂವೇದನೆ ನಿರ್ಮಿಸಿಕೊಂಡದ್ದು ಸ್ವಾತಂತ್ರ್ಯ ಹೋರಾಟದ ಹಾದಿಯಲ್ಲಿ ಮಹತ್ತರವಾದ ಮುಖ್ಯ ನೆಲೆಯೆನ್ನಬಹುದು.

"Bright and gay, bright and gay,
Gay and bright, gay and bright,
Beside the Albert Victor's road
Glimmered the minds of scientist's fraud,
While 'wildered eyes
Gave birth to skies
and stars, beside the Victor's road."[23]

ಕವಿ ಈ ಸಾಲುಗಳಲ್ಲಿ, ತನ್ನ ಊರಿನ ರಸ್ತೆ ಬೀದಿಯೊಂದಕ್ಕೆ ಆಗಿನ ಬ್ರಿಟನ್ ದೇಶದ ರಾಜನ (ಆಲ್ಬರ್ಟ್ ವಿಕ್ಟರ್) ಹೆಸರಿನ ನಾಮಫಲಕವನ್ನು ನೋಡಿ ಮನನೊಂದು ಆಕ್ರೋಶವನ್ನು ಇಲ್ಲಿ ವ್ಯಕ್ತ ಪಡಿಸುತ್ತಿದ್ದಾರೆ,

ವೈಜ್ಞಾನಿಕ ದೃಷ್ಟಿ ಮತ್ತು ವೈಚಾರಿಕ ಕ್ರಾಂತಿ ಕುವೆಂಪು ಅವರ ಸಮಸ್ತ ವ್ಯಕ್ತಿತ್ವವನ್ನೂ ರೂಪಿಸಿವೆ, ಬೆಳೆಸಿವೆ, ಬೆಳಗಿಸಿವೆ ಮತ್ತು ಪೂರ್ಣಗೊಳಿಸಿವೆ. ಮೌಢ್ಯಸಂಪ್ರದಾಯಗಳು, ಅರ್ಥಹೀನ ನಂಬಿಕೆಗಳು, ಶುಷ್ಕ ಆಚಾರಗಳು ಮತ್ತು ಒಣ ಸಿದ್ಧಾಂತಗಳು ಜನತೆಯ ಅಜ್ಞಾನಕ್ಕೆ, ದಾರಿದ್ರ್ಯಕ್ಕೆ ನಿರಭಿಮಾನಕ್ಕೆ, ಒಟ್ಟಿನಲ್ಲಿ ಅವರ ಇಂದಿನ ದುಸ್ಥಿತಿಗೆ ಕಾರಣವೆನ್ನುವುದನ್ನು ತಮ್ಮ ಕಾವ್ಯಗಳಲ್ಲಿ, ಕಾದಂಬರಿಗಳಲ್ಲಿ ಇನ್ನೂ ಅನೇಕ ಮಾಧ್ಯಮಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಅವರು ತಮ್ಮ ತರುಣಾವಸ್ಥೆಯಾಲ್ಲಿದ್ದಾಗಲೇ ಅವರಲ್ಲಿ ದೂರದೃಷ್ಟಿಯಿತ್ತು. ಅವರು ವೈಜ್ಞಾನಿಕವಾಗಿ ಯೋಚಿಸಲು ಶುರುಮಾಡಿದ್ದರು ಮತ್ತು ವೇದಾಂತದ ಅರಿವಿತ್ತು.

ಈ ಕವನದಲ್ಲಿ ತರುಣ ಕವಿ ಕುವೆಂಪು ಅವರ ವಿಜ್ಞಾನದ ಪಠ್ಯದ ಬಗ್ಗೆ ಅವರಿಗಿದ್ದ ಆಗಿನ ಮನಸ್ಥಿತಿಗೆ ಅನುಗುಣವಾಗಿ ತನ್ನ ಆಸಕ್ತಿ ಮತ್ತು ನಿರಾಸಕ್ತಿಗನುಗುಣವಾಗಿ ರಚಿಸಿರುವ ಕವನವಿದು. ಅವರಿಗೆ ವಿಜ್ಞಾನದ ಅನ್ವೇಷಣಾ ವಿಧಾನ ಮತ್ತು ಅದರ ತಾತ್ವಿಕ ಸಿದ್ಧಾಂತಗಳ ವಿಚಾರದಲ್ಲಿ ಅವರು ಆಸಕ್ತರಾಗಿದ್ದರೂ ಅದರ ಬೇಸರ ತರುತಿದ್ದ ಪ್ರಯೋಗಶ್ರಮದ ಬಗ್ಗೆ ತನ್ನ ಮನಸ್ಸು ವಿಮುಖವಾಗಿಯೇ ಇದ್ದಂತಹ ಸ್ಥಿತಿ ಅವರದ್ದು. ಅಲ್ಲದೆ ಆಗಿನ ಭೌತವಿಜ್ಞಾನ ಈಗಿನಂತೆ ವೇದಾಂತದ ಅಂಚಿಗೇ ಬಂದು ನಿಲ್ಲುವಷ್ಟು ಮುಂದುವರಿದಿರಲಿಲ್ಲವೆನ್ನಬಹುದು. ಅವರಿಗೆ ಬಹಳ ಪ್ರಿಯವಾದದ್ದು ಎಂದರೆ ಅದು ಕಲೆ ಸಾಹಿತ್ಯ ತತ್ವಶಾಸ್ತ್ರ ಇವುಗಳಿಂದ ಒದಗುತ್ತಿದ್ದ ಶಿವ ಸತ್ಯ ಸೌಂದರ್ಯಗಳ ರಸಾನುಭವವಂತೂ ಅಂದಿನ ವಿಜ್ಞಾನದಲ್ಲಿ ಶೂನ್ಯವೆ ಆಗಿತ್ತು.

The Science Room ಎಂಬ ಶೀರ್ಷಿಕೆಯ ಕವನವೊಂದನ್ನು ೩.೧೧.೧೯೨೩ರಲ್ಲಿ ರಚಿಸಿದ್ದಾರೆ.

"Why comest here, sweet Bird,
To this horrific place?
Here do we weigh each word
To many a thousand place.

We measure human bust,
Each protoplasm of veins;
We weigh little dust
To weigh the world in grains."[24]

ಈ ಮೇಲಿನ ಪ್ರಸ್ತುತ ಕವನವನ್ನು ಪ್ರಕೃತಿ ಕವಿ ಕುವೆಂಪು ಅವರು ತಮ್ಮ ಪ್ರಯೋಗಶಾಲೆಯಲ್ಲಿ ಮಾಡುತ್ತಿದ್ದ ಸಂದರ್ಭದಲ್ಲಿ ಪ್ರಯೋಗಾಲಯದ ಕೊಠಡಿಗೆ ಪ್ರವೇಶಿಸಿ ಚೀವ್ ಚೀವ್ ಚೀವ್ ಎಂದು ಕೂಗುತ್ತಿತ್ತು, ಅಲ್ಲೆ ಎಲ್ಲಿಯೊ ಸಂಧಿಯಲ್ಲಿ ಗೂಡುಕಟ್ಟಿ ಮರಿಮಾಡಿ ಕೊಂಡಿದ್ದಿರಬಹುದು,

ಇವರ ಮನಸ್ಸು ಸಂಪೂರ್ಣವಾಗಿ ಪ್ರಯೋಗಾಲದಿಂದ ಹಕ್ಕಿಯ ಕೂಗಿನತ್ತ ಹಾರಿಹೋಯಿತು. ಆ ಸಂದರ್ಭದಲ್ಲಿ ರಚಿಸಿದ ಕವನವಿದು.

"Away, sweet Bird, away!
To thy Elysian fields;
For other men are gay
Without Satanic shields.
Go, sing to them thy song,
Their bosoms greet thee well;
Our magic is too strong,
To fit thy flowery dell!"[25]

ಇಲ್ಲಿ ಕವಿ ಕುವೆಂಪು ಅವರು ತುಂಬಾ ಬೇಸರದಿಂದ ಹೇಗೆ ನಮ್ಮ ಬದುಕು ವಿಜ್ಞಾನದಿಂದ ಬದಲಾಗಿದೆ, ಅದರಿಂದ ಒಳ್ಳೆಯದೂ ಇದೆ ಮತ್ತು ಕೆಟ್ಟದ್ದು. ಹಾಗಂತ ಅವರು ವೈಜ್ಞಾನಿಕತೆಯನ್ನು ಎಂದೂ ಅಲ್ಲಗೆಳೆದಿಲ್ಲ, ಬದಲಾಗಿ ವೈಜ್ಞಾನಿಕ ಮನೋಭಾವನೆಯನ್ನು ಎಲ್ಲದಕ್ಕೂ ನಾವು ಹೇರಿದರೆ ಯಾವ ದುಷ್ಪರಿಣಾಮಗಳು ಎದುರಾಗುತ್ತವೆ ಮತ್ತು ಮಾನವೀಯ ಮೌಲ್ಯಗಳನ್ನು ಕಳೆದುಕೊಂಡು ಬರೀ ಯಾಂತ್ರಿಕವಾಗಿ ಬದುಕು ನಡೆಸುವಂತಾಗಬಾರದು, ಅದರಿಂದ ಬದುಕು ದುರ್ಬರಗೊಳ್ಳುತ್ತದೆ, ಅಂತಹ ಮನಸ್ಥಿತಿ ಜನ್ಮ ಪಡೆದಾಗ ಅವುಗಳ ಮಾರಿ ರೂಪ ಗೋಚರವಾಗದೆ ಕಾಲಾಂತರದಲ್ಲಿ ಬೆಳಕಿಗೆ ಬರುತ್ತದೆ ಎಂದು ಹೇಳುತ್ತಿದ್ದಾರೆ. ಹಾಗಾಗಿ ಅವರು ಪ್ರಯೋಗಾಲಯದ ಪಾಠದಲ್ಲಿ ನಾವು ಏನು ತಾನೆ ಕಲಿತೇವು ಎಂಬ ಹೇಳಿಕೆಗೆ ಬಂದುಬಿಟ್ಟಿದ್ದರು. ಇದಕ್ಕೆ ಮೂಲ ಕಾರಣ ಅವರು ನಂಬಿದ್ದಂತಹ ಗುರುಗಳಾದ ರಾಮಕೃಷ್ಣ ಪರಮಹಂಸರು ಮತ್ತು ಸ್ವಾಮಿ ವಿವೇಕಾನಂದರುಗಳ ಬಗೆಗಿನ ಅಮೂಲ್ಯವಾದಂತಹ ಓದು. ಇಂಥದ್ದೇ ಸಂದರ್ಭ ಅವರು ಎಂಟ್ರೆನ್ಸ್ ತರಗತಿಯನ್ನು ಓದುತ್ತಿದ್ದ ಸಂದರ್ಭದಲ್ಲಿ ಕುವೆಂಪು ಅವರು Random Lines ಎಂಬ ಕವನವನ್ನು ೨೭.೧೦.೧೯೨೩ರಲ್ಲಿ ರಚಿಸಿದ್ದಾರೆ. ಅವರು ಪ್ರಸ್ತುತ ಕವನವನ್ನು ಕುರಿತು ತಮ್ಮ ನೆನಪಿನ ದೋಣಿಯಲ್ಲಿ ಹೀಗೆ ಹೇಳಿದ್ದಾರೆ.

ನನ್ನ ಆಸಕ್ತಿಯೆಲ್ಲ ಸಾಹಿತ್ಯ, ಕಾವ್ಯ, ತತ್ತ್ವಗಳ ಕಡೆ ಇದ್ದರೂ ನಾನು ಐಚ್ಛಿಕ ವಿಷಯವನ್ನಾಗಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಗಳನ್ನು ಆಯ್ದುಕೊಂಡಿದ್ದೆ. ಆ ಆಯ್ಕೆಯಲ್ಲಿ ಉದ್ದೇಶವಾಗಲಿ ಆಲೋಚನೆಯಾಗಲಿ ಭಾಗವಹಿಸಿರಲಿಲ್ಲವೆಂದು ತೋರುತ್ತದೆ. ಎಸ್.ಎಸ್.ಎಲ್.ಸಿಯಲ್ಲಿ ಸಹಪಾಠಿಗಳಾಗಿದ್ದ ಕೆಲವು ಗೆಳೆಯರು ಆ ವಿಷಯಗಳನ್ನು ಆರಿಸಿ ಕೊಂಡಿದ್ದುದೇ ಬಹುಶಃ ನಾನೂ ಆರಿಸಿಕೊಂಡಿದಕ್ಕೆ ಕಾರಣವಾಗಿರಬಹುದು. ಏಕೆಂದರೆ ನನ್ನ ಗೆಳೆಯರು ಎಂಟ್ರೆನ್ಸ್ ಪಾಸುಮಾಡಿದ ಮೇಲೆ ಬೆಂಗಳೂರಿಗೆ ಹೋದರು, ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್.ಸಿ.ಗೆ ಸೇರಲು ನಾನು ಆರ್ಟ್ಸ್ ತೆಗೆದುಕೊಂಡು ಮಹಾರಾಜ ಕಾಲೇಜಿಗೆ ಸೇರಿದೆ. ಸೈನ್ಸ್ ವಿಚಾರದಲ್ಲಿ

ಅಗ ನನಗಿದ್ದ ಕೆಲವು ವಿರೋಧ ಭಾವಗಳು ಆಗ ನಾನು ಬರೆದ ಕೆಲವು ಇಂಗ್ಲೀಷ್ ಕವನಗಳಲ್ಲಿ ಪ್ರತಿಫಲಿಸಿಕೊಂಡಿದೆ ಎಂದು ಬರೆದಿದ್ದಾರೆ.[೨೬]

Random Lines ಎಂಬ ಹೆಸರಿನ ಈ ಕವನ ಹೀಗೆ ಮೊದಲಾಗುತ್ತದೆ:

"Philosophy is my delight,
And poetry my heaven;
I take with these my refuge bright,
From the vast world when driven.

Solitude is my temple sweet
And contemplation priest;...

The meaning of the universe
The cuckoo sweetly tells;
And every subtle thought of verse
Disclose the butter-bells..."[27]

ಇಲ್ಲಿ ಕವಿಗೆ ರಸಾಯನಶಾಸ್ತ್ರ ಮತ್ತು ಅದರ ಪ್ರಯೋಗಕ್ಕಿಂತ ಅವರಿಗೆ ತತ್ವಶಾಸ್ತ್ರ ಮತ್ತು ಜೀವನದ ಸತ್ಯಾನ್ವೇಷಣೆಯ ಪಾಠಗಳೇ ಮುಖ್ಯವೆನಿಸಿದ್ದವು.

ಕುವೆಂಪು ಅವರ ಮನಸ್ಸಿನಲ್ಲಿ ಅದಾಗಲೇ ಆಧ್ಯಾತ್ಮಿಕ ಚಿಂತನೆಗಳು ಬಹಳಮಟ್ಟದಲ್ಲಿ ಬೇರೂರಿತ್ತು. ಹಾಗೆ ಹಲವಾರು ಸುಪ್ರಸಿದ್ಧಿ ಹೊಂದಿದ ಇಂಗ್ಲಿಷ್ ಕವಿಗಳ ಪ್ರಭಾವಕ್ಕೊಳಗಾಗಿದ್ದರು. ಇಲ್ಲಿ ಥಾಮಸ್ ಗ್ರೇ ಕವಿಯ 'ಎಲಿಜೆ' ಎಂಬ ಕವನದ ಪ್ರೇರಣೆಯಿಂದಾಗಿ ಬರೆದ ಕವನವಿದು. ಆ ಕವನ ಹೀಗಿದೆ–

"The curfew tolls the knell of parting day,
The lowing herd wind slowly o'er the lea,
The plowman homeward plods his weary way,
Ans leaves the world to darkness and to me."[28]

ಈ ಕವನವು ಒಂದು ಕರಾಳ ದಿನವೊಂದನ್ನು ಸೂಚಿಸುತ್ತಿದೆ, ಏಕೆಂದರೆ ಅಂದು ಕರ್ಫ್ಯೂ ಘೋಷಿತ ದಿನ, ಕವಿ ಇಲ್ಲಿ ತನ್ನ ವಿಶಿಷ್ಟ ಕಲ್ಪನಾ ದೃಷ್ಟಿಯಿಂದ ತಾನು ನೋಡುತ್ತಿರುವ ಭಯಂಕರವಾದ ದೃಶ್ಯವನ್ನು ವಿವರಿಸುತ್ತಿದ್ದಾನೆ. ಪ್ರಕೃತಿಯು ಕೂಡ ಆ ದಿನವೊಂದಕ್ಕೆ ಅಂಜಿ ಕೂತಿದೆಯಂತೆ, ಅವನಿಗೆ ಗಾಳಿಯ ಚಲನೆಯ ವೇಗದಲ್ಲಿ ಕುಸಿತ ಕಂಡಿದೆ, ಅಲ್ಲಿಯ ಜನರ ದಿನ ನಿತ್ಯದ ಬದುಕು ಅಸ್ತವ್ಯಸ್ತಗೊಂಡಿದೆ ಮತ್ತು ಈ ಕರ್ಫ್ಯೂ ಎಂಬ ಮಾರಿಯು ಜಗತ್ತನ್ನೇ ಕತ್ತಲೆಯ ಕೋಣೆಗೆ ದಬ್ಬಿದೆ ಎಂದು ಹೇಳುತ್ತಿದ್ದಾನೆ.

ಈ ಮೇಲಿನ ಕವನವನ್ನು ಕುವೆಂಪು ಅವರು ಮೆಲುಕು ಹಾಕುತ್ತಾ ತಮ್ಮದೇ ಒಂದು ಕವನವನ್ನು The Fallen Tomb ಸೃಷ್ಟಿಸಿದ್ದಾರೆ. ಅವರು ಚಾಮುಂಡಿ ಬೆಟ್ಟದ ಬುಡದಲ್ಲಿ ಕುಳಿತು ಬರೆದಿರುವ ಕವನವಿದು. ಕವಿ ಕುವೆಂಪು ಅವರು The Fallen Tomb ಎಂಬ ಶೀರ್ಷಿಕೆಯ ಕವನವೊಂದನ್ನು ೫.೭.೧೯೨೫ರಲ್ಲಿ ರಚಿಸಿದ್ದಾರೆ.

"The straying birds are gone to leafy bowers,
The browsing cattle to their evening fold;
And shades of night descending veil yon towers
While glow-worms shine, a glory to behold.

A death-like silence numbs this burial ground,
Save oft the dreary cries of drowsy owl
Proclaim the awful shrieks of Stygian hound
And groans of anguish of the sinful soul."[29]

ಇಲ್ಲಿ ಕವಿ ಕುವೆಂಪು ಅವರು ಒಮ್ಮೆ ತಮ್ಮ ಗೆಳೆಯರೊಂದಿಗೆ ಕಾರಂಜಿ ಕೆರೆಯೇರಿಯ ರಸ್ತೆಯಲ್ಲಿ ನಡೆದು ಮಾವಿನ ತೋಪುಗಳಿರುತ್ತಿದ್ದ ಚಾಮುಂಡಿ ಬೆಟ್ಟದ ಬುಡದ ಸ್ಮಶಾನ ಕ್ಷೇತ್ರಕ್ಕೆ ಹೋಗಿ ನಿರ್ಜನತಾ ನೀರವತಾ ಗಾಂಭೀರ್ಯದ ಬೈಗಿನಲ್ಲಿ ಕತ್ತಲು ದಟ್ಟಯಿಸುವವರೆಗೂ ಪದ್ಮಾಸನವಿಕ್ಕಿ ತಾತ್ವಿಕ ಧ್ಯಾನದಲ್ಲಿ ಮಗ್ನರಾಗುತ್ತಿದ್ದರು. ಅಂತಹ ಒಂದು ಸನ್ನಿವೇಶದಲ್ಲಿ ಸುತ್ತಲೂ ಮುತ್ತುತ್ತಿದ್ದ ಮಸಣ ಮರಣಗಳ ಬಾಹುತೆಕ್ಕೆಯಲ್ಲಿ ಸಿಲುಕಿದ ಅವರ ಚೇತನ, ಸ್ವಾಮಿ ವಿವೇಕಾನಂದರ ಕೃತಿಗಳ ಅಧ್ಯಯನದಿಂದ ಆಗ ಅವರನ್ನು ಆಕ್ರಮಿಸುತ್ತಿದ್ದ ಅದ್ವೈತದ 'ಅಭೀಃ' ತತ್ವವನ್ನು ಅನುಸಂಧಾನ ಮಾಡಿ ಅಮೃತತ್ವವನ್ನು ಅನುಭಾವಿಸುತ್ತಿತ್ತು.

"There lies beneath yon spreading mango tree
A monument unornamented, rude,
That well infolds the bones which once were free,
The relics mute that thundered once in angry mood.

Perchance he might have tried to free his land,
Or lived a homely life within his fields,
Or dared for virtue's sake to rise raise his hand
With swords indignant and wisdom's shields."[30]

ಇಲ್ಲಿ ಕವಿ ಕುವೆಂಪು ಸ್ವಾಮಿ ವಿವೇಕಾನಂದರ ಪಟ್ಟ ಅನುಯಾಯಿಯಾಗಿದ್ದರಿಂದ ಅವರಂತೆ ವೀರ ಸನ್ಯಾಸಿಯಾಗಲು ಇಚ್ಚಿಸಿದ್ದರು. ಅವರು ಸ್ಮಶಾನಕ್ಕೆ ಹೋಗಿ ಧ್ಯಾನ ಮಾಡಿ ಅಲ್ಲಿಯ

ವಾತವರಣವನ್ನು ಇಲ್ಲಿ ವಿವರಿಸುತ್ತಿದ್ದಾರೆ. ಅಲ್ಲಿ ಸುತ್ತಮುತ್ತಲೂ ಗೋರಿಗಳೂ ಬಹುಪಾಲು ಉರುಳಿಬಿದ್ದು ಮುರಿದಿರುತ್ತಿದ್ದವು. ಕೆಲವು ಸೀಳುಬಿಟ್ಟು ಓರೆಯಾಗಿ ಒರಗಿ ತಮ್ಮ ಗತಿ ಮುಂದಿನ ಮಳೆಗಾಲಕ್ಕೆ ಮುಗಿಯುತ್ತದೆ ಎಂದು ಸಾರುವಂತಿದೆಯಂತೆ. ಕೆಲವುಗಳ ಹೊಟ್ಟೆಯ ಇಟ್ಟಿಗೆಗಳೆಲ್ಲ ಹೊರಚೆಲ್ಲಿ ನೋಡುವುದಕ್ಕೆ ಕನಿಕರ ಬರುವಂತ್ತಿದ್ದು, ಅಂತಹ ಒಂದು ಗೋರಿಯ ಪಕ್ಕದಲ್ಲಿಯೋ ಅಥವ ಅದರ ಮೇಲೆಯೋ ಬರೆದ ಕವನವಿದು. ಇಲ್ಲಿ ಕವಿ ತುಂಬಾ ಸೂಕ್ಷ್ಮ ಮನಸ್ಸಿನವರೆಂದೆನಿಸುತ್ತದೆ. ಅವರು ಸಾವನ್ನು ತಿರಸ್ಕರಿಸುವ ಅಥವಾ ಧಿಕ್ಕರಿಸುವ ಛಲದಿಂದ ಇಂಥ ಪ್ರಯೋಗಗಳನ್ನು ಮಾಡುತ್ತಿದ್ದರೆನ್ನಬಹುದು. ಸಾವು ಕೂಡ ಹುಟ್ಟಿನಷ್ಟೇ ಸಹಜವಾದ ಪ್ರಕ್ರಿಯೆ ಎಂಬ ಅತ್ಯುನ್ನತ ತತ್ವಜ್ಞಾನವನ್ನು ಅವರು ಅಷ್ಟು ಕಿರಿ ವಯಸ್ಸಿನಲ್ಲಿಯೇ ಸಾಧಿಸಿದ್ದರು.

ಇದಕ್ಕೆ ಮತ್ತೊಂದು ಉದಾಹರಣೆಯಾಗಿ ಕವಿ ಕುವೆಂಪು ೬.೬.೧೯೨೫ರಲ್ಲಿ ಹಳ್ಳಿಯ ಸಂಜೆ ಎಂಬ ಕವಿತೆಯನ್ನು ರಚಿಸಿದ್ದಾರೆ. ಇಲ್ಲಿ ಕುವೆಂಪು ತನ್ನ ಕವಿತೆಯಲ್ಲಿ **ಹಳ್ಳಿಯ ಸೊಬಗನ್ನು** ಚಿತ್ರಿಸಿದ್ದಾರೆ.

"ನಾನಾ ವರ್ಣವಿಲಾಸದಿ ನಲಿಯುವ
ಅಡವಿಯ ಅವಿರಳ ತಳಿರಿನೊಳು
ಮರ್ಮರ ನಾದವ ಮಾಡುತ ನಲವಿಂ
ಮುಂಗಾರಾನಿಲ ಸುಳಿಯುವನು."[೩೧]

ಕವಿ ಕುವೆಂಪು ಅವರು ಮೇಲಿನ ಕವನವನ್ನು ಹೀಗೆ ವರ್ಣಿಸಿದ್ದಾರೆ– ಮುಂಗಾರು ಪ್ರಾರಂಭವಾಗಿ ಎಲ್ಲ ಹಸುರಾಗಿರುತ್ತವೆ. ಒಮ್ಮೊಮ್ಮೆ ಸಂಜೆಯಲ್ಲಿ ಮೋಡಸರಿದು ಇಳಿಬಿಸಿಲು ಹಸುರ ಮೇಲೆ ಬಿದ್ದು ಮಲೆಗಳೆಲ್ಲ ಮೋಹಕವಾಗುತ್ತವೆ. ಅಂತಹ ಸಂದರ್ಭವಿರುವ ಸಂಜೆಯಿದು ಎಂದು ಧ್ವನಿಸುತ್ತಿದ್ದಾರೆ.

ಭಾರತೀಯ ಸಂಸ್ಕೃತಿಯು ಎಲ್ಲ ಕಾಲಗಳಲ್ಲಿಯೂ ಹಲವಾರು ವಿಭಿನ್ನ ಸಂಸ್ಕೃತಿಗಳ ಸಂಪರ್ಕ, ಸಂಘರ್ಷಗಳಿಗೆ ಒಳಗಾಗುತ್ತಾ ಬಂದಿದೆ. ಭಾರತೀಯ ಸಂಸ್ಕೃತಿ ಆಯಾ ಕಾಲದ ಪರಕೀಯ ಸಂಸ್ಕೃತಿಗಳ ಆಕರ್ಷಣೆ–ವಿಕರ್ಷಣೆಗಳಿಗೊಳಗಾಗುತ್ತ ಆ ಸಂಸ್ಕೃತಿಗಳ ಉತ್ತಮಾಂಶ ಗಳನ್ನು ಸ್ವೀಕರಿಸಿ ತನ್ನ ಅಸ್ತಿತ್ವಕ್ಕೆ ಧಕ್ಕೆ ತರುವ ಪ್ರತಿಗಾಮಿ ನೆಲೆಗಳಿಗೆ ಪ್ರತಿರೋಧವನ್ನು ಒಡ್ಡುತ್ತಾ ಬಂದಿರುವುದನ್ನು ಕಾಣಬಹುದು. ಇದನ್ನು ಆಯಾ ಕಾಲದ ಚರಿತ್ರೆ ಹಾಗೂ ಸಾಂಸ್ಕೃತಿಕ ಸಂದರ್ಭದಿಂದ ಗ್ರಹಿಸಬಹುದಾಗಿದೆ. ಬ್ರಿಟಿಷರು ಭಾರತದಲ್ಲಿ ರಾಜಕೀಯ ಪರಿಸರಕ್ಕೆ ಕೈ ಹಾಕಿದಾಗ ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿ ಅನೇಕ ಬಿಕ್ಕಟ್ಟುಗಳೇ ಏರ್ಪಟ್ಟವು.

ಕುವೆಂಪು The Village Postman of Malnaud (ಮಲೆನಾಡಿನ ಹಳ್ಳಿಯ ಅಂಚೆಯವನು) ಎಂಬ ಕವನವನ್ನು ೨೮.೮.೧೯೨೫ರಲ್ಲಿ ರಚಿಸಿದ್ದಾರೆ. ಆ ಕಾಲದಲ್ಲಿ ಅಂಚೆಯ ಅಣ್ಣ ಅಂಚೆಯನ್ನು ಹೊತ್ತು ಮನೆಗೆ ತರುವುದೇ ಒಂದು ಸಂಭ್ರಮದ ಸಂಗತಿಯಾಗಿತ್ತು. ಅಂಚೆ ಅಣ್ಣ ಅಂದರೆ

ಮಕ್ಕಳಿಗೆ ತುಂಬಾ ಪ್ರೀತಿ. ಪುಟ್ಟ ಕುವೆಂಪು ತಮ್ಮ ಸ್ವಂತ ಅನುಭವವನ್ನು ಹೊತ್ತು ಆ ಅನುಭವವನ್ನು ಎಳೆ ಎಳೆಯಾಗಿ ಬಿಡಿಸಿ ಬರೆದ ಕವನವಿದು.

"Behold, with jingling spear he runs
With a mighty heart and mind,
As if a warrior bold he stuns
The shades of evening blind;
And chases swift with spear in hand
The demon of the stilly land."[32]

'ಆ ದಟ್ಟ ಮಲೆನಾಡಿನ ಕಾಡಿನಲ್ಲಿ ಅಂಚೆಯವನು ಕುಕ್ಕೋಟದಿಂದಲೆ ಮೆಲ್ಲಗೆ ಓಡುತ್ತಾ ಊರಿಂದ ಊರಿಗೆ ಅಂಚೆ ಸಾಗಿಸುತ್ತಿದ್ದನು. ಅವನ ಕೈಯಲ್ಲಿ ಈಟಿಯಂತಹ ಒಂದು ಕಬ್ಬಿಣದ ತುದಿಯ ಕೋಲಿದ್ದು, ಅದರ ತುದಿಗೆ ಏಳೆಂಟು ಸಣ್ಣ ತಗಡಿನ ತುಂಡುಗಳ ಗೊಂಚಲು ಸಿಕ್ಕಿಸಿರುತ್ತಿತ್ತು. ಅದು ಅವನು ಕುಕ್ಕೋಡಿದಂತೆಲ್ಲ ಗಣಗಣಗಣ ಸದ್ದು ಮಾಡುತ್ತಾ ಕಾಡಿನ ಹುಲಿ ಮೊದಲಾದ ಕ್ರೂರ ಪ್ರಾಣಿಗಳನ್ನು ಹೆದರಿಸಿ ಓಡಿಸುತ್ತಿತ್ತು. ಅವನು ಕತ್ತಲೆ ಕತ್ತಲೆಯಾಗುವ ಬೈಗು ಹೊತ್ತಿನಲ್ಲಿ ಊರು ಸಮೀಪಿಸಿದಾಗ ತುಸು ಜೋರಾಗಿಯೆ ಕುಕ್ಕೋಡಿ ಬರುತ್ತಿದ್ದುದರಿಂದ ತಗಡಿನ ಗೊಂಚಲಿನ ಸದ್ದು ಮಕ್ಕಳಿಗೆ ಮನ ಮೋದಕವಾಗಿಯೂ ಅನ್ಯಲೋಕ ಸಂಚಾರವಾಗಿಯೂ ತೋರಿ ಅದನ್ನು ಬೆರಗಾಗಿ ಆಲಿಸುತ್ತಿದ್ದರು' ಎಂದು ಕುವೆಂಪು ಅವನನ್ನು ಬಣ್ಣಿಸುತ್ತಾರೆ.

ಸಂಗೀತಕ್ಕೆ ಯುದ್ಧವನ್ನು ತಡೆಯುವ ಮತ್ತು ನೃತ್ಯಕ್ಕೆ ಕಾಯಿಲೆಗಳನ್ನು ಮುಂದೂಡುವ ಶಕ್ತಿಯಿದೆ. ಜಗತ್ತಿನಲ್ಲಿ ಶಬ್ದ ಮತ್ತು ಮಧುರ ಧ್ವನಿ ಎರಡನ್ನು ಆಲಿಸುತ್ತೇವೆ. ಘರ್ಷಣೆ, ಸ್ಫೋಟ ಮೊದಲಾದವು ಶಬ್ದವನ್ನು ಉಂಟುಮಾಡುತ್ತವೆ. ಈ ಶಬ್ದ ಮನಸ್ಸಿಗೆ ಸಂತೋಷ ನೀಡುವುದಿಲ್ಲ. ಸಂಗೀತ, ಗಾಯನ ಮಧುರ ಧ್ವನಿಯನ್ನು ಪ್ರತಿನಿಧಿಸುತ್ತವೆ. ಇವು ಆನಂದವನ್ನು ಉಂಟುಮಾಡುತ್ತವೆ. ಈ ಕವನದಲ್ಲಿ ಕವಿ ಕುವೆಂಪು ಅವರು ಒಬ್ಬ ಸಂಗೀತಗಾರನನ್ನು ಒಬ್ಬ ಜಾದುಗಾರನಾಗಿ ನೋಡುವ ಪರಿಕಲ್ಪನೆಯಿದೆ.

"Sweet charmer, when I hear thy voice
My heart becomes a child;
The woes of life depart and joys
Abounding make me wild,"[33]

ಈ ಕವಿತೆಯಲ್ಲಿ ಮಧುರವಾದ ಸಂಗೀತಕ್ಕಿರುವ ಮಹತ್ವವನ್ನು ಎಳೆ ಎಳೆಯಾಗಿ ವಿವರಿಸುತ್ತಿದ್ದಾರೆ. ಯಾವುದಾದರೂ ಸುಶ್ರಾವ್ಯವಾದಂತಹ ಸಂಗೀತವನ್ನು ಆಲಿಸುತ್ತಿದ್ದರೆ, ಆ ಸಂಗೀತವು ನಮ್ಮನ್ನು ಮೈಮನ ಮರೆಸಿ ಬೇರೊಂದು ಜಗತ್ತಿಗೆ ಕೊಂಡೊಯ್ಯುವ ಸಾಮರ್ಥ್ಯವಿದೆ.

ಇಲ್ಲಿ ಕವಿ ಸಂಗೀತದಿಂದ ಅಂತಹ ರಸಾನುಭವಕ್ಕೆ ಒಳಗಾಗಿ ತಮ್ಮ ಬಾಲ್ಯಕ್ಕೆ ಹೋಗಿ ಎಲ್ಲಾ ಕಷ್ಟಗಳನ್ನು ಮರೆತು ಸಂಪೂರ್ಣ ಆನಂದದಲ್ಲಿ ತೇಲುತ್ತಿದ್ದಾರೆ. ಇದರ ಮುಂದಿನ ಸಾಲುಗಳು ಪಡೆದುಕೊಳ್ಳುವ ತಿರುವು ಗಮನಿಸಬೇಕಾದದ್ದು.

"This world of dust melts to a heaven

And pleasures greet by Fancy given."[34]

ನರಕವೆಲ್ಲವೂ ಮಾಯವಾಗಿ ಎಲ್ಲೆಡೆ ಸ್ವರ್ಗವು ಆವರಿಸಿ, ಭ್ರಮೆಗಳಿಂದ ದೂರವಾಗಿ ಎಲ್ಲೆಡೆಯಲ್ಲಿಯು ಚೈತನ್ಯದ ಕಳೆ ತುಂಬಿಕೊಂಡಿದೆ.

"If thou wert He, O charmer sweet,
The musician great
I fain would fall upon thy feet
And ever be thy mate,
Thou charmeth all; thou mayst be He,
The singer great and Ever Free!"[35]

ಸಂಗೀತವೆನ್ನುವುದು ಒಂದು ತಪಸ್ಸಿದ್ದಂತೆ, ಅದು ಒಂದು ರೀತಿಯ ಆತ್ಮಾನುಭವ. ಅದಕ್ಕಿರುವ ಅದ್ಭುತ ಶಕ್ತಿ ಅನನ್ಯವಾದುದು. ಸದಾಕಾಲ ಅಂತರಂಗದಲ್ಲಿ ಆನಂದ ನೀಡುವ ಅನುಭೂತಿಯ ರಸ ಅದು ಕವಿಯೆನ್ನುತ್ತಿದ್ದಾರೆ ತಮ್ಮನ್ನು ಸಂಪೂರ್ಣವಾಗಿ ಆ ಸಂಗೀತಗಾರ ತನ್ನಲ್ಲಿಗೆ ಸೆಳೆಕೊಂಡು ತಾನು ಅವನಲ್ಲಿಗೆ ಪೂರ್ಣ ಶರಣಾಗತಿ ಹೊಂದಿ ಸದಾ ಕಾಲ ಅವನ ಬಳಿಯೇ ಇರುವಂತಹ ಸಹಚಾರಿ ಆಗಲು ಇಚ್ಚಿಸುತ್ತೇನೆಂದು. ಅವನ ಸಂಗೀತವನ್ನು ಆಲಿಸುವ ಎಲ್ಲಾ ಶ್ರೋತೃಗಳನ್ನು ಮೋಹಗೊಳಿಸುವ ಒಬ್ಬ ಮಹಾನ್ ಮಾಂತ್ರಿಕನು ಅವನು, ಮಹಾನ್ ಹಾಡುಗಾರನು ಅವನು. ಅವನು ಸದಾ ಸ್ವತಂತ್ರ, ಸ್ವಚ್ಛಂದ ಎಂದು ಹೊಗಳಿದ್ದಾರೆ.

ಕುವೆಂಪು ಅವರು The Flood: An Incident ಎಂಬ ಶೀರ್ಷಿಕೆಯ ಕವಿತೆಯನ್ನು ಕಥನ ಕವನ, ಲಾವಣಿ ಜಾತಿಯಲ್ಲಿದೆ. ಪ್ರಸ್ತುತ ಕಥನ ಕವನದಲ್ಲಿ ಪ್ರವಾಹದ ನೀರು ಸುತ್ತುವರಿದ ಗುಡಿಸಲೊಂದರಲ್ಲಿದ್ದ ತಾಯಿ ಮಗು ಕೊಚ್ಚಿ ಹೋದ ಘಟನೆಯನ್ನು ಹಾಡುಗಬ್ಬದಂತೆ ಹೇಳುವ ಕವನವಿದು.

"The rain is falling fast and loud the west wind roars;
The ranging floods increase, they splash the feeble shores.
It is the dead of night; a dismal scene to see
The lonely cottage standing by the banyan tree.

Five days are past and still the feeble house doth stand
Immersed by floods beyond the aid of human hand.
In scarlet lines the lightings flash across the sky,
And thunder rumbles loud; it quells the moaning sigh.

A female form appears upon the scene; aghast
She stand with misty light and still wild roars the blast.

The wind moans, and the storm blows loud, the billows cry,
And Death's External Chariot rumbles in the sky."[36]

ಈ ಮೇಲಿನ ಸಾಲುಗಳು ವರ್ಣಿಸುವ ದೃಶ್ಯ ಹೃದಯ ವಿದ್ರಾವಕ. ಇಲ್ಲಿ ಆಕಾಶದ ಹೊಡೆತ ಅಂದರೆ ವಿಧಿಯ ಹೊಡೆತ. ಆ ಹೊಡೆತ ಆಕಾಶದಿಂದ ಮಳೆಯ ರೂಪದಲ್ಲಿ ಜನ ತಲೆ ಎತ್ತದಂತೆ ಬಡಿಯುತ್ತದೆ. ಮಳೆರಾಯನ ಆರ್ಭಟ ಎಷ್ಟರ ಮಟ್ಟಿಗೆ ಇದೆ ಎಂದರೆ ಬಿಡದೇ ಐದು ದಿನಗಳ ಕಾಲ ಸುರಿಯುತ್ತಿರುವ ಮಳೆ. ಆ ಮಳೆಗೆ ಒಂದು ಪುಟ್ಟ ಗುಡಿಸಲೊಂದು ಮಾನವನ ಸಹಾಯ ಹಸ್ತದ ಅವಕಾಶ ಮೀರಿ ನೆರೆಯ ಜಲದಲ್ಲಿ ಮುಳುಗುತ್ತಿದೆ. ಗಾಳಿಯು ರೋದಿಸುತ್ತಿದೆ, ಆಕಾಶದಲ್ಲಿ ಗುಡುಗು ಮಿಂಚುಗಳ ಆರ್ಭಟ ಜೊತೆಗೆ ಕತ್ತಲು ಕವಿದ ಕಾರ್ಮೋಡಗಳ ಭೀಕರತೆ ಯಮನ ಅಗಮನದ ಸೂಚಕದಂತೆ ಕಾಣಿಸುತ್ತಿದೆ.

"The roaring floods rush on, the cottage crashing falls;
They spread a havoc wild, they break the sod-built walls;
And the sweet place where the kind mother and the child
Lived, turns to be a spot full desolate and wild."[37]

ಕೊನೆಯ ಸಾಲುಗಳಲ್ಲಿ ಮಳೆಯು ಮತ್ತಷ್ಟು ಭೀಕರತೆಯನ್ನು ತಾಳಿ ಪ್ರವಾಹದ ರೌದ್ರ ರೂಪವನ್ನು ತೋರಿಸುತ್ತಿದೆ. ವಿಕೋಪದಿಂದ ಎಲ್ಲವೂ ಕೊಚ್ಚಿಹೋಗುತ್ತಿದೆ, ದಯೆ ಎನ್ನುವುದೇ ಇಲ್ಲದ ಪ್ರವಾಹಕ್ಕೆ ಆ ಒಂದು ಗುಡಿಸಿಲಿನಲ್ಲಿ ವಾಸವಾಗಿದ್ದ ತಾಯಿ ಮಗು ಕೊಚ್ಚಿ ಹೋಗಿದ್ದಾರೆ. ಇದನ್ನು ಕವಿ ಹೃದಯ ಕಂಡು ಬಹಳ ನೊಂದುಕೊಂಡಿದೆ.

ಕುವೆಂಪು Death of Tippu ಎಂಬ ಶೀರ್ಷಿಕೆಯ ಕವನವನ್ನು ೯.೯.೧೯೨೩ರಲ್ಲಿ ರಚಿಸಿದ್ದಾರೆ. ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿದ್ದ ಸಮಯದಲ್ಲಿ ಬರೆದ ಕವನವಿದು. ಕುವೆಂಪು ಈ ಕವನ ಕುರಿತು ಹೀಗೆ ಹೇಳಿದ್ದಾರೆ: 'ಹಗಲು ಹನ್ನೆರಡು ಗಂಟೆಯಲ್ಲಿ ರಾಜ್ಯ ಕಳಕೊಂಡವರು' ಎಂದು ಮುಸಲ್ಮಾನರನ್ನು ಹಂಗಿಸುವುದನ್ನು ನಾನು ಹುಡುಗನಾಗಿದ್ದಾಗ ಕೇಳಿದ್ದೆ. ಟಿಪ್ಪು ಸುಲ್ತಾನ್ ಚದುರಂಗದಾಟಕ್ಕೆ ಕೂತಿದ್ದವನು ಹಾಗೆಯೆ ಬಿಟ್ಟೆದ್ದು ಮುತ್ತಿಗೆ ಹಾಕಿದ್ದ ಇಂಗ್ಲೀಷ್ ಮತ್ತಿತರ ಸೇನೆಗಳೊಡನೆ ಕಾದಾಡಿ ಮಡಿದನಂತೆ.' ನೆನಪಿನ ದೋಣಿಯಲ್ಲಿ ಕೃತಿಯಲ್ಲಿ ಇದರ ಉಲ್ಲೇಖವಿದೆ.

"It was a day full bright and clear;
The soldiers all were merry;
Each sword was laid aside, each spear;
There was no rush nor hurry.

But soon they heard the cannon's boom,
The sign of the English army;
The startling sounds proclaimed the doom
And every mind was stormy."[38]

ಒಂದು ಮತ್ತು ಎರಡನೆಯ ಸಾಲುಗಳಲ್ಲಿ – ಅಂದು ಟಿಪ್ಪುವಿನ ರಾಜ್ಯದಲ್ಲಿ ತಿಳಿಯಾದ ವಾತಾವರಣ, ಯಾವುದೇ ಯುದ್ಧದ ಸುಳಿವಿನ ಭೀತಿಯಿಲ್ಲದೇ ಅಂದಂದಿನ ದಿನಚರಿಯನ್ನು ನಿಧಾನಗತಿಯಲ್ಲಿ ಆಚರಿಸುತ್ತಿರುವ ಸೈನಿಕರು. ಆದರೆ ಕ್ಷಣಾರ್ಧದಲ್ಲಿ ಇಂಗ್ಲೀಷರ ಫಿರಂಗಿಯ ಬೆಚ್ಚಿಸುವ ಸದ್ದು ಕೇಳಿಸಿದಾಕ್ಷಣವೇ ಎಲ್ಲರ ಮನದಲ್ಲಿ ಅವನತಿಯ ಭಯ ಕಾಡತೊಡಗಿತು.

"Three armies marched onward and fast,
all firm and like an ocean;
While Tippu heard the rifle blast
And saw them all in motion.

"Let me be once out of the wall
And cross the mother river;
I'll make the English banner fall
And all their allies shiver."

With this he grasped his mighty sword
And put on his warlike armour,
And leaving his half-finished board
Rushed forth into the clamour."[39]

ಆ ಭಯಾನಕ ಸದ್ದು ಕೇಳಿಸಿದ ತಕ್ಷಣವೇ ಮೂರು ಸಿಪಾಯಿಗಳ ತಂಡವೊಂದು ಹರಿತವಾದ ಶಸ್ತ್ರಾಸ್ತ್ರಗಳನ್ನು ಹಿಡಿದು ಯುದ್ಧಕ್ಕೆ ಅಣಿಯಾದರು. ಇನ್ನೊಂದು ಕಡೆ ಟಿಪ್ಪು ಕೋವಿ ಹಾರಿದ ಸದ್ದನ್ನು ಕೇಳಿ ಯುದ್ಧಕ್ಕೆ ಕದನ ವಸ್ತ್ರ ಕವಚ ಕುಂಡಲಗಳನ್ನು ಧರಿಸಿ, ಖಡ್ಗ ಹಿಡಿದು ನಾವು ಈ ಇಂಗ್ಲೀಷರನ್ನು ಸೋಲಿಸಿಯೇ ತೀರುತ್ತೇವೆ ಎಂಬ ಆತ್ಮವಿಶ್ವಾಸವನ್ನು ತುಂಬಿಕೊಂಡು ತಾನು ಆಡುತ್ತಿದ್ದ ಚದುರಂಗದಾಟವನ್ನು ಅರ್ಧಕ್ಕೆ ಬಿಟ್ಟು ನುಗ್ಗಿದನು ರಣರಂಗಕ್ಕೆ, ತನ್ನ ಸೈನ್ಯವನ್ನು ಜೊತೆಯಲ್ಲಿ ಕರೆಕೊಂಡು.

"A bullet brought the Sultan down;
Earth did him all her homage.
His mighty scepter sword and crown
Passed to a tale of old age...."[40]

ಟಿಪ್ಪು ವೀರಾವೇಷದಲಿ ಇಂಗ್ಲೀಷರ ವಿರುದ್ದ ಹೋರಾಡುವ ಸಮಯದಲ್ಲಿ ಸಿಡಿದ ಗುಂಡು ಟಿಪ್ಪುವಿಗೆ ತಾಕಿದಾಕ್ಷಣ ಅವನು ನೆಲಕ್ಕೆ ಬಿದ್ದ. ಅವನ ಖಡ್ಗ, ಕಿರೀಟ, ಪರಾಕುಗಳೆಲ್ಲ ನೆಲಕಚ್ಚಿದವು. ಸುಲ್ತಾನನಾದರೂ ಅಷ್ಟೆ, ತಿರುಕನಾದರೂ ಅಷ್ಟೆ ಸಾವು ಸಮೀಪಿಸಿದಾಗ ಯಾವ ಭೇದ ಮಾಡದೆ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಇದು ಮನುಷ್ಯ ಜನ್ಮದ ಕಟು ಸತ್ಯ.

ಮಹಾರಾಜ ಕಾಲೇಜಿನ ಆಟದ ಮೈದಾನದಲ್ಲಿ ಅಗಾಗ ಚೆಂಡಾಟದ ಸ್ಪರ್ಧೆ ನಡೆಯುತ್ತಿತ್ತು. ಆಗ ಕುವೆಂಪು ಇತರ ಸ್ನೇಹಿತರೊಂದಿಗೆ ಗುಂಪುಗುಂಪಾಗಿ ನೋಡಲು ಸೇರುತ್ತಿದ್ದರು. ಆ ಸಂದರ್ಭದಲ್ಲಿ Football ಎಂಬ ಕವನವನ್ನು ರಚಿಸಿದ್ದಾರೆ.

"It's time, it's time, the game shall begin, boys,
And the play-ground heaves like the harvest field;
Move on, or else it will be too late, boys,
And you shall lose the gift that the play may yield."[41]

ಪ್ರಸ್ತುತ ಕವನವು ನಾಲ್ಕೇ ಸಾಲಿನದು. ಆದರೂ ಮುಖ್ಯವಾದ ಕವಿತೆ. ಕುವೆಂಪು ಬರೀ ನಿಸರ್ಗ, ದೇವರು, ಆಧ್ಯಾತ್ಮ, ಸ್ವಾತಂತ್ರ್ಯದ ವಿಚಾರದಲ್ಲಷ್ಟೇ ಅಲ್ಲದೇ ಶರೀರ ಶಕ್ತಿಯಲ್ಲೂ ಆಟ-ಓಟದಲ್ಲಿಯೂ ಆಸಕ್ತಿಯನ್ನು ಹೊಂದಿದ್ದರು. ತಮ್ಮ ನಿತ್ಯದ ದಿನಚರಿಯಲ್ಲಿ, ಪ್ರತಿ ದಿನ ಯೋಗ ಮಾಡುವ ಅಭ್ಯಾಸವನ್ನ ಅಳವಡಿಸಿಕೊಂಡಿದ್ದರು. ಜೀವನ ಪ್ರಗತಿಗೆ ಶಿಕ್ಷಣ ಹೇಗೆ ಅವಶ್ಯಕವೋ ಹಾಗೆಯೇ ಶರೀರದ ಆರೋಗ್ಯಕ್ಕೆ ದೈಹಿಕ ಶಿಕ್ಷಣ ಅವಶ್ಯವಾಗಿರುತ್ತದೆ ಎಂದು ಬಲವಾಗಿ ನಂಬಿದ್ದರು. ಕವಿ ಕ್ರೀಡಾಂಗಣವನ್ನು ಒಂದು ಫಲವತ್ತಾದ ಕೃಷಿ ಭೂಮಿಗೆ ಹೋಲಿಸುತ್ತಿದ್ದಾರೆ. ಜೊತೆಗೆ ಸಮಯವನ್ನು ವ್ಯರ್ಥಮಾಡದಿರಲು ಹೇಳುತ್ತಿದ್ದಾರೆ.

ಕುವೆಂಪು ಇಂಡಿಯಾ ಇಂಗ್ಲೆಂಡಿಗೆ ಎಂಬ ಸಾನೆಟ್ಟನ್ನು ಫೆಬ್ರವರಿ ೧೯೨೩ರಲ್ಲಿ ರಚಿಸಿದ್ದಾರೆ. ಅವರು ಈ ಕವನದ ಹಿನ್ನಲೆಯನ್ನು ಹೀಗೆ ವಿವರಿಸಿದ್ದಾರೆ. 'ಆಗ ನಮ್ಮನ್ನಾಳುತ್ತಿದ್ದು ನಮ್ಮ ಸ್ವಾತಂತ್ರ್ಯ ಹೋರಾಟವನ್ನು ಬಗ್ಗು ಬಡಿಯುತ್ತಿದ್ದ ರಾಜಕೀಯದ ಇಂಗ್ಲೆಂಡಿಗೂ ಕವಿ ಸಾಹಿತಿ ತತ್ತ್ವಶಾಸ್ತ್ರಜ್ಞ ವಿಜ್ಞಾನಿಗಳಿಂದ ಲೋಕ ಗೌರವಕ್ಕೆ ಪಾತ್ರವಾಗಿದ್ದ ಇಂಗ್ಲೆಂಡಿಗೂ ಇರುವ ಭೇದವನ್ನು ಕವಿ ಗಮನಿಸಿದ್ದಾನೆ' ಎಂದು ತಮ್ಮ ಮಾತುಗಳನ್ನು ಹೇಳಿದ್ದಾರೆ.

"England! If ever love thy mighty name
It is not for Manchester or Lanchashire;

Not for thy pomp, nor imperial ire,
Nor for thy splendid and colossal frame;
But for those mighty minds of noble fame
That walked thy breast and walk with quill and lire.
Sweet names that plunge in my celestial fire,
And unaffected stand by curse or blame!"[42]

ದೇಶಪ್ರೇಮ, ಇಂಗ್ಲೀಷರ ಮೇಲಿನ ಆಕ್ರೋಶ ಮತ್ತು ರೊಮ್ಯಾಂಟಿಕ್ ಇಂಗ್ಲೀಷ್ ಕವಿಗಳ ಮೇಲಿನ ಅಪಾರವಾದ ಒಲವು ಇವೆಲ್ಲವುದರ ಮೇಲಿನ ತಮ್ಮ ಸ್ಪಷ್ಟ ನಿಲುವನ್ನು ಕುವೆಂಪು ಪ್ರಸ್ತುತ ಕವಿತೆಯಲ್ಲಿ ಕಂಡರಿಸಿದ್ದಾರೆ. ಕವಿ ಇಂಗ್ಲೆಂಡ್‌ನ್ನು ಇಷ್ಟಪಡುವುದು ಅದರ ವೈಭವಕ್ಕಲ್ಲ, ಸಾಮ್ರಾಜ್ಯಕ್ಕಲ್ಲ, ಆದರೆ ನಿನ್ನ ಒಡಲೊಳಗಿಂದ ಹುಟ್ಟಿಬಂದಂತಹ ಶ್ರೇಷ್ಠ ಚಿಂತಕರು ಮತ್ತು ಕವಿಗಳು, ಸಾಹಿತ್ಯ ಕ್ಷೇತ್ರದಲ್ಲಿ ಅವರು ಮಾಡಿರುವ ಅಪಾರವಾದ ಸಾಧನೆ, ಅಪೂರ್ವ ಚಿಂತನೆಗಳು ಅವುಗಳಿಗೆ ನಾನು ಮರುಳಾಗಿದ್ದೇನೆ ಎಂದು ಧ್ವನಿಸುತ್ತಿದ್ದಾರೆ.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೧೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.ಅದೇ, ಪುಟ ೯೦೬.

೨. ಅದೇ, ಪುಟ ೯೦೯.

೩. ಕುವೆಂಪು; ನೆನಪಿನ ದೋಣಿಯಲಿ;ಪುಟ ೧೭೫, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೪. John Milton; Milton Poetry and Prose; with Essays by Johnson Hazlitt Macaulay, First Edition 1920,Great Britain at the University Press, Oxford.

೫. ಕುವೆಂಪು; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೧೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೬. ಅದೇ, ಪುಟ ೯೧೧.

೭. ಅದೇ, ಪುಟ ೯೧೨.

೮. ಅದೇ, ಪುಟ ೯೧೪–೯೧೫.

೯. ಅದೇ, ಪುಟ ೯೧೬.

೧೦. ಅದೇ, ಪುಟ ೯೧೮.

೧೧. ಅದೇ, ಪುಟ ೯೧೮

೧೨. **ಅಪೋಲೋ:** ಕಲೆ, ಸಾಹಿತ್ಯ, ಸತ್ಯಗಳ ಗ್ರೀಕ್‌ನ ದೇವತೆಯಾಗಿದ್ದನು. ಅವನ ತಂದೆ ಜ಼ಿಯಸ್ ಮತ್ತು ತಾಯಿ ಲಿಟೋ.

೧೩. **ಲಿಟೋ:** ಅಪೋಲೋ, ಆರ್ಟೆಮಿಸ್ಸರ ತಾಯಿ.

೧೪. **ಡೆಲೋ:** ಇದು ಗ್ರೀಸ್‌ನ ಸೈಕ್ಲೇಡ್ಸ್ ದ್ವೀಪ ಸಮೂಹದ ಮಧ್ಯಭಾಗದಲ್ಲಿರುವ ಮೈಕೋನೋಸ್ ಸಮೀಪದಲ್ಲಿ ಈ ದ್ವೀಪವಿದೆ. ಈ ದ್ವೀಪದ ನಿವಾಸಿಗಳಿಗೆ ಜನನ ಮತ್ತು ಸಾವು ಪ್ರಮುಖ ಸಮಸ್ಯೆಗಳಾಗಿದ್ದವು. ಏಕೆಂದರೆ ಆ ದ್ವೀಪವನ್ನು ಅಪೋಲೊ ಮತ್ತು ಆತನ ಸಹೋದರ ಆರ್ಟೆಮಿಸ್ಸರ ಜನ್ಮಸ್ಥಳವೆಂದು ನಂಬಲಾಗಿದೆ. ಆದ ಕಾರಣ ಆ ದ್ವೀಪವನ್ನು ಬಹಳ ಪವಿತ್ರ ಭೂಮಿ ಎಂದು ನಂಬಲಾಗಿದೆ ಮತ್ತು ಅಂದಿನಿಂದ ಅಲ್ಲಿ ಮರ್ತ್ಯ ಹೆರಿಗೆಯನ್ನು ನಿಷೇಧಿಸಲಾಗಿದೆ. ಗರ್ಭಿಣಿ ಸ್ತ್ರೀಯರು ತಮ್ಮ ನೆರೆಯ ಹೆರಿಗೆಯ ಸಮಯಕ್ಕೆ ಮುಂಚಿತವಾಗಿ ಪಕ್ಕದ ದ್ವೀಪವಾದ ರೈನಿಯಾಗೆ ತೆರಳಬೇಕಾಯಿತು.

೧೫. **ಹೆರಾ:** ದೇವತೆಗಳ ರಾಣಿ ಮತ್ತು ಒಲಂಪಿಯಾನ್ ಪ್ಯಾಂಥಿಯನ್ನಲ್ಲಿ ಜ಼ಿಯಸ್‌ನ ಹೆಂಡತಿ ಮತ್ತು ಸಹೋದರಿ. ಅವಳು ಮದುವೆ ಮತ್ತು ಹುಟ್ಟಿನ ದೇವತೆಯಾಗಿದ್ದಳು.

೧೬. ಕುವೆಂಪು; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೯೨೦, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೧೭. ಅದೇ, ಪುಟ ೯೨೧.

೧೮. ಅದೇ, ಪುಟ ೯೨೧.

೧೯. ಅದೇ, ಪುಟ ೯೬೯.

೨೦. ಅದೇ, ಪುಟ ೭೫೫.

೨೧. ಅದೇ, ಪುಟ ೧೦೨೩.

೨೨. ಅದೇ, ಪುಟ ೧೦೨೩.

೨೩. ಅದೇ, ಪುಟ ೧೦೧೯.

೨೪. ಅದೇ, ಪುಟ ೧೦೨೦.

೨೫. ಕುವೆಂಪು; ನೆನಪಿನ ದೋಣಿಯಲ್ಲಿ; ಪುಟ ೨೧೮, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೨೬. ಅದೇ, ಪುಟ ೨೧೮-೨೧೯.

೨೭. Thomos Gray ; The Poetical Works of Thomas Gray ; Page 51, Published by Jhon Sharpe 1826, London.

೨೮. ಕುವೆಂಪು; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨; ಸಂ. ಕೆ.ಸಿ. ಶಿವಾರೆಡ್ಡಿ, ಪುಟ ೧೦೧೧, ಕನ್ನಡ ವಿ.ವಿ., ಪ್ರಸಾರಾಂಗ, ಹಂಪಿ.

೨೯. ಅದೇ, ಪುಟ ೧೦೧೧.

೩೦. ಕುವೆಂಪು: ನೆನಪಿನ ದೋಣಿಯಲ್ಲಿ: ಪುಟ ೫೪೭, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೩೧. ಅದೇ, ಪುಟ ೨೧೨-೨೧೩.

೩೨. ಅದೇ, ಪುಟ ೨೧೧.

೩೩. ಅದೇ, ಪುಟ ೨೧೧.

೩೪. ಅದೇ, ಪುಟ ೨೧೧.

೩೫. ಅದೇ, ಪುಟ ೨೦೭.

೩೬. ಅದೇ, ಪುಟ ೨೦೭.

೩೭. ಅದೇ, ಪುಟ ೨೦೪-೨೦೫.

೩೮. ಅದೇ, ಪುಟ ೨೦೫.

೩೯. ಅದೇ, ಪುಟ ೨೦೫.

೪೦. ಅದೇ, ಪುಟ ೨೦೬.

೪೧. ಅದೇ, ಪುಟ ೨೨೪-೨೨೫.

* * * * * *

## ೬.೨. ಪ್ರೇಮ ಕಾವ್ಯ

ಕುವೆಂಪು ಅವರ ಪ್ರಣಯ ಗೀತೆಗಳಲ್ಲಿ ನಿತ್ಯಜೀವನದ ನೋವು ನಲಿವುಗಳನ್ನು ಕಂಡ ಕವಿಚೇತನದ ವಿಶಿಷ್ಟ ಅನುಭವಗಳು ಒಲವು ಅಂಕುರಿಸಿ ಫಲಿಸುವವರೆಗಿನ ಅವಸ್ಥಾಂತರಗಳ ಸುಂದರ ಚಿತ್ರಣವಿದೆ. ನಲ್ಲನಲ್ಲೆಯರ ಹಂಬಲು, ವಿರಹ, ಪರಸ್ಪರ ಸ್ತುತಿ, ಆತ್ಮ ಸಮರ್ಪಣ, ಪುನರ್ಮಿಲನ, ಆನಂದ ಮುಂತಾದವುಗಳನ್ನು ಕುವೆಂಪು ತನ್ಮಯತೆಯಿಂದ ವರ್ಣಿಸಿದ್ದಾರೆ. ಅವರು ತಮ್ಮ ರಮಣಿಯನ್ನು ವರ್ಣಿಸುವ ರೀತಿಯೂ ವಿಶಿಷ್ಟವಾದುದು. ಅವರ ದೃಷ್ಟಿಯಲ್ಲಿ ಒಲವಿನ ಸತಿ, 'ಸಹಧರ್ಮಿಣಿ'ಯು ಕವಿಗೆ ಸ್ವರ್ಗಸ್ಫೂರ್ತಿ;' 'ಪ್ರತಿಭೆಗೆ ಭಾವ ವಿದ್ಯುಚ್ಛಕ್ತಿ;' 'ಕಲೆಗೆ ವಿದ್ಯಾಶಕ್ತಿ.;' 'ಪ್ರಾಣಕೆ ಪ್ರೇಮ ಶಕ್ತಿ', ಪ್ರೇಮ ಹರಗಿರಿಜೆಯರ ಹರಕೆಯನ್ನು ಹೊತ್ತು ಭೂಮಿಗವತರಿಸಿರುವ ದೇವಶಕ್ತಿ. ಕಾಮದ ಬದಲಿಗೆ ಪೂರ್ಣತೆಗೆ ದಾರಿ ಮಾಡಿಕೊಡುವ ಪ್ರೇಮವನ್ನು ಅವಲಂಬಿಸಿ ಆರಾಧಿಸಿದರೆ ಮರ್ತ್ಯನಾದವನು ಅಮರನಾಗಬಹುದೆಂಬ ಸಂದೇಶವನ್ನು ಕುವೆಂಪು ತಮ್ಮ ಪ್ರಣಯ ಗೀತೆಗಳಲ್ಲಿ ನೀಡಿದ್ದಾರೆ.

ನಮ್ಮ ಪೂರ್ವಿಕರು, ತಮ್ಮ ಸಂದೇಶಗಳನ್ನು ಕಳುಹಿಸಲು ಪಾರಿವಾಳಗಳನ್ನು ಬಳಸುತ್ತಿದ್ದುದು ಸರ್ವವೇದ್ಯ. ಮೇಘದೂತಮ್ ಕಾಳಿದಾಸನಿಂದ ಬರೆಯಲ್ಪಟ್ಟಿರುವ ಒಂದು ಸಂಸ್ಕೃತ ಖಂಡಕಾವ್ಯ ೧೧೧ ಶ್ಲೋಕಗಳನ್ನು ಒಳಗೊಂಡಿರುವ ಈ ಕಾವ್ಯವು ಕರ್ತವ್ಯ ಲೋಪಪವೆಸಗಿದ್ದಕ್ಕಾಗಿ ಬಹಿಷ್ಕೃತಗೊಂಡು ಮಧ್ಯ ಭಾರತದಲ್ಲಿ ಅಜ್ಞಾತವಾಸ ಅನುಭವಿಸುತ್ತಿದ್ದ ಯಕ್ಷನೊಬ್ಬನು ಕೈಲಾಸ ಪರ್ವತದ ಅಲಕಾವತಿಯಲ್ಲಿರುವ ತನ್ನ ಪ್ರಿಯತಮೆಗೆ ಮೋಡಗಳ ಮೂಲಕ ಸಂದೇಶ ಕಳಿಸುವ ವರ್ಣನೆಯನ್ನು ಒಳಗೊಂಡಿದೆ.[೧]

ಕುವೆಂಪು The flying Dove ಎಂಬ ಶೀರ್ಷಿಕೆಯ ಕವನವನ್ನು ೨೫.೧೦.೧೯೨೩ರಲ್ಲಿ ರಚಿಸಿದ್ದಾರೆ. ಅದರಲ್ಲೂ ಪ್ರೇಮಿಗಳಿಗಂತೂ ಪಾರಿವಾಳವೆಂದರೆ ಅದೊಂದು ಸುಮಧುರ ಜ್ಞಾಪಕ ಚಿತ್ರಶಾಲೆ. ಈ ಕವಿತೆಯಲ್ಲಿ ಹಾರುತ್ತಿರುವ ಒಂದು ಪಾರಿವಾಳವನ್ನು ಸಂದೇಶವಾಹಕನನ್ನಾಗಿ ಮಾಡಿ ತನ್ನ ಪ್ರಣಯಿನಿಯೆಡೆಗೆ ಕಳುಹಿಸುವಂತಿದೆ. ಈ ಕೆಳಗಿನ ಕವಿತೆಯಲ್ಲಿ ಕುವೆಂಪು ಅವರು ಅಂತದ್ದೇ ಒಂದು ಪ್ರೇಮ (ಸಂದೇಶ) ಕಾವ್ಯವನ್ನು ರಚಿಸಿದ್ದಾರೆ.

"Oh whither dost thou fly, sweet Bird?
Wherefore such hurried flight?
A moment pause, I have a word,
O chunk thy plumage bright.
If to my native home you go,
Sweet Bird, massager sweet,
Stop, there I have a lovely brow,
A maiden sweet to greet."[2]

ಇಲ್ಲಿ ಕವಿ ಕುವೆಂಪು ಅವರು ಹೀಗೆ ಬಣ್ಣಿಸುತ್ತಿದ್ದಾರೆ: ಒಬ್ಬ ಪ್ರಿಯತಮ ಪ್ರಿಯತಮೆಗೆ ತಮ್ಮ ಒಲುಮೆಯ ಓಲೆಯೊಂದನ್ನು, ಓಲೆಕಾರನಾದ ಪಾರಿವಾಳನನ್ನು ಕೊಂಚ ಹೊತ್ತು ತಡೆದು ಅದರ ಬಳಿ ತಮ್ಮ ಪ್ರೇಮ ಸಂದೇಶವನ್ನು ರವಾನಿಸುತ್ತಿದ್ದಾರೆ.

ಕುವೆಂಪು ಅವರ ಮತ್ತೊಂದು ಕವಿತೆ ಆ ಅಂಚೆಯವನು, ಈ ಶೀರ್ಷಿಕೆಯ ಕವಿತೆಯನ್ನು ಅವರು ೨೩.೯.೧೯೨೩ರಲ್ಲಿ ರಚಿಸಿದ್ದಾರೆ. ಅವರು ಅಸದೃಶವಾದಂತಹ ಮಾನವನ ಮಹೋನ್ನತ ಚಿಂತನೆಯನ್ನ ಈ ಕವನದಲ್ಲಿ ಚಿತ್ರಿಸಿದ್ದಾರೆ.

"Like the Messenger great that he's
At the eve of every life
To free the soul from worldly ties
From the human abject strife,
Thou comest when the birds go to sleep
And give reflections high and deep."[3]

ಅಂಚೆಯವನನ್ನ ಆಳವಾದ, ಮಹೋನ್ನತವಾದ ಚಿಂತನೆಯನ್ನು ಮನಕ್ಕೆ ಕೊಡುವಂತಹ ಒಬ್ಬ ಸಂದೇಶವಾಹಕನ ತರಹ ಪರಿಭಾವಿಸಿ ಬರೆದ ಈ ಕವಿತೆಯಲ್ಲಿ ಲೌಕಿಕವಾದ ಅಂಚೆಯವನನ್ನ ಆಲೌಕಿಕದೆಡೆಗೆ ಕರೆದುಕೊಂಡು ಹೋಗುವ ಮಹಾನ್ ಸಂದೇಶವಾಹಕನಂತೆ ಪರಿಭಾವಿಸಲಾಗಿದೆ. ಒಂದು ಚಿತ್ರವನ್ನು, ಕೃತಿಯನ್ನು, ವ್ಯಕ್ತಿಯನ್ನು ಆಧ್ಯಾತ್ಮಿಕವಾಗಿಯೂ ಭೌತಿಕವಾಗಿಯೂ, ಲೌಕಿಕವಾಗಿಯೂ ನೋಡಲು ಅವರಿಗೆ ಸಾಧ್ಯವಾಗುತ್ತಿತ್ತು.

ಕುವೆಂಪು Lucy ಎಂಬ ಶೀರ್ಷಿಕೆಯ ಕವನವನ್ನು ೧೭.೮.೧೯೨೩ರಲ್ಲಿ ರಚಿಸಿದ್ದಾರೆ. ಕೈಶೋರ ಪ್ರಣಯ ಎಂದು ಕರೆಯಲ್ಪಡುವ ಪ್ರಕಾರದ ಪ್ರೇಮ ಕವನವಿದು. ವರ್ಡ್ಸ್‌ವರ್ತನ ಲೂಸಿ ಸರಣಿಯ ಕವನಗಳಿಂದ ಪ್ರೇರಿತರಾಗಿ ಬರೆದ ಕವನವಿದು. ಇದು ಲೂಸಿ ಎಂಬ ಹುಡುಗಿಯ ಬಗ್ಗೆ ಇರುವ ಪದ್ಯ. ಈ ಕಾಲ್ಪನಿಕ ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ವರ್ಡ್ಸ್‌ವರ್ತ್ ಬರೆದ ಹಲವು ಪದ್ಯಗಳ ಒಟ್ಟೂ ಗೊಂಚಲನ್ನು 'ಲೂಸಿ ಪದ್ಯಗಳು' ಎಂದು ಗುರುತಿಸುವ ರೂಢಿಯಿದೆ. ಇಲ್ಲಿ ನಾವು ಹೊಸ ರೀತಿಯ ಪ್ರೇಮಕಾವ್ಯವೊಂದನ್ನು ನೋಡುತ್ತೇವೆ. ಇಲ್ಲಿ ಪ್ರೇಮವಿದೆ, ಉತ್ಕಟವಾದ ಸಂತೋಷವಿದೆ, ಎಲ್ಲದರ ಆಳದಲ್ಲಿ ವಿಷಾದವಿದೆ. ಲೂಸಿಯ ಒಟ್ಟು ೫ ಪದ್ಯಗಳಲ್ಲಿ ಒಂದನ್ನು ಉದಾಹರಣೆಯಾಗಿ ಗಮನಿಸಬಹುದು.

ಕವನದ ಮೊದಲ ನಾಲ್ಕು ಸಾಲುಗಳು ಹೀಗಿವೆ:

"Strange fits of passion have I known:
And I will dare to tell
But in the Lover's ear alone,
what once to me befell."[4]

ಅವನ ಬದುಕಿನಲ್ಲಿ ಅನೇಕ ರೀತಿಯ ಉತ್ಪಾತಗಳು ಸಂಭವಿಸಿವೆ. ಅದನ್ನು ಹೇಳಿಕೊಳ್ಳುವ ಧೈರ್ಯವೂ ಇದೆ. ಆದರೆ ಅವುಗಳ ವಿಷಯವನ್ನು ಇನ್ನೊಬ್ಬ ಪ್ರೇಮಿಯ ಕಿವಿಯಲ್ಲಿ ಮಾತ್ರ ಹೇಳಬಲ್ಲೆ ಎನ್ನುತ್ತಾನೆ. ಅಂದರೆ ಆತ ಸಹೃದಯನೊಬ್ಬನನ್ನು ಹುಡುಕುತ್ತಿದ್ದಾನೆ. ಕುವೆಂಪು ತಮ್ಮ ಲೂಸಿ ಕವಿತೆಯಲ್ಲಿ ಈ ವಸ್ತುವನ್ನು ಮರ್ತ್ಯದಿಂದ ಬಿಡಿಸಿ ಮೇಲಕ್ಕೊಯ್ದಿದ್ದಾರೆ.

"I love thee not for earthly pleasures
But for the joy of heaven;"[5]

ಕವಿ ಪ್ರೇಮವನ್ನು ಪ್ರೇಮಿಸುವುದು ಬರೀ ಲೌಕಿಕ ಅಥವ ದೈಹಿಕ ಭೋಗಕ್ಕಲ್ಲ ಅದಕ್ಕೆ ವಿರುದ್ಧವಾಗಿ, ನಿಜವಾದ ಪ್ರೀತಿಯಲ್ಲಿ ಒಂದು ತರಹದ ಸ್ವರ್ಗೀಯತೆ ಅಡಕವಾಗಿರುತ್ತದೆ. ಅಂಥಹ ಭಾವಕ್ಕಾಗಿ ನಾನು ನಿನ್ನನ್ನು ಪ್ರೀತಿಸುತ್ತೇನೆ ಎನ್ನುವುದು ಉದಾತ್ತ ಭಾವ. ಅದು ಬಂದಿರುವುದೇಕೆ?

"And in thy heart live holy treasures
But to few maidens given."[6]

ಕಣ್ಣಿನ ಸಂಸ್ಕಾರ, ಅಂತರಂಗದ ಸಂಸ್ಕಾರ ಚೆಲುವನ್ನು ಗುರುತಿಸುವುದು; ಅಂತೆಯೇ ಸೌಂದರ್ಯ ನೋಡುವ ಕಣ್ಣಿನಲ್ಲಿರುತ್ತದೆ. ಆಂತರ್ಯದ ದೃಷ್ಟಿಯನ್ನು ತೆರೆಯಬೇಕು. ಅಗ ಕಾಣುವುದೆಲ್ಲವೂ ಚೆಲುವಾಗಿ ಕಾಣುತ್ತದೆ. ಕವಿಗೆ ಲೂಸಿಯ ಶುದ್ಧ ಮತ್ತು ದೈವೀಕವಾದ ಹೃದಯದಲ್ಲಿ ಪವಿತ್ರ ಸಂಪತ್ತಿನ ರಾಶಿಯೇ ಕಾಣತೊಡಗಿದೆ ಮತ್ತು ಅಂತಹ ರಾಶಿಯು ಸಾಮಾನ್ಯ ಸ್ತ್ರೀಯರಿಗೆ ಕೊಟ್ಟಿರುವಂಥದ್ದಲ್ಲ, ಅದು ಆ ದೈವದ ವರವೇ ಸರಿ, ಅದು ನಿನಗೆ ದೊರಕಿರುವುದು, ಎಂದು ತಮ್ಮ ಪ್ರೀತಿಯನ್ನು ವಿವರಿಸಿಕೊಳ್ಳುವ ಕವನವಿದಾಗಿದೆ.

* * * * * *

**ಕೊನೆ ಟಿಪ್ಪಣಿ:**

೧. ಕಾಳಿದಾಸ : ಮೇಘಸಂದೇಶ : ಸಂ ಮಹಮಹೋಪಧ್ಯಾಯ ಮತ್ತು ಟಿ. ಗಣಪತಿ ಶಾಸ್ತ್ರಿ, ೧೯೧೯ ರಾಜಕೀಯ ಮುದ್ರಣ ಯಂತ್ರಾಲಯ, ತ್ರಿವೇಂಡ್ರಂ. (ಪಿಡಿಎಫ್)

೨. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೧೩-೧೧೪, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೩. ಅದೇ, ಪುಟ ೨೧೩.

೪. ವಿಲಿಯಮ್ ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಡ್ಜ್: ಲಿರಿಕಲ್ ಬ್ಯಾಲಡ್ಸ್ : ಪುಟ ೧೪೯, ಸಂ ಆರ್.ಎಲ್.ಬ್ರೆಟ್ ಮತ್ತು ಎ.ಆರ್.ಜೊನ್ಸ್. ಎರಡನೆಯ ಮುದ್ರಣ. (ಪಿಡಿಎಫ್)

೫. ಕುವೆಂಪು : ನೆನಪಿನ ದೋಣಿಯಲ್ಲಿ : ಪುಟ ೨೦೮, ಹತ್ತನೆಯ ಮುದ್ರಣ ೨೦೧೨, ಉದಯರವಿ ಪ್ರಕಾಶನ, ಮೈಸೂರು.

೬. ಅದೇ, ಪುಟ ೨೦೮.

* * * * * *

# ಸಮಾರೋಪ

ಕುವೆಂಪು ಅವರು ೨೦ನೆಯ ಶತಮಾನ ಕಂಡ ದೈತ್ಯ ಪ್ರತಿಭೆ ಮತ್ತು ಅವರೊಬ್ಬ ಸಾಹಿತ್ಯ ಬೃಹನ್ಮೂರ್ತಿ. ಕುವೆಂಪು ಬೆಳೆದದ್ದು ಇಂಗ್ಲೀಷ್ ಭಾಷಾ ಸಾಹಿತ್ಯದಲ್ಲಿಯೇ ಎಂಬುದು ಕವಿಯ ಸ್ಪಷ್ಟ ನುಡಿ. ಆದರೆ ಕುವೆಂಪುರವರು ಪಾಶ್ಚಾತ್ಯ ರೋಮ್ಯಾಂಟಿಕ್ ಕವಿಗಳಿಂದ ಪ್ರೇರಣೆ ಪಡೆದು ರೂಪುಗೊಂಡ ನವೋದಯ ಸಾಹಿತ್ಯ ಮಾತ್ರ ಪಾಶ್ಚಾತ್ಯರ ಅನುಕರಣೆಯಂತೆ ತೋರದೆ, ತನ್ನದೆ ಆದ ಪ್ರಾದೇಶಿಕ ಸೊಗಸುಗಳನ್ನು ಅನೇಕ ಕವಿಗಳ ವಿವಿಧ ಕಾವ್ಯಾಭಿವ್ಯಕ್ತಿಗಳಲ್ಲಿ ಪ್ರಕಟಪಡಿಸಿತು.

ಇದಕ್ಕೆ ನಾಂದಿ ಎಂಬಂತೆ ಕುವೆಂಪುರವರು ತೀರ್ಥಹಳ್ಳಿಯುಲ್ಲಿ ಓದುತ್ತಿದ್ದಾಗ ಮಂಜಪ್ಪಗೌಡರೊಡನೆ ಕಾಲುನಡಿಗೆಯಲ್ಲಿಯೇ ಇಂಗ್ಲಾದಿಗೆ ಹೊರಟಿದ್ದರು. ಮಧ್ಯಾಹ್ನದ ಬಿಸಿಲು ಹಸಿರು ವನಗಳ ಮೇಲೆ ಹೊಳೆದಿತ್ತು. ಆಗ ಗೌಡರು ದಾರಿಯಲ್ಲಿ ಇತರ ಅನೇಕ ಬುದ್ಧಿವಾದಗಳೊಂದಿಗೆ Long Fellow ಕವಿಯ A Psalm of Life ಹೇಳಿ ಪುಟ್ಟ ಕುವೆಂಪುರವರ ಮನಸ್ಸಿನಲ್ಲಿ ಸಾಹಿತ್ಯದ ಬೀಜ ಬಿತ್ತಿದರು.

ಕುವೆಂಪು ಕೃತಿಗಳ ಅಧ್ಯಯನ ಈಗಾಗಲೇ ಹಲವು ನೆಲೆಗಳಲ್ಲಿ ನಡೆದಿವೆಯಾದರೂ, ಅವರ ಇಂಗ್ಲಿಷ್ ಕವಿತೆಗಳ ಕೇಂದ್ರವಾಗಿಟ್ಟುಕೊಂಡ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಈ ನಿಟ್ಟಿನಲ್ಲಿ ಅವರ ಎಲ್ಲಾ ಇಂಗ್ಲಿಷ್ ಕವಿತೆಗಳ ಸಮಗ್ರವಾದ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ. ಕುವೆಂಪು ಅವರ ಸೃಜನಶೀಲ ಸಾಹಿತ್ಯ ಕೃತಿಗಳಿಂದ ಅವರ ಆಲೋಚನೆ ಅಭಿಪ್ರಾಯಗಳನ್ನು ಗ್ರಹಿಸಿಕೊಳ್ಳುವುದಕ್ಕಿಂತ ಭಿನ್ನವಾಗಿ ಅಥವಾ ಇನ್ನೂ ಹತ್ತಿರದಿಂದ ಗ್ರಹಿಸಲು ಇಲ್ಲಿ ಸಾಧ್ಯವಾಗಿದೆ.

ಅಂತಃಸ್ಫೂರ್ತಿಯೆನ್ನುವುದು ಕವಿ ಮನಸ್ಸನ್ನು ಪೋಷಿಸಿ, ಸ್ಫೂರ್ತಿ ಬತ್ತದಂತೆ ಕಾಯ್ದು, ಬೆಳೆಯಿಸುವಂಥದ್ದು. ಕುವೆಂಪುರವರಿಗೂ ಈ ಪೋಷಣೆ ದೊರಕಿತ್ತೆನ್ನುವುದು ವಾಸ್ತವವಾದ ಸಂಗತಿ. ಅವರ ವಿದ್ಯಾರ್ಥಿ ದೆಸೆಯಲ್ಲಿ ಹಿರಿಯರು ಅವರಿಗೆ ಒದಗಿಸಿದ ಸ್ಫೂರ್ತಿ, ಬೆನ್ನು ತಟ್ಟಿದ ಬಗೆ ಬಿಗಿನರ್ಸ್ ಮ್ಯೂಸ್‌ನ, ಏಲಿಯನ್ ಹಾರ್ಪ್‌ನ ಕವಿತೆಗಳನ್ನು ಆಂಗ್ಲ ಭಾಷೆಯಲ್ಲಿ ಬರೆಯಿಸಿತು ಎನ್ನಬಹುದು.

ಕುವೆಂಪು ಕವಿಯಾಗಿ ಬೆಳೆದು ಬಂದ ಪ್ರಕ್ರಿಯೆಯಲ್ಲಿ, ತಮ್ಮ ಭಾವಸಂವೇದನೆಗಳಿಗೆ ವಸ್ತು ವಿಷಯಗಳಿಗೆ ಸಂಬಂಧಿಸಿದಂತೆ ಅಭಿವ್ಯಕ್ತಿ ಮಾಧ್ಯಮವನ್ನು ವಿಂಗಡಿಸಿಕೊಳ್ಳುವರು. ಈ ನೆಲೆಯಲ್ಲಿ

ಗ್ರಹಿಸಿದಾಗ, ಆಲೋಚನೆಯ ಮಟ್ಟದ ವಸ್ತು ವಿಷಯಗಳಿಗೆ ತಕ್ಕಂತೆ ಅಭಿವ್ಯಕ್ತಿ ಭಾಷೆಯನ್ನು ಆಯ್ಕೆ ಮಾಡಿದ ಕವಿಯ ಉದ್ದೇಶ ಹಾಗೂ ಮನಸ್ಥಿತಿ ತಿಳಿದುಬರುತ್ತದೆ.

ನನ್ನ ಇಂಗ್ಲಿಷ್ ಮಹಾ ಪ್ರಬಂಧದ ವಿಷಯದಲ್ಲಿ ಉಲ್ಲೇಖವಾಗಿರುವ ಅಭಿವ್ಯಕ್ತಿ (Expression) ಈ ಪಾರಿಭಾಷಿಕ ಪದದ ಅರ್ಥವನ್ನು ಸೂತ್ರ ರೂಪದಲ್ಲಿ ಖಚಿತವಾಗಿ ವಿವರಿಸುವುದು ಕಷ್ಟ. ಏಕೆಂದರೆ ಇದು ಕಾವ್ಯದ ವಿವಿಧ ಪ್ರಕಾರಗಳನ್ನು ಕುರಿತು ಭಿನ್ನವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಅಭಿವ್ಯಕ್ತಿ ಮನುಷ್ಯರ ಸಹಜ ಪ್ರಕ್ರಿಯೆ. ಅಭಿವ್ಯಕ್ತಿ ಎಂಬ ಪದವನ್ನು ಸರಳವಾಗಿ ವಿವರಿಸುವುದಾದರೆ, ನಮ್ಮ ಭಾವನೆಗಳನ್ನು ತಮ್ಮದೆಯಾದ ರೀತಿಯಲ್ಲಿ ಪ್ರಕಟಪಡಿಸುವ ದಾರಿ. ಅಭಿವ್ಯಕ್ತಿ ಅದು ಒಂದು ಸಂಕೀರ್ಣ ಧ್ವನಿ (ಫೋನೆಟಿಕ್) ಎಕ್ಸ್‌ಪ್ರೆಸ್ ಮಾಡುವುದು ಕಾವ್ಯದ ಕೆಲವು ಅಂಶಗಳನ್ನು ಒತ್ತು ನೀಡಲು ಬಳಸಲಾಗಿದೆ. ಅಭಿವ್ಯಕ್ತಿ ಎಂಬ ಸಾಧನವನ್ನು ಲೇಖನಿ ಹಿಡಿದು ಬರಹ ರೂಪದಲ್ಲಿ ಪ್ರಕಟಪಡಿಸಬಹುದು, ಕುಂಚವನ್ನು ಹಿಡಿದು ಚಿತ್ರದ ಮೂಲಕವೂ ವ್ಯಕ್ತಪಡಿಸಬಹುದು.

ಕಾವ್ಯದ ಅಭಿವ್ಯಕ್ತಿಯನ್ನು ಮುಖ್ಯವಾಗಿ ನೋಡುವುದಾದರೆ. ಕವಿಯ ಭಾಷಾ ಜ್ಞಾನ, ಪೂರ್ವ ಕಾವ್ಯ ಪರಿಚಯ, ಲಕ್ಷಣ, ಜ್ಞಾನ ಇವೆಲ್ಲ ಕಾವ್ಯ ಸೃಷ್ಟಿಗೆ ಕಾರಣವೆಂದು ಪ್ರಾಚೀನ ಲಾಕ್ಷಣಿಕರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಆಧುನಿಕ ಕವಿಗಳ ಕಾವ್ಯದ ಪ್ರೇರಣೆ, ಧೋರಣೆಗಳನ್ನು ಗಮನಿಸಿದರೆ ಬದುಕಿನ ಬೆಳವಣಿಗೆಯಲ್ಲಿ ತಾನು ಅನುಭವಿಸುವ ನೋವುಗಳಿಗೆ ಮಾತಿನ ಕವಚ ಮೂಡಿಸಿ ತನ್ನ ಸುತ್ತಲಿನ ಪ್ರಪಂಚ ಹಾಗೂ ಬದುಕನ್ನು ಸೂಕ್ಷ್ಮ ಸಂವೇದನಾಶೀಲ ಭಾವಗಳೊಂದಿಗೆ ಭಾಷೆಯಲ್ಲಿ ಅಭಿವ್ಯಕ್ತ ಪಡಿಸುವುದೆ ಕಾವ್ಯ. ಅದನ್ನು ಹೇಳಲು ಶಬ್ದ, ಪ್ರತೀಕ, ಸಂಕೇತ, ಮುಂತಾದ ಪರಿಕರಗಳನ್ನು ಬಳಸಿಕೊಂಡು ಪ್ರಕೃತಿ, ಸೌಂದರ್ಯ, ರಸ, ಲಕ್ಷಣಗಳಿಂದ ಹಂಚಿಕೊಂಡ ಕಾವ್ಯವೆಂದು ಪರಿಭಾವಿಸಲಾಗಿದೆ. ಇಂಥ ಕಾವ್ಯ, ಪ್ರಾಚೀನ ಮಾದರಿಯನ್ನು ಬಿಟ್ಟು ಪ್ರೇಮ, ದೇಶಭಕ್ತಿ, ಪ್ರಕೃತಿ, ಸೌಂದರ್ಯ, ಸುಖ, ದುಃಖ, ರಾಗ, ದ್ವೇಷ, ಜಿಜ್ಞಾಸೆ, ಶ್ರದ್ಧೆ ಮೊದಲಾದ ವಿವಿಧ ವಿಷಯಗಳನ್ನು ಕುರಿತು ಆಯಾ ಕಾಲದ ಸಮಾಜಕ್ಕೆ ಪ್ರಜ್ಞೆಯ ಕೊಂಡಿಯಾದಂತೆ ರಚನೆಗೊಳ್ಳುತ್ತಾ ಬಂದಿತು. ಕುವೆಂಪು ಅವರ ಕವಿತೆಗಳಲ್ಲಿ ಕಂಡುಬರುವ ಕಾವ್ಯಮೀಮಾಂಸೆಯ ಚಿಂತನೆಗಳನ್ನು ಈ ಕೆಳಗಿನ ಅಂಶಗಳ ಮುಖಾಂತರ ವಿಶ್ಲೇಷಿಸಲಾಗಿದೆ.

‘ಕಾವ್ಯವೆಂಬುದು ರಮಣೀಯವಾಗಿ ರಸಪೂರ್ಣವಾದುದು’ ಎಂಬುದು ಪ್ರಾಚೀನ ಮೀಮಾಂಸಕರ ಅಭಿಪ್ರಾಯ. ನವೋದಯ ಕನ್ನಡ ಸಂದರ್ಭದಲ್ಲಿಯೂ ಕಾವ್ಯ ಕ್ರಿಯೆಯ ಈ ವಿವಿಧ ಮಗ್ಗಲುಗಳ ಪರಿಚಯವಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ವಿಸ್ತೃತವಾದ ಚರ್ಚೆಗಳು ನಡೆದಿವೆ. ಕುವೆಂಪು ಅವರ ಪದ್ಯ ಭಾಗದಲ್ಲಿಯೂ ಈ ಕುರಿತಾಗಿ ಬಹಳಷ್ಟು ಮಾಹಿತಿಗಳು ದೊರಕುತ್ತವೆ. ಸೃಷ್ಟಿ ಭಗವಂತನ ಲೀಲೆಯಿಂದ ನಡೆಯುತ್ತಿರುವುದು ಎಂಬ ನಮ್ಮ ಪ್ರಾಚೀನರ

ನಂಬಿಕೆಯಂತೆಯೇ ಕವನದಲ್ಲಿ ಕವಿಯ ಕಾರ್ಯ ಮಹತ್ವದ್ದು. ಇದು ಸೃಷ್ಟಿಯಲ್ಲಿ ಭಗವಂತನ ಕಾರ್ಯದಂತೆಯೇ ಎಂಬುದು ಕುವೆಂಪುರವರ ವಿಚಾರವಾಗಿದೆ.

ಕುವೆಂಪು ಮುಖ್ಯವಾಗಿ ಪ್ರಕೃತಿ ಕವಿ ಎಂದು ಕರೆಸಿಕೊಳ್ಳಲು ಪ್ರೇರಣೆ ಇಂಗ್ಲಿಷ್‌ನ ರೊಮ್ಯಾಂಟಿಕ್ ಕವಿಗಳೆಂಬುದು ನಿಜ. ವರ್ಡ್ಸ್‌ವರ್ತ್‌ನನ್ನು ಕನ್ನಡದಲ್ಲಿ ನೆನಪಿಗೆ ತರುವಷ್ಟು ನಿಸರ್ಗಪ್ರಿಯತೆಯನ್ನು ತಮ್ಮ ಕಾವ್ಯದಲ್ಲಿ ಪ್ರಕಟಿದರು. ನಿಸರ್ಗ ಕವಿ ಎಂದೇ ಹೆಸರಾಗಿರುವ ಕುವೆಂಪು, ಪ್ರಕೃತಿಯನ್ನು ಕಾವ್ಯಕ್ಕೆ ಬಳಸುವಲ್ಲಿ ಅವರ ಮೇಲೆ ಬೀರಿದ ಪ್ರಭಾವ ಸ್ಫೂರ್ತಿಗಳು ಹಾಗೂ ಅವರ ವೈಯಕ್ತಿಕ ತುಡಿತಗಳು ಸಹ ಕಂಡುಬಂದಿದೆ. ಪ್ರಕೃತಿ ಚೆಲುವನ್ನು ಸವಿಯುವ ಕವಿ ಪ್ರಜ್ಞೆ, ಆರಾಧನಾ ನೆಲೆಯಿಂದ ಆಧ್ಯಾತ್ಮಿಕ ನೆಲೆಗೆ ಏರುವ ವಿವಿಧ ಹಂತದ ಅವರ ಮನೋಭಾವ ವ್ಯಕ್ತವಾಗಿದೆ. ಈ ಕಾರಣದಿಂದ ಕುವೆಂಪು ಅವರ ಪ್ರಕೃತಿ ಪ್ರೇಮವನ್ನು ಹಲವಾರು ದೃಷ್ಟಿಕೋನಗಳಿಂದ ಅಧ್ಯಾಯ ಮಾಡಲೆಂದೇ 'ನಿಸರ್ಗ ಕುರಿತ ವಿಚಾರಗಳು' ಎಂಬ ಸೂಕ್ತಿಯ ಅಡಿಯಲ್ಲಿ ನನಗೆ ತೋರಿದಂತೆ ಸೀಮಿತಾರ್ಥದಲ್ಲಿ ಅಧ್ಯಯನ ನಡೆಸಲು ಪ್ರಯತ್ನಿಸಿದ್ದೇನೆ. ಇಲ್ಲಿ ಕುವೆಂಪು ಅವರು ಮಾನವ ಮತ್ತು ಪ್ರಕೃತಿಯ ನಡುವೆ ಸಂಬಂಧ ಕಲ್ಪಿಸುವ ಪ್ರಯತ್ನಮಾಡಿದ್ದಾರೆ.

ಪರಮ ಪವಿತ್ರ ಪ್ರಕೃತಿ ದೇವಿಯ ಅರಾಧನೆಯೇ ಮುಕ್ತಿಗೆ ಕಾರಣ ಎನ್ನುವ ಕವಿಯ ವಿಶಾಲವಾದ ಭಾವಗಳು ಈಶ್ವರನು ನಮ್ಮಲ್ಲಿಯೇ ಇದ್ದಾನೆ ಎಂಬ ಅದ್ವೈತ ಸಿದ್ಧಾಂತವನ್ನು ಹೇಳುತ್ತಾ ವೈಚಾರಿಕತೆಯ ಬೆಳಕಿನಲ್ಲಿ ದೇವರ ಇರುವನ್ನು ಗುರುತಿಸುತ್ತಾರೆ. ಕುವೆಂಪು ಅವರ ಕಲ್ಪನಾನುಸಾರವಾಗಿ ಈ ಭುವನ ದೇವಾಲಯದಲ್ಲಿ ಪೂಜೆಯ ಪರಿಕಲ್ಪನೆ, ಸಾಂಪ್ರದಾಯಿಕ ಪರಿಭಾಷೆಯಲ್ಲಿಯೇ ವ್ಯಕ್ತವಾದರೂ, ಪೂಜಾ ಪರಿಕರಗಳು ಬದಲಾಗುತ್ತದೆ. ಇಲ್ಲಿ ಸಂಪ್ರದಾಯದ ಪೂಜೆ ನಿಸರ್ಗ ಭಾಷೆಯಾಗಿ ರೂಪಂತರಗೊಳ್ಳುತ್ತದೆ. ದೇವರನ್ನು ಕಾಣಲು ಗುಡಿಗೆ ಹೋಗಲೇಕೆ? ಪ್ರಕೃತಿಯ ಒಂದೊಂದು ಚೆಲುವಿನ ನೋಟದಲ್ಲೂ ದೇವರ ದರ್ಶನವಾಗುತ್ತಲೇ ಇರುತ್ತದೆ. ಒಂದು ಪುಟ್ಟ ಇಬ್ಬನಿ ಬಿಸಿಲಕಾವಿಗೆ ಕ್ಷಣಾರ್ಧದಲ್ಲಿ ಕರಗಿ ಹೋಗುವ ಆ ಹಿಮಬಿಂದುವಿನಲ್ಲಿ 'ದೇವರ ಮುಖ ದರ್ಶನಕೆ ಸಾಲದೇನಾ ಹನಿಯ ಅರುದರ್ಪಣಂ?' ಎಂದು ಕೇಳುವ ಕವಿಯ ದರ್ಶನಕ್ಕೆ ಎಣೆಯೆಲ್ಲಿದೆ? ಎಂದು ಪ್ರಶ್ನಿಸುತ್ತಾರೆ.

ಕುವೆಂಪು ಅವರು ದೇವರು, ಪೂಜೆ, ಭಕ್ತಿ ಕುರಿತಂತೆ ಮಾನವೀಯತೆಯ ಹಿನ್ನಲೆಯಲ್ಲಿ ವ್ಯಾಖ್ಯಾನಿಸುತ್ತಾರೆ. ದೇವರ ಪರಿಕಲ್ಪನೆಯ ವಿಶಾಲವಾದ ಅರ್ಥ ವ್ಯಾಪ್ತಿಯಲ್ಲಿ ಪ್ರಕಟಗೊಳ್ಳುವ ಜೊತೆಗೆ ಮಾನುಷ ನೆಲೆಯನ್ನೇ ದೈವತ್ವಕ್ಕೇರಿಸುವ ಪರಿ ನಿಜಕ್ಕೂ ಅನನ್ಯ. ಧರ್ಮವೆಂದರೆ ಬಾಹ್ಯ ಸ್ಥಾವರಗಳೆಂದು ತಿಳಿದವರು ಕುವೆಂಪು. ನಾವೆ ಚಲಿಸುವ ಗುಡಿಗಳು, ನಾ ಜಂಗಮ ದೇವಸ್ಥಾನ ಎಂದು ನಂಬಿ ಬದುಕಿದವರು ಕುವೆಂಪು. ಸಾಂಸ್ಥಿಕ ಧರ್ಮ ಮತ್ತು ಸಾಂಪ್ರದಾಯಿಕ

ಆಚರಣೆಗಳಲ್ಲಿ ಗುಡಿ ಗೋಪುರಗಳಲ್ಲಿ ದೇವರನ್ನು ಪೂಜಿಸುವುದನ್ನು ಕುವೆಂಪು ಸ್ಪಷ್ಟವಾಗಿ ನಿರಾಕರಿಸುತ್ತಾರೆ. ದೇವರು ಹೃದಯ ಮಂದಿರದಲ್ಲಿರಬೇಕೆಂದು ಋಷಿಗಳು, ಸಂತರು ಸಾರಿದರು. ಆದರೆ ನಮ್ಮ ಪುರೋಹಿತರು ದೇವರನ್ನು ತಮ್ಮ ಜೀವನಯಾಪನೆಯ ಸಾಧನವಾಗಿ ಮಾಡಿಕೊಂಡರು. ಆದಾಯ ಕಂಡ ಈ ಜನ ಹಾದಿ ಬೀದಿಯಲೆಲ್ಲಾ ನೂರಾರು ದೇವರುಗಳನ್ನು ಹುಟ್ಟು ಹಾಕಿದರು. ಸಾವು ಜೀವನವನ್ನು ನೋಯಿಸುವುದಿಲ್ಲ. ಸಾವಿಗೆ ಹೆದರುವುದು ಅಸಮರ್ಥನೀಯ. ಉತ್ಕಟವಾದ ನೋವಿನಿಂದ ಬಿಡುಗಡೆ ಕೊಡುವ ಮರಣವು ನಂತರ, ನಿಶ್ಶಬ್ದ ಜೋಗುಳ ಹಾಡುತ್ತಾ ತೊಡೆಯ ಮೇಲೆ ಮಲಗಿಸಿಕೊಳ್ಳುವ ತಾಯಿಯಂತೆ. ಕವಿಯ ಮನಸ್ಸಿನಲ್ಲಿ ಸಾವಿನ ಬಗೆಗಿನ ಅರ್ಥವು ಬಹಳ ಸಕಾರಾತ್ಮಕವಾದಂತಾದ್ದು. ಅವರಿಗೆ ಸಾವೆಂದರೆ ಜೀವನವಿಮುಖತೆಯೂ ಅಲ್ಲ. ಅವರು ಸಾವನ್ನು ಬಹಳ ಪ್ರೀತಿಯಿಂದ ಸ್ವಾಗತಿಸುತ್ತಿದ್ದಾರೆ.

ಕುವೆಂಪು ಅವರನ್ನು ಓದುವ ಮುಂಚೆ ಕೆಲವು ಪೂರ್ವ ತಯಾರಿಗಳು, ಅದರಲ್ಲೂ ಸ್ವಲ್ಪ ತತ್ವಜ್ಞಾನದ ಅರಿವು ಅತ್ಯಗತ್ಯ. ಕುವೆಂಪು ಯಾವುದೇ ತತ್ತ್ವ ಸಿದ್ಧಾಂತಗಳನ್ನು ಹುಟ್ಟಿನಿಂದ ಬಳುವಳಿ ಪಡೆದವರಲ್ಲ. ಅಗಾಧವಾದ ಓದು ಹಾಗೂ ಅನುಭವದ ಮೂಸೆಯಲ್ಲಿ ಅದನ್ನು ಹಿಡಿದು ನೋಡಿದ ಕಾರಣ ಅವರಿಗೆ ಅವರದೇ ಆದ ದರ್ಶನ ದ್ವಾರ ತೆರೆದುಕೊಂಡಿತು. ಸ್ವಯಾರ್ಜಿತ ಓದು ಮತ್ತು ಸ್ವಾನುಭವಗಳ ಸಂಗಮ ಅವರಲ್ಲಿದೆ. ರಾಮಕೃಷ್ಣ ಪರಮಹಂಸರ ಸಿದ್ಧಿ, ಸ್ವಾಮಿ ವಿವೇಕಾನಂದರ ಬುದ್ಧಿ, ಶ್ರೀ ಅರವಿಂದರ ಪೂರ್ಣ ದೃಷ್ಟಿ ಹಾಗೂ ಗಾಂಧೀಜಿಯವರ ಸರ್ವೋದಯ ಸೂತ್ರಗಳನ್ನು ಮೇಳೈಸಿಕೊಂಡ ವಿಶಿಷ್ಟ ಪ್ರತಿಭೆ ಅದು. ಹಾಗಾಗಿ ಕುವೆಂಪು ಅವರನ್ನು ರೊಮ್ಯಾಂಟಿಕ್ ಕವಿ, ನಿಸರ್ಗ ಕವಿ, ತೀವ್ರ ವಿಚಾರವಾದಿ, ವಿಚಾರ ಶೀಲ ಸಂಪ್ರದಾಯವಾದಿ, ವಾಸ್ತವವಾದಿ, ಆಧ್ಯಾತ್ಮವಾದಿ ಎಂದು ಮುಂತಾಗಿ ಪ್ರಪ್ರತ್ಯೇಕವಾಗಿ ಕರೆಯುವಂತಿಲ್ಲ.

ಐಹಿಕ ಪ್ರಪಂಚದಿಂದ ಕೆಲಕಾಲ ವಿಮುಖನಾಗಿ ಧ್ಯಾನಸ್ಥನಾಗಿ ಶಾಂತಿಯನ್ನು ಪಡೆಯುವುದು ಕುವೆಂಪು ಅವರ ಪ್ರಾರ್ಥನಾ ವಿಧಾನಗಳಲ್ಲಿ ಒಂದು. ಅವರು ಪೂಜಿಸುತ್ತಿದ್ದ ದೇವರು, ಸಾಂಸ್ಥಿಕ ದೇವರುಗಳಾಗಿರಲಿಲ್ಲ. ಮನುಷ್ಯ ಮಾತ್ರರಾಗಿದ್ದವರು. ಕುವೆಂಪು ತಮ್ಮನ್ನು "ಶ್ರೀ ರಾಮಕೃಷ್ಣ ಭಗವದ್ ಗೋತ್ರ ಸಂಜಾತ" ಎಂದು ಕರೆದುಕೊಂಡಿದ್ದಾರೆ.

ಸ್ವಾಮಿ ವಿವೇಕಾನಂದರು 'ಉತ್ಸವ ವಿಗ್ರಹ' ವಾದರೆ, ಶ್ರೀ ರಾಮಕೃಷ್ಣರು 'ಮೂಲಮೂರ್ತಿ.' ಆ ಮಹಾಗುರು, ಶಿಷ್ಯರಲ್ಲಿ ಯಾರೊಬ್ಬರೂ ಜನಸಾಮಾನ್ಯರ ಲೌಕಿಕ ಕ್ಷೇಮ, ಅಭ್ಯುದಯಗಳನ್ನು ತಿರಸ್ಕರಿಸಿದವರಲ್ಲ. ಶ್ರೇಯಸ್ಸಿನಂತೆ ಪ್ರೇಯಸ್ಸನ್ನೂ ಅವರು ಪುರಸ್ಕರಿಸಿದರು. ಸಾಮಾಜಿಕ ಪ್ರಜ್ಞೆ ಅವರಲ್ಲಿ ದಟ್ಟವಾಗಿತ್ತು. ಅವರ ಆಲೋಚನಾಧಾರೆಯಿಂದ ಸ್ಫೂರ್ತಿಗೊಂಡವರು ಕುವೆಂಪು. ಸಮನ್ವಯ, ಸರ್ವೋದಯ, ಪೂರ್ಣದೃಷ್ಟಿ ತಮ್ಮ ಸಾಹಿತ್ಯದ ಮೂರು ಕಣ್ಣುಗಳೆಂದು

ಹೇಳಿಕೊಂಡಿದ್ದಾರೆ. ಕುವೆಂಪು ತಮ್ಮ ಸ್ವಾಮಿ ವಿವೇಕಾನಂದ ಜೀವನ ಚರಿತ್ರೆಯ 'ಕರೆಯುತಿದೆ ಯುಗವಾಣಿ' ಎಂಬ ಅಂತಿಮ ಅಧ್ಯಾಯದಲ್ಲಿ ಕುವೆಂಪು ಅವರೇ ಹೇಳಿರುವ ಹಾಗೆ– "ಅದು ಒಂದು ವ್ಯಕ್ತಿಯ ವಾಣಿಯಲ್ಲ, ಒಂದು ಕಣ್ಣಿನ ಕಾಂತಿಯಲ್ಲ. ಅನೇಕ ಮಹಾಪುರುಷರ ಜೀವಜ್ಯೋತಿಗಳ ಸೂತ್ರ ಸಮಷ್ಟಿಯಾಗಿದೆ. ಬಹು ಜೀವನಗಳ ದರ್ಶನಗಳ ಗೋಷ್ಠಿಯಾಗಿದೆ. ಅದರಲ್ಲಿ ಪ್ರಾಚ್ಯ, ಪಾಶ್ಚಾತ್ಯ, ಹಿಂದೂ, ಕ್ರೈಸ್ತ, ಇಸ್ಲಾಂ, ಬೌದ್ಧ, ಮತ, ತತ್ವ, ವಿಜ್ಞಾನ, ಕಲೆ, ಇಹ, ಪರ, ದೇಹ, ಆತ್ಮ, ನೂತನ, ಪುರಾತನ– ಎಲ್ಲವೂ ಸಮನ್ವಯಗೊಂಡಿದೆ. ಅದು ಯಾವುದೊಂದು ಮತಕ್ಕಾಗಲಿ, ಪಥಕ್ಕಾಗಲಿ ಸೇರಿಲ್ಲ. ಅದು ಒಂದು ಜನಾಂಗದ್ದಲ್ಲ, ಸರ್ವ ಕಾಲದೇಶಗತವಾದುದು."[7] ಈ ಸಮನ್ವಯಲಕ್ಷ್ಮಿ ಕುವೆಂಪು ಅವರನ್ನು ಪ್ರಭಾವಿಸಿದೆ, ನಿಸ್ಸಂದೇಹವಾಗಿ.

ಪುರೋಹಿತಶಾಹಿ ಮತ್ತು ಸಾಮಾಜಿಕ ಅನ್ಯಾಯ ಸಂಪೂರ್ಣವಾಗಿ ಉಚ್ಚಾಟನೆಯಾಗುವ ತನಕ ದೇಶದ ಉದ್ಧಾರ ಸಾಧ್ಯವಿಲ್ಲವೆಂಬ ಸತ್ಯ ಅವರ ಆಧ್ಯಾತ್ಮಿಕ ದೃಷ್ಟಿಗೆ ಸ್ಪಟಿಕದಷ್ಟೇ ಸ್ಪಷ್ಟವಾಗಿ ಹೊಳೆಯುತ್ತದೆ. ಜಗತ್ತಿನ ಅಶಾಂತಿಗೆ, ಧರ್ಮಗ್ಲಾನಿಗೆ ಪುರೋಹಿತಶಾಹಿ ಪ್ರಬಲ ಕಾರಣವೆಂದು ಟಾಲ್‌ಸ್ಟಾಯ್‌ರಂತೆ ಕುವೆಂಪು ಸಹ ಉಗ್ರವಾಗಿ ವಾದಿಸುತ್ತಾರೆ. ಜಾತೀಯತೆ, ವರ್ಣಾಂಧತೆ ಮತ್ತು ಅಸ್ಪೃಶ್ಯತೆಗಳಿಂದ ಹಿಂದೂ ಮತ ಮುಕ್ತಗೊಂಡಿದ್ದರೆ, ಜಗತ್ತಿನಲ್ಲಿಯೇ ಅದು ಶ್ರೇಷ್ಠತಮ ಧರ್ಮವಾಗುತ್ತಿತ್ತೆಂಬುದು ಸ್ವಾಮಿ ವಿವೇಕಾನಂದರಂತೆ ಅವರೂ ಘೋಷಿಸುತ್ತಾರೆ.

ಕುವೆಂಪು ಅವರ ಕವಿತೆಗಳಲ್ಲಿ ಆದರ್ಶೀಕೃತ ಮಾನವನಿದ್ದರೆ, ಕಥೆ ಕಾದಂಬರಿಗಳಲ್ಲಿ ಮಾನವ ಸ್ವಭಾವ – ಅನುಭವಗಳ ನಿಷ್ಠುರ ಚಿತ್ರಣವಿದೆ. ಭಗವದ್ಗೀತೆಯ ಕರ್ಮಯೋಗದ ಸಾರ ಅವರ ಕೃತಿಗಳಲ್ಲಿ ಕಾಣಿಸುತ್ತದೆ. ಆದುದರಿಂದಲೇ ಅವರು 'ಜೀವ ರಥೋತ್ಸವವಿದನಣಕಿಸದಿರು ಎಲ್ಲೈ ಸಂನ್ಯಾಸಿ' ಅನ್ನುತ್ತಾರೆ. ಪ್ರಕೃತಿ ಪುರುಷರಲ್ಲಿ, ಜೀವ ಜಗತ್ತಿನ ಆಗುಹೋಗುಗಳಲ್ಲಿ ಕರ್ಮ ವ್ಯಾಪಾರವಿದೆ ಎಂಬುದು ಅವರ ನಂಬಿಕೆ. ಶ್ರೀ ಅರವಿಂದರ 'All life is Yoga' ಎಂಬ ಮಾತು ಕುವಂಪು ಅವರಲ್ಲಿ ಅಖಂಡವಾಗಿದೆ. ನಿಷ್ಕಾಮ ಕರ್ಮಗಳೆಲ್ಲವೂ ಯೋಗವೇ ಎಂಬುದು ಅವರ 'ಉಳುವಾ ಯೋಗಿಯ ನೋಡಲ್ಲಿ' ಕವಿತೆಯಲ್ಲಿ ಒಡಮೂಡಿರುವುದು ಗುರುತಿಸಬಹುದು.

ಮನುಷ್ಯ ತನ್ನ ಜೀವನದಲ್ಲಿ ಅಹಂ, ಸ್ವಾರ್ಥ ಹಾಗೂ ನಿರಂಕುಶತ್ವದೊಂದಿಗೆ ಮಾನವೀಯ ಗುಣ ಮರೆತು ಸಮಾಜಕ್ಕೆ ಕಂಟಕವಾಗಿರುವ ಸಂದರ್ಭದಲ್ಲಿ ಕುವೆಂಪು ತಮ್ಮ ಕಾವ್ಯಗಳ ಮೂಲಕ ಮಾನವೀಯ ಲಕ್ಷಣಗಳನ್ನು ಬೆಳೆಸುವಲ್ಲಿ ಪ್ರೇರಣೆ ನೀಡಿದ್ದಾರೆ. ಕುವೆಂಪು ಅವರ ಸಾಮಾಜಿಕ ಪ್ರಜ್ಞೆ ಚೇತನಗೊಂಡಿರುವುದು ಹಲವರ ಜೀವನದ ಅರಿವಿನ ಆಧಾರದ ಮೇಲೆಯೇ. ಕವಿ ಕುವೆಂಪು ಅವರು ಬಡತನವನ್ನು ಕಾಣುವ ಚಿತ್ರಗಳು ತುಂಬಾ ಕರುಣಾಜನಕವಾಗಿದೆ. ಒಬ್ಬ ನಿರ್ಗತಿಕ ಅನಾಥ ಬಾಲಕನನ್ನು ಕಂಡು ಅವರ ಸಾಮಾಜಿಕ ನ್ಯಾಯದ ಪರವಾದ

ಆತ್ಮಪ್ರಜ್ಞೆ ಸ್ಫುಟಗೊಳ್ಳುವುದನ್ನು ಚಿಕ್ಕಂದಿನಲ್ಲಿಯೇ ಗಮನಿಸಬಹುದು. ದುಖವಿಲ್ಲದೆ ಸುಖದ ಕಲ್ಪನೆಯಿಲ್ಲ, ಸಾವು ಎಂಬುದು ಇರುವುದರಿಂದಲೇ ನಮಗೆ ಜೀವನವು ಪ್ರಿಯವೂ ಮಧುರವೂ ಆಗಿ ಕಾಣುತ್ತದೆ ಎಂಬುದು ಕುವೆಂಪು ಅವರ ಸ್ಪಷ್ಟ ನಿಲುವುಗಳನ್ನು ಅವರ ಕವನಗಳಲ್ಲಿ ಕಾಣಬಹುದು. ಎದೆಯ ದನಿ ಧರ್ಮನಿಧಿ, ಕರ್ತವ್ಯವದುವೆ ವಿಧಿ ಎಂಬ ಮಾತಿನಲ್ಲಿ ಎದೆಯ ದನಿಯ ಬಗ್ಗೆ ನವೋದಯದ ಹಲವರಂತೆ ಕುವೆಂಪು ಅವರಿಗೂ ಮಾನವ ಹೃದಯದ ಕಣ್ಣಿನ ಬಗ್ಗೆ ನಂಬುಗೆ ಇತ್ತು. ಅದಕ್ಕೆ ಕುವೆಂಪು ವೈಚಾರಿಕತೆಯ ಪರಿಪ್ರೇಕ್ಷ್ಯವನ್ನು ಸೇರಿಸಿದರು. ಮನುಷ್ಯನ ಅಂತರಂಗ ವಿಕಾಸವಾಗದೆ ಮಾನವತ್ವ ದೈವತ್ವಕ್ಕೆ ಏರಲಾರದು. ಮಾನವನ ಅಂತರಂಗ ವಿಕಾಸದ ಮೂಲ ಬೀಜ ಹುಟ್ಟುವುದು ಎದೆಯ ದನಿಯಲ್ಲಿಯೇ.

ಕುವೆಂಪು ಅವರು ಸಮಾಜಮುಖಿ ಮತ್ತು ಆತ್ಮೋದ್ಧಾರದ ಆದರ್ಶಗಳನ್ನು ಗೌರವಿಸುತ್ತಿದ್ದರು. ಇದಕ್ಕೇ ಅವರು ಗಾಂಧೀಜಿ, ಪರಮಹಂಸರು, ಅರವಿಂದರು, ವಿವೇಕಾನಂದ ಮುಂತಾದವರನ್ನು ನೋಡುತ್ತಿದ್ದ ಬಗೆಯೇ ಸಾಕ್ಷಿ. ಕುವೆಂಪು ಅವರು ತಮ್ಮ ಕಾವ್ಯಗಳು ಯುವ ಸಂವೇದನೆಯನ್ನು ಸ್ವಾತಂತ್ರ್ಯ ಸಮರಕ್ಕೆ ಅಣಿಗೊಳಿಸುವ, ನವಭಾರತ ನಿರ್ಮಾಣಕ್ಕೆ ಅಗತ್ಯವಾದ ಮನೋಭೂಮಿಕೆ ಯನ್ನು ಬಿತ್ತುವ ಧೋರಣೆಯುಳ್ಳದ್ದಾಗಿದೆ. ಈ ಬಗೆಯ ಧೋರಣೆಗಳಲ್ಲಿ ಭಾರತೀಯ ನವೋದಯ ರಾಷ್ಟ್ರೀಯತೆಯ ಪರಿಕಲ್ಪನೆಗಳು ಪ್ರಕಟವಾಗುತ್ತವೆ. ಸ್ವಾತಂತ್ರ್ಯ ಹೋರಾಟಕ್ಕೆ ಅತ್ಯಗತ್ಯವಾದ ಮನೋಭೂಮಿಕೆಯನ್ನು ಜನರಲ್ಲಿ ಮೂಡಿಸಿ ಅವರು ಎಚ್ಚೆತ್ತುಕೊಳ್ಳುವಂತೆ ಪ್ರೇರೇಪಿಸುವುದರ ಕಡೆಗೆ ಕಾವ್ಯ ತುಡಿಯುತ್ತದೆ. ಬ್ರಿಟಿಷ್ ಸಾಮ್ರಾಜ್ಯಶಾಹಿ ದೆಸೆಯಿಂದ ದೇಶಕ್ಕೆ ಒದಗಿದ ದುಸ್ಥಿತಿಗಳನ್ನು ಮತ್ತು ದೇಶೀಯ ಅನನ್ಯತೆಗಳಿಗೆ ಎದುರಾದ ಆಘಾತಗಳಿಂದ ಇಲ್ಲಿನ ಬದುಕು ತಲ್ಲಣಗೊಂಡಿದ್ದು ಅವರ ಕವಿತೆಗಳಲ್ಲಿ ಕಾಣುತ್ತದೆ.

"ತಾಯ ಮೊಲೆಯಂದದಲಿ ತೋರ್ಪವಳ ಕಬ್ಬಿಣದ ಹೇರೆದೆಯ ಕೆಚ್ಚಲನು ಬಾಯ್ಗಿಟ್ಟು, ತುಟಿ ಹರಿದು ರಕ್ತ ಸೋರುವ ನಮ್ಮನೊಲಿದು ಕಾಪಾಡಯ್ಯ, ಭಾರತೀಯ ಮಕ್ಕಳಾಯುವ ರಕ್ಷಿಸಯ್ಯ"[೨] ಎಂದು ಕುವೆಂಪು ಭಾರತಾಂಬೆಯನ್ನು ಪ್ರಾರ್ಥಿಸಿದ್ದಲ್ಲದೆ ಭಾರತದ ರಾಜಕೀಯ ವ್ಯವಸ್ಥೆಯನ್ನು ಕುರಿತು ತೆಗಳಿದರು. ಕುವೆಂಪು ರಾಜಕೀಯದ ಅನಿಷ್ಠ ಸಂಕೋಲೆಗಳಿಗೆ ಸಿಕ್ಕಿದವರಲ್ಲ. ನೇರ, ದಿಟ್ಟ, ನಿಷ್ಠೆಯಿಂದ ಹೇಳಲು ಮುಂದಾದವರು. ಕುವೆಂಪು ಅವರಿಗೆ ಯುದ್ಧದ ಬಗ್ಗೆ ಅರಿವು ಮತ್ತು ಪರಿಪೂರ್ಣ ಪ್ರಜ್ಞೆಯೂ ಕೂಡ ಇತ್ತು. ಜಾತಿ, ಧರ್ಮ, ಮತಗಳ ಆಚೆ ಬನ್ನಿ ಎಂದು ತಮ್ಮ ಸಾಹಿತ್ಯದ ಮೂಲಕ ಕೂಗಿಕೊಂಡವರು. ಕೌಟುಂಬಿಕ ರಾಜಕಾರಣ, ಆರ್ಥಿಕ ರಾಜಕಾರಣ, ರಾಜಕೀಯ ರಾಜಕಾರಣ, ಪ್ರಭುತ್ವ ರಾಜಕಾರಣ, ಜಾಜಿ ರಾಜಕಾರಣ, ಅಧಿಕಾರದ ರಾಜಕಾರಣ, ಧರ್ಮೀಯ ರಾಜಕಾರಣ ಮುಂತಾದ ಅನಿಷ್ಟ ರಾಜಕಾರಣಗಳ ಬಗ್ಗೆ ಕುವೆಂಪು ಅವರಲ್ಲಿ ತಿರಸ್ಕಾರ ಮನೋಭಾವವಿತ್ತು.

ಕುವೆಂಪು ಅವರಲ್ಲಿ ಸ್ವತಂತ್ರ ರೀತಿಯ ವರ್ತನೆ, ಸುತ್ತಮುತ್ತಣದವರ ಮೇಲೆ ಪ್ರಭಾವ ಬೀರುವ ವರ್ಚಸ್ಸು ಇವು ಶೈಶವದಿಂದ ಅಸ್ಥಿಗತವಾಗಿ ಬಂದಿರುವ ಗುಣಗಳು; ಸಂಯಮ ಸಾಧನೆಯಲ್ಲಿ ಸ್ವಲ್ಪವೂ ಅಲುಗದ ದೃಢಕಠೋರ ಚಿತ್ತವುಳ್ಳವರು. ಒಮ್ಮೆ ತೊಟ್ಟ ಪ್ರತಿಜ್ಞೆಯನ್ನು ಕೊನೆ ತನಕ ಸಾಧಿಸುವ ಹಠ ನೈಸರ್ಗಿಕವಾಗಿಯೇ ಬೆಳೆದು ಬಂದಂತಿದೆ. ಅವರಿಗೆ ಪ್ರಕೃತಿಯಾರಾಧನೆ, ಸೌಂದರ್ಯೋಪಾಸನೆ ಎಷ್ಟು ಸ್ವಾಭಾವಿಕವಾಗಿ ಬಂದಿದ್ದವೋ ಹಾಗೆಯೇ ಬೇಟೆಯೂ ಅವರಿಗೆ ಸಹಜಗುಣವಾಗಿ ಪರಿಣಮಿಸಿತ್ತು. ಹೀಗೆ ತರುಣ ಕವಿ ಕುವೆಂಪು ಅವರಲ್ಲಿ ಪ್ರಕೃತಿ, ದೈವ, ಆಧ್ಯಾತ್ಮ, ಸಮಾಜಮುಖಿ ಚಿಂತನೆಗಳ ಬಗೆಗಿನ ಸೂಕ್ಷ್ಮ ವಿಚಾರಗಳ ಮೇಲಿನ ಆಸಕ್ತಿಯ ಕಿಡಿ ತಮ್ಮ ಬಾಲ್ಯದಲ್ಲಿಯೇ ಉದ್ಭವಿಸಿದ ಕಿಡಿ ಎಂದೆನ್ನಬಹುದು. ಮಂಜಪ್ಪಗೌಡರು ಲಾಂಗ್‌ಫೆಲೋ ಕವಿಯ 'ದಿ ಸಾಮ್ ಆಫ್ ಲೈಫ್' ಕವನದ ಪಂಕ್ತಿಗಳ ಮೂಲಕ ಕುವೆಂಪು ಅವರಲ್ಲಿ ಇಂಗ್ಲಿಷ್ ಸಾಹಿತ್ಯದ ಹಣತೆಯನ್ನು ಹಚ್ಚಿದ ಆ ಕವಿತೆ ಮುಂದೆ ಅದು ಪ್ರಜ್ವಲವಾಗಿ ಬೆಳೆಯುವಂತೆ ಮಾಡಿತು.

ಕುವೆಂಪು ಅವರಿಗೆ ಆ ಹದಿನೆಂಟನೇ ವಯಸ್ಸಿನಲ್ಲಿಯೇ ಅಶಾಂತಿಯನ್ನು ಸಹಿಸದ ಮಾತೃಹೃದಯಿ ತರುಣರಾಗಿದ್ದರು, ಅವರಿಗೆ ಇಂತಹ ಆಕ್ರಮಣಗಳ ಮೇಲೆ ಧಿಕ್ಕಾರವಿತ್ತು. ತಪ್ಪು ಮಾಡಿದವರನ್ನೂ ಕ್ಷಮಿಸುವ ಗುಣವನ್ನೇ ಮೂಲವಾಗಿಸಿಕೊಂಡು ಹಲವಾರು ಕವಿತೆಗಳ ರಚನೆಯಾಗಿದೆ. ವಿಶ್ವ ಮಾನವ ಸಂದೇಶ ಅಂದರೆ ಪ್ರತಿಯೊಂದು ಮಗುವೂ ಹುಟ್ಟುತ್ತಲೆ ವಿಶ್ವಮಾನವನಾಗಿ ಹುಟ್ಟುತ್ತಾನೆ. ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರಗಳನ್ನು ತಮ್ಮ ಕವಿತೆಗಳಲ್ಲಿ ಪ್ರತಿಪಾದಿಸಿದ್ದಾರೆ. ಮತಭ್ರಾಂತಿಯೂ ಮೌಢ್ಯವೂ ವೈಜ್ಞಾನಿಕ ಪ್ರಗತಿಗೆ ಹೇಗೆ ಮಹಾ ಕಂಟಕಗಳಾದವು ಎಂಬುದನ್ನು ಅವರ ಕವಿತೆಗಳಲ್ಲಿ ಕಾಣಬಹುದು. ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ ಎಂಬ ಅವರ ಕರೆಗೆ ಆ ಕವಿತೆಗಳು ಸ್ಪಷ್ಟವಾದ ಉದಾಹರಣೆಯಾಗಿವೆ.

ಬ್ರಿಟೀಷರ ಇಂಗ್ಲಿಷ್ ಶಿಕ್ಷಣದ ಪ್ರಭಾವ ಹೊಸ ವೈಜ್ಞಾನಿಕ ಮತಿಯನ್ನು, ಹೊಸ ಎಚ್ಚರವನ್ನು ಉಂಟುಮಾಡಿತು. ಆರಂಭದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಗೆ ಒಳಗಾದರೂ ಆನಂತರ ಹೊಸ ಎಚ್ಚರದ ವೈಜ್ಞಾನಿಕ ಮತಿಯ ಮಥನಕ್ಕೆ ಪ್ರಾಚ್ಯ ಮತ್ತು ಪಾಶ್ಚಾತ್ಯ ಮೌಲ್ಯಗಳು ಗುರಿಯಾಗುವುದರ ಮೂಲಕ ಹೊಸ ಪರಿಸರವೊಂದನ್ನು ಭಾರತೀಯ ಸಂವೇದನೆ ನಿರ್ಮಿಸಿಕೊಂಡದ್ದು ಸ್ವಾತಂತ್ರ್ಯ ಹೋರಾಟದ ಹಾದಿಯಲ್ಲಿ ಮಹತ್ತರವಾದ ಮುಖ್ಯ ನೆಲೆಯೆನ್ನಬಹುದು.

ಸಂಗೀತದ ಗಂಧವೂ ತಿಳಿಯದ ಕೌಟುಂಬಿಕ ಹಿನ್ನೆಲೆಯ ಕುವೆಂಪು ಅವರಿಗೆ ಬಾಲ್ಯದಿಂದಲೇ ಸಂಗೀತದತ್ತ ಒಲವು. ಸಂಗೀತಕ್ಕೆ ಯುದ್ಧವನ್ನು ತಡೆಯುವ ಮತ್ತು ನೃತ್ಯಕ್ಕೆ ಕಾಯಿಲೆಗಳನ್ನು

ಮುಂದೂಡುವ ಶಕ್ತಿಯಿದೆ ಎಂದು ತಿಳಿಸುತ್ತಾ ಕುವೆಂಪು ಅವರು ಒಬ್ಬ ಸಂಗೀತಗಾರನನ್ನು ಒಬ್ಬ ಜಾದುಗಾರನಾಗಿ ನೋಡುವ ಪರಿಕಲ್ಪನೆಯಿದೆ.

ಪ್ರೇಮ ಬಹುಮುಖಿಯಾದುದಾದರೂ, ಅದರ ಸ್ವರೂಪ ಸತ್ವ ಪರಿಣಾಮಗಳಲ್ಲಿ ಸಾಮ್ಯವಿದೆ. ಪತಿಸತಿಯರ ಪ್ರೇಮ, ಸೋದರ ಸೋದರಿಯರ ಪ್ರೇಮ, ತಂದೆ ಮಕ್ಕಳ ಪ್ರೇಮ, ನೆರೆಹೊರೆಯವರ ಪ್ರೇಮ, ಗೆಳೆಯರ ಪ್ರೇಮ, ಗುರುಶಿಷ್ಯರ ಪ್ರೇಮ, ಪುಸ್ತಕ ಪ್ರೇಮ, ಕ್ರೀಡಾ ಪ್ರೇಮ, ದೇಶ ಪ್ರೇಮ, ಈ ಪಟ್ಟಿಯನ್ನು ಹೀಗೆಯೇ ಲಂಬಿಸಬಹುದು. ಒಟ್ಟಿನಲ್ಲಿ ಕುಟುಂಬ, ಸಮಾಜ, ದೇಶ, ಜಗತ್ತುಗಳ ಶಾಂತಿಗೆ, ಐಕ್ಯಕ್ಕೆ ಹಾಗೂ ಭದ್ರತೆಗೆ, ಸಾಮರಸ್ಯಕ್ಕೆ ಶಿವ ಸ್ವರೂಪಿಯಾದ ಪ್ರೇಮವೇ ಮೂಲ ಕಾರಣವೆಂಬುದು ಕುವೆಂಪು ಅವರ ಸ್ಪಷ್ಟ ನಿಲುವಾಗಿದೆ.

ಕುವೆಂಪು ಅವರ ತಮ್ಮ ಕವಿತೆಗಳಲ್ಲಿ ಘನವಾದದನ್ನೇ ಹಿಡಿಯಲಿಕ್ಕೆ ಹೊರಟಿರುವ ನಿದರ್ಶನಗಳಿವೆಯೇ ಹೊರತು, ಅವರು ಇತರೆ ಸಾಮಾನ್ಯ ಮಕ್ಕಳ ಬಾಲ್ಯದ ಕುತೂಹಲಗಳಿಗೆ ಸಂಬಂಧಪಟ್ಟ ಮನೋವೈಜ್ಞಾನಿಕ ನೆಲೆಗಳ ಹಿನ್ನಲೆಗಳಲ್ಲಿ ಇಲ್ಲಿ ವಿಶ್ಲೇಷಣೆ ಮಾಡಲಾಗಿಲ್ಲ. ಕುವೆಂಪು ಅವರು ಆ ಕಾಲಘಟ್ಟದ ರಾಜಕೀಯ ನೆಲೆಗಳಲ್ಲಿ ಅವರ ಚಿಂತನೆಗಳನ್ನು ಗುರುತಿಸಬಹುದಾದ ಅವಕಾಶವಿದೆ. ಕುವೆಂಪು ಅವರ ಬಾಲ್ಯಾವಸ್ಥೆಯಲ್ಲಿ ಕನ್ನಡದ ಇತರ ಕವಿಗಳು ಬರೆದಂತಹ ಕವಿತೆಗಳು ಅವುಗಳ ಒಟ್ಟು ವ್ಯಾಪ್ತಿ ಮತ್ತು ಉದ್ದೇಶ ಮತ್ತು ಕುವೆಂಪು ಅವರ ಕಾವ್ಯಕ್ಕೆ ಹೋಲಿಸುವ ಒಂದು ತೌಲನಿಕವಾದ ಅಧ್ಯಯನವನ್ನು ಮಾಡಬಹುದು. ಅಧ್ಯಯನದ ಸಮಯದಲ್ಲಿ ಈ ಅಂಶಗಳನ್ನು ಗಮನಿಸಲು ಸಾಧ್ಯವಾಗಿಲ್ಲ.

* * * * * *

**ಕೊನೆ ಟಿಪ್ಪಣಿ:**

೧. ಕುವೆಂಪು ; ಸ್ವಾಮಿ ವಿವೇಕಾನಂದ ; ಪುಟ ೨೧೩, ಶ್ರೀ ರಾಮಕೃಷ್ಣಾಶ್ರಮ, ಮೈಸೂರು, ಹದಿನೇಳನೆಯ ಮುದ್ರಣ ೨೦೦೫.

೨. ದೇಜಗೌ ; ರಾಷ್ಟ್ರಕವಿ ಕುವೆಂಪು ; ಪುಟ ೩೫೦, ಪುಸ್ತಕ ಪ್ರಕಾಶನ, ಮೈಸೂರು, ಮೊದಲ ಮುದ್ರಣ, ೧೯೬೭.

* * * * * *

## ಅನುಬಂಧ – ೧

# ಆಕರ ಗ್ರಂಥಗಳು

೧. ಕುವೆಂಪು ; ನೆನಪಿನ ದೋಣಿಯಲ್ಲಿ, ಉದಯರವಿ ಪ್ರಕಾಶನ, ಮೈಸೂರು, ಹತ್ತನೆಯ ಮುದ್ರಣ – ೨೦೧೨.

೨. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಸಂ. ಶಿವಾರೆಡ್ಡಿ ಕೆ.ಸಿ., ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ. ಮುದ್ರಣ – ೨೦೦೦.

೩. ಕುವೆಂಪು ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಸಂ. ಶಿವಾರೆಡ್ಡಿ ಕೆ.ಸಿ., ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ. ಮುದ್ರಣ – ೨೦೦೦.

* * * * * *

## ಅನುಬಂಧ - ೨

## ಆಧಾರ ಗ್ರಂಥಗಳು

೧. ಆಮೂರ ಜಿ.ಎಸ್ ; ಕುವೆಂಪು ; ಯುಗದ ಕವಿ, ಮನೋಹರ ಗ್ರಂಥ ಮಾಲಾ, ಧಾರವಾಡ, ಮೊದಲನೆಯ ಮುದ್ರಣ - ೨೦೧೫ .

೨. ಇನಾಂದಾರ್ ವಿ.ಎಂ ; ಪಾಶ್ಚಾತ್ಯ ವಿಮರ್ಶೆಯ ಸಂಪ್ರದಾಯ ಯುಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೭.

೩. ಕರಿಗೌಡ ಬೀಚನಹಳ್ಳಿ ; ಷೇಕ್ಸ್‌ಪಿಯರ್‌ನ ಟೆಂಪೆಸ್ಟ್ ಒಂದು ಅಧ್ಯಯನ , ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮೊದಲನೆಯ ಮುದ್ರಣ - ೨೦೧೦.

೪. ಕಾಳಿದಾಸ ; ಮೇಘಸಂದೇಶ ; ಸಂ ಮಹಮಹೋಪಧ್ಯಾಯ ಮತ್ತು ಟಿ. ಗಣಪತಿ ಶಾಸ್ತ್ರಿ, ೧೯೧೯ ರಾಜಕೀಯ ಮುದ್ರಣ ಯಂತ್ರಾಲಯ, ತ್ರಿವೇಂಡ್ರಂ. (ಪಿಡಿಎಫ್)

೫. ಕುವೆಂಪು ; ನೆನಪಿನ ದೋಣಿಯಲ್ಲಿ: ಉದಯರವಿ ಪ್ರಕಾಶನ, ಮೈಸೂರು, ಹತ್ತನೆಯ ಮುದ್ರಣ ೨೦೧೨.

೬. ಕುವೆಂಪು ; ಮಲೆನಾಡಿನ ಚಿತ್ರಗಳು ; ಉದಯರವಿ ಪ್ರಕಾಶನ ವಾಣೀವಿಲಾಸಪುರಂ, ಮೈಸೂರು-೨, ಏಳನೆಯ ಮುದ್ರಣ - ೧೯೭೨.

೭. ಕುವೆಂಪು ; ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ ; ಉದಯರವಿ ಪ್ರಕಾಶನ, ಮೈಸೂರು, ಏಳನೆಯ ಮುದ್ರಣ - ೧೯೯೮. (ಮೊದಲನೆಯ ಮುದ್ರಣ - ೧೯೪೪)

೮. ಕುವೆಂಪು ; ಮಲೆಗಳಲ್ಲಿ ಮದುಮಗಳು ; ಉದಯರವಿ ಪ್ರಕಾಶನ, ಮೈಸೂರು, ಹತ್ತನೆಯ ಮುದ್ರಣ - ೨೦೦೪. (ಮೊದಲನೆಯ ಮುದ್ರಣ - ೧೯೬೭)

೯. ಕುವೆಂಪು ; ಶೂದ್ರ ತಪಸ್ವಿ ; ಉದಯರವಿ ಪ್ರಕಾಶನ, ಮೈಸೂರು, ಆರನೆಯ ಮುದ್ರಣ - ೧೯೯೭. (ಮೊದಲನೆಯ ಮುದ್ರಣ - ೧೯೪೪)

೧೦. ಕುವೆಂಪು ; ಸ್ವಾಮಿ ವಿವೇಕಾನಂದ ; ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೭ನೇ ಮುದ್ರಣ-೨೦೦೫.

೧೧. ಕುವೆಂಪು ; ಶ್ರೀ ರಾಮಕೃಷ್ಣ ಪರಮಹಂಸ ; ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ಹದಿನೈದನೆಯ ಮುದ್ರಣ ೨೦೧೬.

೧೨. ಗಾಂಧಿ ; ಆತ್ಮ ಕಥೆ ಅಥವಾ ನನ್ನ ಸತ್ಯಾನ್ವೇಷಣೆ ; ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಭಾ), ನವಜೀವನ ಪಬ್ಲಿಷಿಂಗ್ ಹೌಸ್, ಅಹಮದಬಾದ್ - ೧೯೯೫.

೧೩. ಗೂಗಿ ವಾಥಿಯಾಂಗೊ ; ವಸಾಹತು ಪ್ರಜ್ಞೆ ಮತ್ತು ವಿಮೋಚನೆ, ರಹಮತ್ ತರೀಕೆರೆ (ಅನು), ಬೆಳ್ಳಿಚಿಕ್ಕಿ ಬುಕ್ ಟ್ರಸ್ಟ್, ಮೈಸೂರು, ಮೊದಲ ಮುದ್ರಣ – ೧೯೯೬.

೧೪. ಗೋಕಾಕ್ ವಿ.ಕೃ ; ಚೆಲುವಿನ ನಿಲುವು, ಅಭಿನವ ಪ್ರಕಾಶನ, ಎರಡನೆಯ ಮುದ್ರಣ – ೨೦೧೮ (ಮೊದಲ ಮುದ್ರಣ – ೧೯೪೮)

೧೫. ಚೆನ್ನಬಸಪ್ಪ ಕೊ. ; ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ ಮತ್ತು ಸಾಮಾಜಿಕ ನಿಷ್ಠೆ, ಪುಟ ೯೨–೯೩, ನವ ಕರ್ನಾಟಕ ಪ್ರಕಾಶನ, ಮೊದಲ ಮುದ್ರಣ – ೨೦೦೪.

೧೬. ದ.ರಾ.ಬೇಂದ್ರೆ ; ಅಂಬಿಕಾತನಯದತ್ತ ಸಮಗ್ರ ಕಾವ್ಯ ವಿಕಾಸ ಸಂ–೩, ಸಂ. ವಾಮನ ಬೇಂದ್ರೆ, ಪುಟ ೨೮೯ (ನಾದಲೀಲೆ), ವರಕವಿ ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ.

೧೭. ದೇಜಗೌ ; ರಾಷ್ಟ್ರಕವಿ ಕುವೆಂಪು ; ಪುಸ್ತಕ ಪ್ರಕಾಶನ, ಮೈಸೂರು, ಮೊದಲ ಮುದ್ರಣ, ೧೯೬೭.

೧೮. ದೇಜಗೌ ; ರಾಷ್ಟ್ರಕವಿ ಸಂದರ್ಶನ ; ಸಹ್ಯಾದ್ರಿ ಪ್ರಕಾಶನ, ಮೈಸೂರು, ಮೊದಲ ಮುದ್ರಣ ೧೯೮೪,

೧೯. ನಾಗರಾಜ್.ಡಿ.ಆರ್ ; ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ೨೦೦೩, ಮೊದಲ ಮುದ್ರಣ – ೧೯೮೭.

೨೦. ನಾಗರಾಜ್.ಡಿ.ಆರ್ ; ಸಾಹಿತ್ಯ ಕಥನ ; ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ೨೦೦೬.

೨೧. ನಾಗಭೂಷಣ ಸ್ವಾಮಿ ಓ.ಎಲ್ ; ವಿಮರ್ಶೆಯ ಪರಿಭಾಷೆ ; ಅಂಕಿತ ಪುಸ್ತಕ, ಬೆಂಗಳೂರು, ಪರಿಷ್ಕೃತ – ವಿಸ್ತೃತ, ಪ್ರಥಮ ಆವೃತ್ತಿ – ೧೯೯೮.

೨೨. ಪೂರ್ಣಚಂದ್ರ ತೇಜಸ್ವಿ ಕೆ.ಪಿ. ; ಅಣ್ಣನ ನೆನಪು ; ಪುಸ್ತಕ ಪ್ರಕಾಶನ, ಮೈಸೂರು, ಮೊದಲ ಮುದ್ರಣ – ೧೯೯೬.

೨೩. ಪ್ರಭುಶಂಕರ ; ಕುವೆಂಪು ; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಮೊದಲ ಮುದ್ರಣ – ೧೯೯೫

೨೪. ಪ್ರಭುಶಂಕರ ; ಹೀಗಿದ್ದರು ಕುವೆಂಪು ; ಡಿ.ವಿ.ಕೆ. ಮೂರ್ತಿ, ಮೈಸೂರು, ಎರಡನೇ ಮುದ್ರಣ – ೨೦೦೪ (ಮೊದಲ ಮುದ್ರಣ – ೨೦೦೨)

೨೫. ಮಾಸ್ತಿ ವೆಂಕಟೇಶ ಅಯ್ಯಂಗಾರ್ , ಭಾವ ೧ ; ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್ (ರಿ.), ಬೆಂಗಳೂರು. ಎರಡನೇ ಮುದ್ರಣ – ೧೯೮೯ (ಮೊದಲ ಮುದ್ರಣ – ೧೯೬೮)

೨೬. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಭಾವ ೨ ; ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್ (ರಿ.), ಬೆಂಗಳೂರು. ಎರಡನೇ ಮುದ್ರಣ – ೧೯೯೦ (ಮೊದಲ ಮುದ್ರಣ – ೧೯೬೯)

೨೭. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಭಾವ ೩ ; ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್ (ರಿ.), ಬೆಂಗಳೂರು. ಎರಡನೇ ಮುದ್ರಣ – ೧೯೯೦ (ಮೊದಲ ಮುದ್ರಣ – ೧೯೬೯)

೨೮. ಮೋಹನ್‌ದಾಸ್ ಕರಮ್‌ಚಂದ ಗಾಂಧಿ ; ಹಿಂದು ಸ್ವರಾಜ್ಯ, ಗಾಂಧೀ ಸ್ಮಾರಕ ನಿಧಿ, ಗಾಂಧೀ ಭವನ, ಬೆಂಗಳೂರು, ಐದನೇ ಮುದ್ರಣ – ೨೦೦೮.

೨೯. ರವೀಂದ್ರನಾಥ ಠಾಕೂರ್ ; ನಿಬಂಧ ಮಾಲಾ ಭಾಗ– ೧, ಸ್ವಾಮಿ ಶಂಕರಾನಂದ ಸರಸ್ವತಿ (ಅನು), ಸಾಹಿತ್ಯ ಅಕಾಡೆಮಿ, ನವದೆಹಲಿ, ಎರಡನೆಯ ಆವೃತ್ತಿ ೧೯೯೬ (ಮೊದಲ ಆವೃತ್ತಿ – ೧೯೬೬)

೩೦. ರಾಜೇಗೌಡ ಹ.ಕ (ಸಂ) ; ರಾಷ್ಟ್ರಕವಿ, ಜಯಶ್ರೀ ಟ್ರಸ್ಟ್, ಬೆಂಗಳೂರು, ೧೯೮೧.

೩೧. ಶಂಕರ ಮೊಕಾಶಿ ಪುಣೇಕರ್ ; ಅಪೂರ್ಣ ವರ್ತಮಾನ ಕಾಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೫.

೩೨. ಶಿವರುದ್ರಪ್ಪ ಜಿ.ಎಸ್ ; ಕುವೆಂಪು ಪುನರಾಲೋಕನ, ಅಂಕಿತ ಪುಸ್ತಕ, ಬೆಂಗಳೂರು, ೨೦೦೫.

೩೩. ಶಿವರುದ್ರಪ್ಪ ಜಿ.ಎಸ್, (ಸಂ) ; ಶ್ರೀ ಕುವೆಂಪು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಮೂರನೇ ಮುದ್ರಣ – ೨೦೦೩ (ಮೊದಲ ಮುದ್ರಣ – ೧೯೮೦)

೩೪. ಶಿವಾರೆಡ್ಡಿ ಕೆ.ಸಿ, ಸೋಮಶೇಖರ್ ಎಸ್.ವೈ. (ಸಂ), ಕುವೆಂಪು ವಿಚಾರಧಾರೆಯ ಪ್ರಸ್ತುತತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮೊದಲ ಮುದ್ರಣ – ೨೦೦೪.

೩೫. ಶಿವಾರೆಡ್ಡಿ ಕೆ. ಸಿ ; ಕನ್ನಡದ ಹಾಡುಪಾಡು, ಅಧ್ಯಯನ ಮಂಡಲ, ಬೆಂಗಳೂರು, ಮೊದಲ ಮುದ್ರಣ – ೨೦೦೩.

೩೬. ಶಿವಾರೆಡ್ಡಿ ಕೆ.ಸಿ ; ಬೇಂದ್ರೆ ಕುವೆಂಪು ವಿರಾಟ್ ದರ್ಶನ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಮೊದಲ ಮುದ್ರಣ – ೨೦೧೭.

೩೭. ನಾಗತಿಹಳ್ಳಿ ಚಂದ್ರಶೇಖರ್ ಅವರ ಸಾವು ಎಂಬ ಲೇಖನ, ಪ್ರಜಾವಾಣಿ ಪತ್ರಿಕೆ, ದಿನಾಂಕ – ೨.೩.೨೦೧೪ರಂದು.

೩೮. ಶಿವಾರೆಡ್ಡಿ ಕೆ.ಸಿ ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ ; ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ. ಮೊದಲನೆಯ ಮುದ್ರಣ – ೨೦೦೦.

೩೯. ಶಿವಾರೆಡ್ಡಿ ಕೆ.ಸಿ ; ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ ; ಪ್ರಸಾರಾಂಗ, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ. ಮೊದಲನೆಯ ಮುದ್ರಣ – ೨೦೦೦.

೪೦. ಶಿವಾರೆಡ್ಡಿ ಕೆ.ಸಿ ; ಕುವೆಂಪು ಸಮಗ್ರ ಗದ್ಯ ಸಂಪುಟ – ೧, ಪ್ರಸಾರಾಂಗ, ಮೊದಲನೆಯ ಮುದ್ರಣ ೨೦೦೩.

೪೧. ಶಿವಾರೆಡ್ಡಿ ಕೆ.ಸಿ ; ಕುವೆಂಪು ಸಮಗ್ರ ಗದ್ಯ ಸಂಪುಟ – ೧, ಪ್ರಸಾರಾಂಗ, ಮೊದಲನೆಯ ಮುದ್ರಣ, ೨೦೧೩.

೪೨. ಸ್ವಾಮಿ ವಿವೇಕಾನಂದ ; ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ ಸಂ–೨, ನಾಲ್ಕನೆಯ ಮುದ್ರಣ. ೨೦೦೬.

೪೩. ಸೀತಾರಾಮಯ್ಯ ಕೆ.ಎಂ ; ಗ್ರೀಕ್ ಮಿಥಕಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಮೊದಲನೆಯ ಮುದ್ರಣ – ೧೯೯೭.

೪೪. Byrd Howell Granger ; Romantic traces in the Ecclesiastical Sonnets of William Wordsworth (Thesis Submitted on 1952), Page 66, University of Arizona. (Pdf)

೪೫. John Milton; Milton Poetry and Prose ; with Essays by Johnson Hazlitt Macaulay, First Edition - 1920, Great Britain at the University Press, Oxford. (Pdf)

೪೬. Thomos Gray ; The Poetical Works of Thomas Gray ; Published by Jhon Sharpe - 1826, London. (Pdf)

೪೭. William Wordsworth and Coleridge ; Lyrical Ballads, Edited by R. L, Brett and A.R. Jones. 2nd Edition. (Pdf)

೪೮. William Wordsworth ; William Wordsworth Poems (Classic Poetry Series) ; Poemhunter.com – The World's Poetry Archive - (2004). (Pdf)

೪೯. William Wordsworth ; Intimations of Immortality ; First Edition 1884, D Lothrop co, Boston. (Pdf)

೫೦. William Wordsworth ; Lines written a few lines above "Tintern Abbey" ; Shmoop University Inc, 2010. (Pdf)

೫೧. William Butler Yeats ; The Collected Poems ; 1889-1939. (Pdf)

೫೨. William Shakespeare ; Romeo And Juliet ; Volume IV Book IX. (Pdf)

* * * * * *